University of Mysore.

ORIENTAL LIBRARY PUBLICATIONS
KANNADA SERIES No. 18



# ಅನಂತನಾಥ ಪುರಾಣಂ

ಜನ್ನಕವಿ ಕೃತಂ

# ANANTANATHAPURANAM

BY

JANNA

EDITED BY

D. SRINIVASACHAR, M.A.,
*Professor of Sanskrit, Maharaja's College and Curator Government Oriental Library, Mysore*

AND

H. R. RANGASWAMY IYENGAR, M.A.,
*Specialist in Kannada, Government Oriental Library, Mysore*



MYSORE
PRINTED AT THE GOVERNMENT BRANCH PRESS
1930

# ವಿಷಯಸೂಚಿಕೆ

---



# ಭೂಮಿಕೆ.

ಈ ಗ್ರಂಥವು ನಾಲ್ಕು ಪ್ರತಿಗಳ ಸಹಾಯದಿಂದ ಮುದ್ರಿತವಾಯಿತು. ಇವುಗಳಲ್ಲಿ ಒಂದು ಕ ಎಂಬ ಓಲೆಯ ಪ್ರತಿ. ಇದು ಅರಮನೆ ಜಿನಚಂದ್ರಪಂಡಿತರದು. ಇದು ಅಷ್ಟು ಶುದ್ಧವಾದುದಲ್ಲ. ಇದರಲ್ಲಿ "ಱ" ಎಂಬಕ್ಷರವಿದೆ. ಈ ಪ್ರತಿಯು ಕೊನೆಯಲ್ಲಿ ಹೀಗೆಂದು ಬರೆದಿದೆ. "ಶಕಸಂವತ್ಸರಗಳಲ್ಲಿ ೧೬೩೮ನೆಯ ಹೇವಿಳಂಬಿ ಸಂವತ್ಸರದ ಆಷಾಢ ಶು ೧೦ ಸ್ತಿರವಾರ ಪಡಣದ ದೇವಚಂದ್ರಯ್ಯನವರ ಮಗ ಪಿಜ್ಜೈಯ್ಯನು ನಗರ್ಲೆ ದೇವರಸಯ್ಯನವರ ಮಗ ಬೊಮ್ಮರಸಯ್ಯನವರಿಗೆ ಅನಂತನಾಥಪುರಾಣವನ್ನು ಬರೆದನು".

ಎರಡನೆಯದು, ನಮ್ಮ ಪ್ರಾಚ್ಯಕೋಶಾಗಾರದಲ್ಲಿರುವ ಗ ಎಂಬ ಕಾಗದದ ಪ್ರತಿ. ಇದು ಈಚಿನದು. ಇದರಲ್ಲಿ ಅನೇಕಕಡೆ ಗ್ರಂಥಪಾತವಿದೆ. ಇದೂ ಶುದ್ಧವಾದ ಪ್ರತಿಯಲ್ಲ.

ಮೂರು ನಾಲ್ಕನೆಯವು, ಚ, ಜ, ಪ್ರತಿಗಳು. ಇವು ಶ್ರವಣಬೆಳ್ಗೊಳದ ಜೈನಮಠಾಧಿಕಾರಿಗಳು ಕಳುಹಿಸಿಕೊಟ್ಟ ಓಲೆಯ ಪ್ರತಿಗಳು. ನಮ್ಮಲ್ಲಿರುವ ಕಾಗದದ ಪ್ರತಿಯು ಚ ಪ್ರತಿಯ ಮೇಲೆ ಹುಟ್ಟಿರುವಂತೆ ತೋರುವುದು. ಈ ಚ ಪ್ರತಿಯೂ ಅಷ್ಟು ಶುದ್ಧವಾಗಿಲ್ಲ ಇದನ್ನು ಶಕ ೧೪೪೦ ರಲ್ಲಿ ಬರೆದುದಾಗಿ ಪ್ರತಿಯ ಕೊನೆಯಲ್ಲಿ ಹೇಳಿವೆ.[1] ಜೈನಮಠದಿಂದ ಬಂದ ಜ ಪ್ರತಿಯು ಎಲ್ಲಕ್ಕಿಂತ ಶುದ್ಧವಾಗಿದ್ದರೂ ಅಸಮಗ್ರವಾದುದು. ಇದರಲ್ಲಿ ಮೊದಲಿಂದ ಹನ್ನೆರಡು ಆಶ್ವಾಸಗಳು ಮಾತ್ರ ಇವೆ. ಇಷ್ಟು ಪ್ರತಿಗಳ ಸಹಾಯವಿದ್ದರೂ ಅನೇಕ ಕಡೆ ಗ್ರಂಥವು ಅರ್ಥವಾಗದೆ ಇದ್ದುದನ್ನೇ ನಿರ್ವಾಹವಿಲ್ಲದೆ ಮುದ್ರಿಸಬೇಕಾಯಿತು ಬುದ್ಧಿಬಲದಿಂದ ಗ್ರಂಥವನ್ನು ತಿದ್ದಬಹುದಾಗಿದ್ದರೂ ಮಾತೃಕೆಯಲ್ಲಿದ್ದಂತೆ ಪ್ರಕಾಶಿಸುವುದು ಕಾವ್ಯಪ್ರಚಾರಕನ ಧರ್ಮ

---

1 "ಸ್ವಸ್ತಿಶಕ ವರ್ಷ ೧೪೪೦ ಸಂದ ವರ್ತಮಾನ ಬಹುಧಾನ್ಯ ಸಂವತ್ಸರದ ಭಾದ್ರಪದ ಬಹುಳ ಚಂದ್ರವಾರದ್ದಿನ ಸಂಕೀಘಟ್ಟದಲ್ಲಿಹ ಮಾಳಿಗೆ ಮಲ್ಲಿಸೆಟ್ಟಿಯವರ ಮಕ್ಕಳು ಗುರುವಪ್ಪಸೆಟ್ಟಿಯವರಿಗೆ ಉಮತೂರ ಚಿಕತಂಮ್ಮನು ಬರೆದ ಅನಂತನಾಥ ಪುರಾಣಕ್ಕೆ ಮಂಗಳಮಹಾ ಶ್ರೀ ಶ್ರೀ."

ವೆಂದೆಣಿಸಿ ಇದ್ದುದನ್ನು ಇದ್ದಂತೆ ಮುದ್ರಿಸಿರುತ್ತೇವೆ. ಕಾವ್ಯಾಭಿಜ್ಞರು ಗುಣೈಕ ಪಕ್ಷಪಾತಿಗಳಾಗಿ ದೋಷವನ್ನು ಲಕ್ಷಿಸದೆ ಈ ಕಾವ್ಯದ ರಸವನ್ನನುಭವಿಸಿ ಆನಂದಪಡಬೇಕಾಗಿ ಪ್ರಾರ್ಥಿಸುತ್ತೇವೆ.

ಈ ಗ್ರಂಥದ ಓಲೆಯ ಪ್ರತಿಗಳನ್ನು ಎರವಾಗಿ ಕೊಟ್ಟ ಮ॥ ರಾ॥ ಅರಮನೆ ಜಿನಚಂದ್ರಪಂಡಿತರಿಗೂ, ಶ್ರವಣಬೆಳ್ಗೊಳದ ಜೈನ ಮಠಾಧಿಕಾರಿಗಳಿಗೂ ನಾವು ಕೃತಜ್ಞರಾಗಿದ್ದೇವೆ. ಈ ಗ್ರಂಥದ ಶೋಧನ ಕಾರ್ಯದಲ್ಲಿ ಶ್ರೀಮಾನ್ ಮ॥ ಆ. ರಾಮಾನುಜೈಯ್ಯಂಗಾರ್ಯರು ಮಾಡಿದ ಸಾಹಾಯ್ಯವು ಚಿರಸ್ಮರಣೀಯವಾಗಿದೆ.

———

ವಂಶ - ಕಲಿಂಗ ಗೋತ್ರ - ಕಾಶ್ಯಪ

ಶಂಕರ + ಗಂಗಾದೇವಿ

ಜನ್ನ — ಲಕ್ಷ್ಮಾದೇವಿ

# ಮುನ್ನುಡಿ.

ಈ ಗ್ರಂಥಕರ್ತನಾದ ಜನ್ನನು, "ಕವಿಚಕ್ರವರ್ತಿ" ಯೆಂಬ ಬಿರುದನ್ನು ಪಡೆದು ಕನ್ನಡವಾಙ್ಮಯನ್ನು ಅಲಂಕರಿಸಿದ ಕವಿಶ್ರೇಷ್ಠನು. ಇವನು ಜೈನನು; ಕಮ್ಮೆವಂಶದ ಕಾಶ್ಯಪಗೋತ್ರದ ಶಂಕರನ ಮಗನು. ಇವನ ತಾಯಿ ಗಂಗಾದೇವಿ ಮತ್ತು ಇವನ ಹೆಂಡತಿ "ರಾಯ ದಂಡಾಧಿನಾಥ ಕೃತಾಂತಂ ರೇಚಯಂ ಪೆತ್ತಪುತ್ರಿ ಲಕುಮಾದೇವಿ" [1] ಎಂದೂ ಇವನ ಕಾವ್ಯಗಳಿಂದಲೇ ತಿಳಿಯಬಹುದು. ಇವನು ತನ್ನ ಚಿಕ್ಕವಯಸ್ಸಿನಲ್ಲಿಯೇ ಜಗದೇಕ ಮಲ್ಲನಲ್ಲಿ ಕಟಕೋಪಾಧ್ಯಾಯನಾಗಿ ಅಭಿನವ ಶರ್ವವರ್ಮನೆಂಬ ಬಿರುದನ್ನು ಪಡೆದಿದ್ದ ನಾಗವರ್ಮನಿಗೆ [2] ಶಿಷ್ಯನಾಗಿ ವಿದ್ಯೆಯನ್ನು ಕಲಿತು, ತರ್ಕ, ವ್ಯಾಕರಣ, ಸಾಹಿತ್ಯ, ನಾಟ್ಯ ಇವೇ ಮೊದಲಾದ ಶಾಸ್ತ್ರಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದುದಾಗಿ ಹೇಳಿಕೊಂಡಿರುವನು [3].

ಜನ್ನನು ಈಗಿನ ವಿದ್ಯಾರ್ಥಿಗಳಂತೆ ಶಾಸ್ತ್ರಾಭ್ಯಾಸವೊಂದರಲ್ಲಿಯೇ ದೃಷ್ಟಿಯಿಟ್ಟಿರಲಿಲ್ಲ. ಇವನು ದೃಢಕಾಯನೂ, ಧೈರ್ಯಶಾಲಿಯೂ ಆಗಿದ್ದುದರಿಂದ ಶಾಸ್ತ್ರಪ್ರಾವೀಣ್ಯಕ್ಕೆ ಅನುಗುಣವಾಗಿ ಶಸ್ತ್ರದಲ್ಲಿಯೂ ವಿಶೇಷ ಶಿಕ್ಷೆಹೊಂದಿ ಅದರಲ್ಲಿಯೂ ಪ್ರಾವೀಣ್ಯವನ್ನು ಪಡೆದಿದ್ದನು. ಹೀಗೆ ಶಸ್ತ್ರಶಾಸ್ತ್ರಗಳೆರಡರಲ್ಲಿಯೂ ಅದ್ಭುತಪಾಂಡಿತ್ಯವನ್ನು ಪಡೆದ ಇವನ ಪ್ರಭಾವವು ಲೋಕದಲ್ಲೆಲ್ಲಾ ಪ್ರಸರಿಸಿ ಆಗ ಆಳುತ್ತಿದ್ದ ರಾಜನ ಕಿವಿಯನ್ನುಮುಟ್ಟಿತು. ದೊರೆಯು ಇವನ ನೀತಿನೈಪುಣ್ಯಕ್ಕೂ ಶಸ್ತ್ರಕುಶಲತೆಗೂ ಮೆಚ್ಚಿ ಇವನನ್ನು ತನ್ನ ಮಂತ್ರಗೋಷ್ಠಿಗೆ ಸೇರಿಸಿಕೊಂಡುದಲ್ಲದೆ ಒಬ್ಬ ದಂಡಾಧೀಶನನ್ನಾಗಿಯೂ ನೇಮಿಸಿದನು. [4]

ಜನ್ನನಿಗೆ ಎಲ್ಲಾ ಕಲೆಗಳಲ್ಲಿಯೂ ಬುದ್ಧಿಯನ್ನು ನುಗ್ಗಿಸುವ ಸಾಮರ್ಥ್ಯವಿದ್ದರೂ ಕಾವ್ಯಕಲೆಯಲ್ಲಿ ವಿಶೇಷ ಅಭಿಮಾನವಿದ್ದಂತೆ ಕಂಡುಬರುವುದು. ಚಿಕ್ಕವಯಸ್ಸಿನಲ್ಲಿಯೇ ಇವನಿಗೆ ಕವಿತಾದೇವಿಯು ಒಲಿದಿದ್ದಳು. ಇದಕ್ಕೆ ಈತನು ಬರೆದಿರುವ ಶಾಸನಗಳೇ ನಿದರ್ಶನವಾಗಿವೆ. ಹೀಗೆ ಬಾಲ್ಯದಲ್ಲಿಯೇ ಆತನಲ್ಲಿ

---

[1] ಅ. ಪು iv, 136, 137; xiv. 75, i, 26.

[2] ಅ. ಪು. i, 34.

[3] ಯ. ಶೋ. i; 18, 19.

[4] ಅ. ಪು. i, 54, 56, xiv. 81; ಯಶೋ i, 20.

ಅಂಕುರಿಸಿದ ಕವಿತಾಶಕ್ತಿಯು ಆತನ ಸ್ವಂತ ವ್ಯವಸಾಯದಿಂದ ಶೀಘ್ರದಲ್ಲಿಯೇ ಲತೆಯಾಗಿ, ಯಶೋಧರ ಚರಿತೆ, ಅನಂಥನಾಥ ಪುರಾಣಗಳೆಂಬ ಪುಷ್ಪಗಳನ್ನು ಬಿಟ್ಟು, ರಸಿಕರ ಮನಸ್ಸನ್ನು ಆಕರ್ಷಿಸಿ, ಅವರು ಅವುಗಳ ರಸವನ್ನು ಪಾನ ಮಾಡಿ ಹೆಮ್ಮೆಯಿಂದ ಝೇಂಕರಿಸುವಂತೆ ಮಾಡಿತು. ಆಗಿನ ದೊರೆಯಾಗಿದ್ದ ವೀರ ಬಲ್ಲಾಳನೂ ಈತನ ಕವಿತಾಪುಷ್ಪದ ರಸವನ್ನು ಆಸ್ವಾದನೆಮಾಡಿ ತೃಪ್ತನಾಗಿ ಆತನನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಆತನಿಗೆ "ಕವಿ ಚಕ್ರವರ್ತಿ" ಎಂಬ ಬಿರುದನ್ನಿತ್ತು ವಿಶೇಷ ಮರ್ಯಾದೆಯನ್ನು ಮಾಡಿದನು.

ಕನ್ನರ ನಾದರದಿಂ ಕುಡೆ
ಹೊನ್ನಂ, ಮನವೊಸೆದು ತೈಲಪಂ ಕುಡೆ ರನ್ನಂ!
ಮನ್ನಿಸಿ ಬಲ್ಲಾಳಂ ಕುಡೆ
ಜನ್ನಂ, ಕವಿಚಕ್ರವರ್ತಿವೆಸರಂ ಪಡೆದಂ ॥

ಯಶೋ. i. 21.

ಈ ಕವಿಯು ತನಗೆ ಜನ್ನನೆಂಬ ಹೆಸರಲ್ಲದೆ, ಜನಾರ್ದನ, ಜನ್ನಮರಸ, ಜನ್ನಮಯ್ಯ, ಜನ್ನಿಗ, ಜಾನಕಿ, ಎಂಬ ಹೆಸರುಗಳೂ ತನ್ನ ಕವಿತಾ ಸಾಮರ್ಥ್ಯ ಪ್ರದರ್ಶಕಗಳಾದ, ಕವಿಬಾಳಲೋಚನ, ರಾಜವಿದ್ವತ್ಸಭಾಕಳಹಂಸ, ಸಾಹಿತ್ಯರತ್ನಾಕರ, ವಿನೇಯಜನಮುಖತಿಲಕ, ಎಂಬ ವಿಶೇಷಣಗಳೂ ಇದ್ದುವೆಂದು ತನ್ನ ಗ್ರಂಥಗಳಲ್ಲಿಯೇ ಹೇಳಿರುತ್ತಾನೆ.

ಈತನಿಗೆ ಕವಿತ್ವದಲ್ಲಿ ಇದ್ದ ಹಾಗೆಯೇ ಆತ್ಮೋಜ್ಜೀವನಕ್ಕೆ ಬೇಕಾದ ವಿದ್ಯೆಯಲ್ಲಿಯೂ ಅಭಿರುಚಿ ಇತ್ತು. ಆದಕಾರಣ ಈತನು ಆ ಕಾಲದಲ್ಲಿ ಜೈನಮತದಲ್ಲಿ ಹೆಸರು ಪಡೆದ ಕಾಣೂರ್ಗಣ ಮಾಧವ ಚಂದ್ರತ್ರೈವಿದ್ಯನ ಶಿಷ್ಯನಾದ ಗಂಡ ವಿಮುಕ್ತ ರಾಮಚಂದ್ರ ಮುನಿವರ್ಯನ ಪಾದವನ್ನು ಹಿಡಿದು ಅವನಲ್ಲಿ ಜೈನಮತವನ್ನು ಕೂಲಂಕಷವಾಗಿ ತಿಳಿದುಕೊಂಡನು [7] ಹೀಗೆ ಜನ್ನನು ಮತವಿಚಾರದಲ್ಲಿ ಅನ್ಯಾದೃಶವಾದ ಪಾಂಡಿತ್ಯವನ್ನು ಪಡೆದು ಮತೋದ್ಧಾರಕ್ಕಾಗಿಯೇ ತನ್ನ ಬುದ್ಧಿಶಕ್ತಿ, ಕಾಯಶಕ್ತಿ, ಕವಿತಾಶಕ್ತಿ ಮತ್ತು ಧನಸಂಪತ್ತಿ, ಇವುಗಳೆಲ್ಲವನ್ನೂ ದಾನ ಮಾಡಿದನು. ಇದಕ್ಕೆ ಇವನು ಮಾಡಿರುವ ಕಾರ್ಯಗಳೇ ನಿದರ್ಶನಗಳಾಗಿವೆ.

ಲೋಕದಲ್ಲಿ ಸಾಮಾನ್ಯವಾಗಿ ಕವಿತ್ವಕ್ಕೂ ಬಡತನಕ್ಕೂ ಪರಸ್ಪರ ಸಂಬಂಧವುಂಟು ; ಕವಿತ್ವವಿರುವ ಕಡೆ ಬಡತನವಿಲ್ಲದೇ ಇರದು. ಜನ್ನನು ಕವಿಯಾದರೂ

---

[7] ಅ. ಪು. i. 25.

ಬಡತನಕ್ಕೆ ಸಿಕ್ಕಿ ನರಳಲಿಲ್ಲ. ಒಂದುದಿನವಾದರೂ ಮತ್ತೊಬ್ಬರನ್ನು ಕೈಯೊಡ್ಡಿ ಕೇಳಿದವನಲ್ಲ.[8] ಈತನಿಗೆ ಸರಸ್ವತಿ ಒಲಿದಂತೆ ಲಕ್ಷ್ಮಿಯೂ ಒಲಿದಿದ್ದಳು. ಇದಕ್ಕೆ ಈತನು ಹೆಮ್ಮೆ ಪಡಲಿಲ್ಲ. ಇವನು ಬಹಳ ಉದಾರಿಯಾದುದರಿಂದ ಪರರ ಹಿತವನ್ನೇ ಬಯಸುತ್ತ ಅನೇಕರಿಗೆ ದಾನಧರ್ಮಗಳನ್ನು ಮಾಡುತ್ತಿದ್ದನು [9] ಇಷ್ಟೇಅಲ್ಲದೆ ತನಗೆ ಬಂದ ಹಣವನ್ನು ಮತಪ್ರಚಾರಕ್ಕಾಗಿ ವಿನಿಯೋಗಿಸುವುದು ಶ್ರೇಯೋವಹವೆಂದು ನಂಬಿ ಈತನು ಗಂಡರಾದಿತ್ಯನ ಪೊಳಲಲ್ಲಿ ಅನಂಥನಾಥನ ಬಸದಿಯನ್ನು ಸ್ವಂತ ಹಣದಿಂದ ಕಟ್ಟಿಸಿಯೂ, ದ್ವಾರಸಮುದ್ರದಲ್ಲಿ ವಿಜಯಪಾರ್ಶ್ವಜಿನೇಶ್ವರನ ಬಸದಿಯ ದ್ವಾರವನ್ನು ಮಾಡಿಸಿಯೂ ತನ್ನ ಔದಾರ್ಯವನ್ನೂ, ಜಿನಮತ ನಿಷ್ಠೆಯನ್ನೂ ಪ್ರಕಾಶಪಡಿಸಿದನು. [10]

ಈತನು ಆರ್ಜಿಸಿದ ಬುದ್ಧಿಶಕ್ತಿಯನ್ನೂ ಜಿನಮತಪ್ರಚಾರಕ್ಕಾಗಿಯೇ ವಿನಿಯೋಗಿಸಿದನು ಇವನು ಬರೆದಿರುವ **ಯಶೋಧರ ಚರಿತೆ**, **ಅನಂಥನಾಥ ಪುರಾಣ**, ಎಂಬೆರಡು ಪ್ರಬಂಧಗಳೂ ಮುಂದೆ ವಿವರಿಸುವಂತೆ, ಜೈನಧರ್ಮೋಪದೇಶಕ್ಕಾಗಿಯೇ ಬರೆಯಲ್ಪಟ್ಟುವಾಗಿ ಕಂಡುಬರುತ್ತವೆ ಇವುಗಳಲ್ಲಿ ಮುಖ್ಯವಾದ ಅನಂತನಾಥ ಪುರಾಣವನ್ನು ಜಿನಭಕ್ತನಾದ ತನಗೆ ಬರೆಯುವುದು ಕರ್ತವ್ಯವೆಂದೆಣಿಸಿ ಬರೆದುದಾಗಿ ಇವನು ಹೇಳಿಕೊಂಡಿರುವನು.

## ಗ್ರಂಥವಿಚಾರ.

**ಯಶೋಧರ ಚರಿತ್ರೆಯು** ಒಂದು ವರ್ಣಕ ಪ್ರಬಂಧ. ಇದರಲ್ಲಿ ಗದ್ಯವೇ ಇಲ್ಲ. ಎಂಟು ವೃತ್ತಗಳು ಹೊರತು ಉಳಿದುವೆಲ್ಲಾ ಕಂದಪದ್ಯಗಳೇ ಈ ಕಾವ್ಯದಲ್ಲಿ ಜೈನರ ಪಂಚಮಹಾವ್ರತಗಳಲ್ಲಿ ಮುಖ್ಯವಾದ ಅಹಿಂಸಾ ವ್ರತದ ಮಹಿಮೆಯನ್ನು ಕವಿಯು ವರ್ಣಿಸಿ, "ಅಹಿಂಸಾ ಪರಮೋ ಧರ್ಮಃ" ಎಂಬ ಮೂಲಮಂತ್ರವನ್ನು ಪಾಠಕರ ಹೃದಯಕ್ಕೆ ನಾಟುವಂತೆ ಉಪದೇಶಿಸಿದ್ದಾನೆ ಈ ಗ್ರಂಥವನ್ನು ವೀರಬಲ್ಲಾಳನ ಆಳಿಕೆ (1173–1220) ಶಕ್ಲವರ್ಷದಲ್ಲಿ ಎಂದರೆ 1209ರಲ್ಲಿ ಬರೆದಂತೆ ಹೇಳಿದೆ

---

[8] ಅ. ಪು.! 51, xiv. 80; ಯಶೋ i. 20, iv. 86.

[9] ಅ. ಪು. i. 51, xiv 80, 81; ಯಶೋ iv. 86.

[10] ಅ. ಪು. xiv. 82, 83.

ಶ್ರೀಗಿರಿದುರ್ಗಮಲ್ಲನೃಪರಾಜ್ಯದ ವತ್ಸರಮುತ್ತರೋತ್ತರ
ಕ್ಕಾಗಿರೆ ಶುಕ್ಲದಾಶ್ವಯುಜಕೃಷ್ಣದ ಪಂಚಮಿಪೂರ್ಣಪುಷ್ಯತಾ
ರಾಗುರುವಾಗೆ ಭೂತಳದೊಳೀಕೃತಿ ಪೆತ್ತುದು ಸುಪ್ರತಿಷ್ಠೆಯಂ
ಚಾಗದ ದಾನದಗ್ಗಳಿಕೆಯಂ ಪಡೆದಂ ಕವಿಫಾಳಲೋಚನಂ॥

(ಯಶೊ iv 87

ಅನಂತನಾಥಪುರಾಣವೆಂಬುದು ಒಂದು ಜೈನ ಚಂಪೂಕಾವ್ಯ ಇದರಲ್ಲಿ ಜೈನರ ೨೪ ತೀರ್ಥಂಕರರಲ್ಲಿ ೧೪ನೆಯವನಾದ ಅನಂತಜಿನನ ಮತ್ತು ಆತನ ವಂಶಕ್ಕೆ ಸೇರಿದ ಸುಪ್ರಭ ಪುರುಷೋತ್ತಮರೆಂಬ ಬಲದೇವ ವಾಸುದೇವರ ಚರಿತ್ರೆಯೂ, ಪ್ರತಿವಾಸುದೇವನಾದ ಮಧುಕೈಟಭನ ಚರಿತ್ರೆಯೂ, ಅನ್ಯಮತೀಯರಿಗೆ ಜೈನ ಪುರಾಣಕಾವ್ಯದಲ್ಲಿ ಅಭಿರುಚಿಯುಂಟಾಗುವ ಹಾಗೆಯೂ ಜೈನ ಮತ ಪ್ರವಿಷ್ಟರಿಗೆ ಜಿನಭಕ್ತಿ ಹುಟ್ಟುವಂತೆಯೂ ವರ್ಣಿತವಾಗಿವೆ. ಯಶೋಧರ ಚರಿತ್ರೆಯಲ್ಲಿರುವ ಹಲವು ಪದ್ಯಗಳು ಈ ಕಾವ್ಯದಲ್ಲಿ ಪುನರುಕ್ತವಾಗಿರುವುದರಿಂದ ಈ ಕಾವ್ಯವನ್ನು ಜನ್ನನು ಆ ವರ್ಣಕಪ್ರಬಂಧವನ್ನು ಬರೆದಮೇಲೆ ರಚಿಸಿರಬೇಕೆಂದು ತಿಳಿಯುತ್ತದೆ. ಇದಕ್ಕೆ "ಸುಪ್ರತಿಷ್ಠೆ" ಯನ್ನು ದೋರಸಮುದ್ರದ ಪಾರ್ಶ್ವಜಿನೇಶ್ವರ ದ್ವಾರದ ಮುಂದೆ ಶಕಸಂವತ್ಸರ 1152ರಲ್ಲಿ ಎಂದರೆ ವೀರಬಲ್ಲಾಳನ ಮಗ ವೀರನರಸಿಂಹನ (1220–1235) ಆಳಿಕೆಯ ವಿಕೃತಿ ವರ್ಷದಲ್ಲಿ ಮಾಡಿದುದಾಗಿ ಈ ಗ್ರಂಥದ ಕೊನೆಯಲ್ಲಿ ಬರೆದಿದೆ.

ಶಕಸಂವತ್ಸರ ಮಂದುಸಾಸಿರದ ನೂಱೈವತ್ತೆರಡಪ್ಪಿನಂ
ವಿಕೃತಾಬ್ದಂ ಬರೆ ಚೈತ್ರಶುದ್ಧ ದಶಮೀ ದೇವೇಜ್ಯನೊಳ್ಪುಷ್ಯತಾ
ರಕದೊಳ್ಮಾಡಿಸಿದಂ ಪ್ರತಿಷ್ಠೆಯನನಂತಶ್ರೀಪುರಾಣಕ್ಕೆ ಕ
ರ್ಮ್ಮಕುಲಾಂಭೋರುಹಭಾನು ಜನ್ನಮರಸಂ ಸಾಹಿತ್ಯರತ್ನಾಕರಂ ॥

ಅ, xiv 84

ಅನಂತಜಿನನ ಕಥೆಯನ್ನು ಗುಣಭದ್ರಾಚಾರ್ಯರು ಜೈನರ ಉತ್ತರ ಪುರಾಣದ ಅರವತ್ತನೆಯ ಪರ್ವದಲ್ಲಿ ಬರೆದಿರುವರು. ಸಂಸ್ಕೃತ ಪದ್ಯ ರೂಪದಲ್ಲಿರುವ ಈ ಕಥೆಯನ್ನು ಚಾವುಂಡರಾಯನು, ಕನ್ನಡದಲ್ಲಿ ಗದ್ಯರೂಪವಾಗಿ ತ್ರಿಷಷ್ಟಿಶಲಾಕಾಪುರುಷ ಪುರಾಣವೆಂಬ ತನ್ನ ಗ್ರಂಥದಲ್ಲಿ ಬರೆದಿರುತ್ತಾನೆ. (ಪರಿಶಿಷ್ಟ ೧,೨) ಇವುಗಳನ್ನೇ ಆಧಾರವಾಗಿಟ್ಟುಕೊಂಡು ರಸೋತ್ಪಾದಕ

ಗಳಾದ ನೂತನ ಸನ್ನಿವೇಶಗಳನ್ನು ಕಲ್ಪಿಸಿ ಶ್ರೋತೃಗಳಿಗೆ ಬೇಸರವಾಗದಂತೆ, ರಸಿಕರಿಗೆ ರಂಜನೆಯಾಗುವಂತೆ, ಜೈನರಿಗೆ ಜಿನನಲ್ಲಿ ಅನನ್ಯಭಕ್ತಿಹುಟ್ಟುವಂತೆ, ಕಾವ್ಯಲಕ್ಷಣಕ್ಕನುಸಾರವಾಗಿ, ಪಂಪಾದಿ ಕವಿಗಳ ಮಾರ್ಗವನ್ನು ಹಿಡಿದು, ಈ ಕಾವ್ಯವನ್ನು ಜನ್ನನು ಬರೆದು ತನ್ನ ಕವಿತಾಪ್ರೌಢಿಮೆಯನ್ನು ಪ್ರಕಾಶಪಡಿಸಿರುವನು ಸಾಮಾನ್ಯದೃಷ್ಟಿಯಿಂದ ಈ ಗ್ರಂಥವನ್ನು ಓದಿದರೆ ಪ್ರತಿಯೊಬ್ಬ ಮಾನವನೂ ತನ್ನ ಜೀವಮಾನದಲ್ಲಿ ಅನುಭವಿಸಬಹುದಾದ ಅಂಶಗಳೇ ಇದರಲ್ಲಿ ಚಮತ್ಕಾರದಿಂದ ಹೇಳಿರುವಂತೆ ತೋರುತ್ತದೆ. ಬೇರೊಂದು ದೃಷ್ಟಿಯಿಂದ ಎಂದರೆ, ಮತದೃಷ್ಟಿಯಿಂದ ಇದೇ ಕಾವ್ಯವನ್ನು ಓದಿದರೆ ಒಬ್ಬ ತೀರ್ಥಂಕರನ ಜೀವನ ಚರಿತ್ರೆಯನ್ನು ಕವಿಯು ಈ ಗ್ರಂಥದಲ್ಲಿ ಚಿತ್ರಿಸಿದಂತೆ ಕಾಣುವುದು. ಈ ರೀತಿ ಕಾವ್ಯಪಟವನ್ನು ನೆಯ್ದು, ಕಥೆಯನ್ನು ತೊಡಕಿಲ್ಲದೆ ಓಡುವಂತೆ ಬರೆದು, ಎಲ್ಲರ ಹೃದಯವನ್ನು ಆಕರ್ಷಿಸಿ ಆನಂದಪಡಿಸುವುದು ಕವಿಯ ಲೋಕಾನುಭವವನ್ನು ವ್ಯಕ್ತಪಡಿಸುತ್ತದೆ. ಒಂದುಕಡೆ ಅನಂತ ತೀರ್ಥಂಕರನ ಗರ್ಭಾವತರಣ, ಜನ್ಮಾಭಿಷವಣ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ, ಎಂಬ ಪಂಚಕಲ್ಯಾಣ ವರ್ಣನೆ, ಜೈನತತ್ತ್ವೋಪದೇಶ, ಮೋಕ್ಷಫಲಕ್ಕೆ ಸಾಧನಗಳಾದ ವ್ರತತಪಸ್ಸುಗಳ ವಿವರಣೆ, ಮುಖ್ಯವಾಗಿ ಅನಂತ ವ್ರತಬೋಧೆ, ಇವೇ ಮೊದಲಾದವು ; ಮತ್ತೊಂದುಕಡೆ, ಅನಂತನ ಬಾಲ್ಯಲೀಲೆ, ಯೌವನ ಪ್ರಾಪ್ತಿ, ಮಗನಿಗೆ ಸರಿಯಾದ ಹೆಣ್ಣು ಹುಡುಕಬೇಕೆಂಬ ತಂದೆತಾಯಿಗಳ ಚಿಂತೆ ಮದುವೆಯ ಕೋಲಾಹಲ, ಯೌವನ ವಿಲಾಸ ವಿಷಯಾನುಭವ, ಇದಕ್ಕೆ ಉದ್ದೀಪಕಗಳಾದ ವಸಂತಕಾಲ, ರಾತ್ರಿವೇಳೆ ಚಂದ್ರೋದಯ ; ವಿಷಯಸುಖ ಮಗ್ನತೆ, ವಿಷಯಜಿಹಾಸೆ ವೈರಾಗ್ಯ, ವ್ರತಾಚರಣೆ, ತಪಸ್ಸು, ಕೇವಲ ಜ್ಞಾನೋತ್ಪತ್ತಿ, ಮೋಕ್ಷ. ಇವೇ ಮುಂತಾದ ಅನುಭವ ಪರಂಪರೆಗಳು ರಸಭರಿತವಾಗಿ ವರ್ಣಿತವಾಗಿವೆ. ಕವಿಯು ಅನೇಕ ನೂತನ ಸನ್ನಿವೇಶಗಳನ್ನು ಕಲ್ಪಿಸಿ ವಿಭಾವಾನುಭಾವಾದಿ ಭಾವತರಂಗಗಳೂ, ನಾನಾರಸಗಳೂ ಸಹೃದಯರ ಹೃದಯದಲ್ಲಿ ಉದಯಿಸುವಂತೆ ಈ ಕಾವ್ಯವನ್ನು ರಚಿಸಿರುವನು. ಆತನ ಕವಿತ್ವದ ಕೌಶಲವನ್ನು ಸುನಂದೆ ಮತ್ತು ಚಂಡಶಾಸನ, ಇವರ ಉಪಾಖ್ಯಾನವನ್ನು ಓದಿ ತಿಳಿಯಬೇಕು. ಕಾವ್ಯಜ್ಞರ ಮನಸ್ಸನ್ನು ಆಕರ್ಷಿಸುವ ಶೃಂಗಾರ, ವೀರ, ಕರುಣ, ಹಾಸ್ಯ ರೌದ್ರ ಇವೇ ಮೊದಲಾದ ರಸತರಂಗಗಳು ಹುಟ್ಟುವಂತೆ

ಮಾಡಿದ್ದಾನೆ. ಇಲ್ಲಿ ಶೃಂಗಾರವೇ ಪ್ರಧಾನವಾಗಿದ್ದರೂ ಇತರ ರಸಗಳೂ ತಲೆದೋರಿವೆ. ದುರುಳನಾದ ಚಂಡಶಾಸನನು ಪತಿವ್ರತೆಯಾದ ಸುನಂದೆಯನ್ನು ಸೆರೆಯಲ್ಲಿರಿಸಿ, ತನ್ನನ್ನು ಒಲಿಯುವಂತೆ ಹಿಂಸಿಸುವಾಗ ಯಾರುತಾನೆ ಆಕೆಯ ಅವಸ್ಥೆಯನ್ನು ನೋಡಿ ಕನಿಕರಪಡರು ! ಯಾರು ಚಂಡಶಾಸನನನ್ನು ನಿಂದಿಸರು ! ಆಕೆಯ ಪ್ರಾಣಪ್ರಿಯನಾದ ವಸುಷೇಣನ ತಲೆಯನ್ನು ತಂದು ಕಣ್ಣೆದುರಲ್ಲಿಡಲು ಆಕೆಯು ನೊಂದು ಪ್ರಾಣವನ್ನು ಬಿಡುವಾಗ ಯಾರು ಕಣ್ಣೀರನ್ನು ಸುರಿಸರು ! ರಸೋತ್ಪಾದಕಗಳಾದ ಇಂತಹ ಸನ್ನಿವೇಶಗಳು ಈ ಉಪಾಖ್ಯಾನ ಒಂದರಲ್ಲಿ ಎಷ್ಟೋ ಇವೆ. ಇದೊಂದನ್ನು ಓದಿದರೆ ಕವಿಯ ಸಂವಿಧಾನ ಕೌಶಲವೂ, ಸನ್ನಿವೇಶಕಲ್ಪನಾಚಾತುರ್ಯವೂ ವ್ಯಕ್ತವಾಗುವುವು. ರಸಪೋಷಕವಲ್ಲದ ಘಟನೆಗಳನ್ನಾಗಲಿ ಪಾತ್ರಗಳನ್ನಾಗಲಿ ಕವಿಯು ತಂದು ತುರುಕಿಲ್ಲ. ಗೊಡ್ಡಾಗಿ ನಿಂತಿರುವ ಗಿಡವನ್ನು ಕತ್ತರಿಸಿ ಕಸಿಮಾಡಿ, ಮೈತುಂಬ ಹೂಕಾಯಿಗಳನ್ನು ಬಿಡಿಸುವ ಸಮರ್ಥನಾದ ತೋಟಗಾರನಂತೆ ಜನ್ನನು ನೀರಸವಾದ ಪುರಾಣಕಥೆಯನ್ನೇ ನೂತನ ಸನ್ನಿವೇಶ ಸೃಷ್ಟಿಯಿಂದ ಪುಷ್ಟೀಕರಿಸಿ, ಅನೇಕ ರಸಸ್ಥಾನಗಳನ್ನು ಕಲ್ಪಿಸಿ, ಆನಂದಗೊಳಿಸಿದ್ದಾನೆ. ಇಷ್ಟೇ ಅಲ್ಲ. ಇವನಶೈಲಿ, ಪದಲಾಲಿತ್ಯ, ಮೃದುಬಂಧ, ಶಬ್ದಸೌಷ್ಠವ, ಅರ್ಥಗಾಂಭೀರ್ಯ, ವರ್ಣನಾ ವೈಖರಿ, ಅಲಂಕಾರ ವೈಚಿತ್ರ್ಯ ಇವೆಲ್ಲವೂ ಸಹೃದಯರ ಹೃದಯವನ್ನು ಆಕರ್ಷಿಸತಕ್ಕುವಾಗಿರುವುವು.

## ಕವಿಪ್ರಶಸ್ತಿ.

ಇಂತಹ ರಸಭರಿತವಾದ, ರಸಿಕರಂಜಕವಾದ ಕಾವ್ಯಗಳನ್ನು ಬರೆದ ಕವಿಯು ತನ್ನ ಕವಿತ್ವದ ಮೇಲ್ಮೆಗೆ ಹೆಮ್ಮೆಪಡುವುದೇನಾಶ್ಚರ್ಯ ? ತಮ್ಮದು ಎಂದರೆ ಎಲ್ಲರಿಗೂ ಅದರಲ್ಲಿ ಒಂದು ವಿಧವಾದ ಪ್ರೇಮ, ವಿಶೇಷಗೌರವ. ಆದಕಾರಣ ಕವಿಯು ಕಾವ್ಯದಲ್ಲಿ ತನ್ನ ಕವಿತ್ವದ ಮಹಿಮೆಯನ್ನು ಹೊಗಳಿಕೊಳ್ಳುವುದು ದೋಷವೆಂದು ಭಾವಿಸಬಾರದು. ಈತನು ಪಂಪ, ಪೊನ್ನ, ರನ್ನ, ಇವರಂತೆ ಪುರಾಣಕಾವ್ಯವನ್ನು, " ಭಾವಕರಂತರಂಗ "ವನ್ನು ಆಕರ್ಷಿಸುವಂತೆ ಬರೆದಿದ್ದರೂ, ತನಗೂ ಅವರಿಗೂ ಇರುವ ವೈಲಕ್ಷಣ್ಯವನ್ನು ಹೀಗೆಂದು ಹೇಳಿದ್ದಾನೆ:—

ರನ್ನಂ ವೈಯ್ಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ
ಹೊನ್ನನಸಹಾಯಕವಿ ಮೇಣ್
ಜನ್ನಿಗನಸಹಾಯ ಸುಕವಿ ಕವಿಚಕ್ರಿಗಳೊಳ್ ॥

ತಾನು ಮಾಡಿದ ಕಾರ್ಯವನ್ನು ತಾನೊಬ್ಬನೇ ಹೊಗಳಿದ್ದರೆ ಆತ್ಮಸ್ತುತಿಯಾಗಿ ನಿಂದ್ಯವಾಗುತ್ತಿತ್ತು. ಜನ್ನನು ತನ್ನ ಕವಿತಾ ಸಂಪತ್ತಿಯನ್ನು ತಾನು ಮಾತ್ರವೇ ಸ್ತುತಿಸಿಕೊಂಡಿಲ್ಲ. ಅವನ ಮುಂದೆ ಬಂದ ಗುಣವರ್ಮನೇ ಮೊದಲಾದ ಕವಿವರ್ಯರು ಅವನ ಕವಿತೆಯ ಮೇಲ್ಮೆಯನ್ನು ಕೊಂಡಾಡಿರುವರು. ಮತ್ತು ಕಾವ್ಯಸಾರವನ್ನು ಬರೆದ ಅಭಿನವವಾದಿ ವಿದ್ಯಾನಂದನೂ ಕರ್ಣಾಟಕ ಶಬ್ದಾನುಶಾಸನವನ್ನು ಬರೆದ ಭಟ್ಟಾಕಳಂಕನೂ ಅವನ ಗ್ರಂಥಗಳಿಂದ ಅನೇಕ ಪದ್ಯಗಳನ್ನು ಉದ್ಧರಿಸಿರುವರು (ಪರಿಶಿಷ್ಟ ೪). ಗುಣವರ್ಮನು (1235) ತನ್ನ ಪುಷ್ಪದಂತ ಪುರಾಣದಲ್ಲಿ ಜನ್ನನನ್ನು ಹೀಗೆ ಸ್ತುತಿಸಿರುವನು.

ಅನುಗುಣವಾಗಿ . . .
. . . ನಾಗವ
ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು
ನಾಗ . . . ನವ್ಯಕಾವ್ಯದೊಳ್

ಕಮಲಭವನು (1235) ಶಾಂತೀಶ್ವರ ಪುರಾಣದಲ್ಲಿ (I.62)

ಜಿನಸಮಯ . . .
. . . .
. . . ಬುಧನೇಮಿಚಂದ್ರನ ಜಗನ್ನುತ ಜನ್ನನ ರಂಜಿಪಗ್ಗಳ
ಯ್ಯನಕೃತಿ ಸೌಂದರೀ ಸುಭಗ ಮಾವಗಮಿರ್ಕೆ ಮದೀಯಕಾವ್ಯದೊಳ್

ಆಂಡಯ್ಯನು (ಸು 1235) ಕಬ್ಬಿಗರಕಾವದಲ್ಲಿ,

.
.
.
ಜಿನ್ನಣಮುಗ್ಗಳನಕಾಣ್ಕೆ ಜನ್ನಿಗನ ಜಸಂ॥

ಮಲ್ಲಿಕಾರ್ಜುನನು (1245) ಸೂಕ್ತಿಸುಧಾರ್ಣವದಲ್ಲಿ,

ಜನ್ನನ ದೇಸೆ ಪಂಪನಗುಣಂ . . .

ಕುಮುದೇಂದುವು (1275) ರಾಮಾಯಣದಲ್ಲಿ,

ಅನುನಯದಿಂ . . .

. . . ರನ್ನನ ಸುಮನೋಬಾಣನ ಜನ್ನಯ್ಯನ ॥
ಜಿನಗುಣಮಣಿಮಯ ಕಾವ್ಯಕಥಾವ
ರ್ಣನ ಸೌವರ್ಣಪದಕವೆಮ್ಮಯ ಮತಿ
ವನಿತೆಗೆ ಕಂಠಾಭರಣತೆಯಂ ತಳೆದಿರ್ಕೆ ಕವೀಂದ್ರಪರಂಪರೆಯಾ ॥

ನಾಗರಾಜನು (1331) ಪುಣ್ಯಾಸ್ರವ ಚಂಪುವಿನಲ್ಲಿ (I. 11,)

ಜನ್ನನೊಳೊಪ್ಪುವೆತ್ತ ಪೊಸಮಾತು

ಮಧುರನು (1389) ಧರ್ಮನಾಥಪುರಾಣದಲ್ಲಿ,

ಗರ್ವದಮಾತಲ್ಲ ಶಾಸ್ತ್ರಲೌಕಿಕಕಲೆಯೊಳ್ ॥
ಬೇರ್ವರಿದ ನೇಮಿ ಜನ್ನಿಮ
ರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್ ॥

ಎಂದು ಹೊಗಳಿರುತ್ತಾರೆ.

ಹೀಗೆ ಉತ್ತಮಕವಿಗಳಿಂದ ಸ್ತುತಿಸಲ್ಪಟ್ಟ ಜನ್ನನು ಮಹಾ ಕವಿಯೇ ಸರಿ.

# ಶೋಧನಪತ್ರಿಕೆ.

| ಪುಟ. ಪಙ್ತಿ. | | ಅಶುದ್ಧ. | ಶುದ್ಧ. |
|---|---|---|---|
| 2—15 | .. | ಕಾಷ್ರ್ಣ್ಯಂ | ಕಾರ್ಶ್ಯಂ |
| 7— 5 | .. | ಜಾಣ್ನುಡಿ | ಜಾಣ್ಣುಡಿ |
| 7—20 | .. | ಶ್ರವ್ಯಂ | ಶ್ರಾವ್ಯಂ |
| 8—15 | .. | ಸ್ಮಾತ್ವಾ | ಸ್ಮತ್ವಾಂ |
| 10— 4 | .. | ಳೀಕ್ಷಣಂ | ಳಾಕ್ಷನಂ |
| 11— 4 | .. | ಕೋವರ | ಕೊವರ |
| 12—10 | .. | ವ್ಯಪ್ತ | ವ್ಯಾಪ್ತ |
| 14—13 | .. | ತುಕಿ | ಕುಕಿ |
| 14—16 | .. | ವರಂ | ವರೆಗಂ |
| 15— 2 | .. | ಘಂಜೀರ | ಮಂಜರೀ |
| 16—17 | .. | ಖರವೊ | ಖರವೋ |
| 17— 1 | .. | ಪಾರ್ವ | ಪೂರ್ವ |
| 17— 7 | .. | ಮೆಯ್ವಂಣ | ಮೆಯ್ವಣ್ಣಮಂ |
| 17—10 | .. | ಕುಱುಗಳ | ಕುಗಳ |
| 17—21 | .. | ಮುಗ | ಮುಗು |
| 19—13 | .. | ವುಡು | ಳುಡು |
| 19—22 | .. | ದಾಮ | ದ್ದಾಮ |
| 20—15 | .. | ಧಾರು | ಧಾರಿ |
| 21—19 | .. | ಶೀ | ಸೀ |
| 28— 5 | .. | ಸುಮುವ್ರ | ಸುಮುಹ |
| 28—13 | .. | ಕೀರ | ಕೀರಂ |
| 30— 5 | .. | ಜಾಣ್ನುಡಿ | ಜಾಣ್ಣುಡಿ |
| 30—22 | .. | ಸೌನ್ನ್ಯತ್ಯ | ಸೌನ್ನತ್ಯ |
| 31—17 | .. | ಛಾಯೆ | ಠಾಯೆ |
| 34—17 | .. | ತಂಡಂ | ತೊಂಡಂ |

| ಪುಟ. ಪಙ್ತಿ. | | ಅಶುದ್ಧ. | ಶುದ್ಧ. |
|---|---|---|---|
| 34—19 | .. | ವಿಸರಂ | ವಿಸರ |
| 36— 4 | .. | ಬೆರಸಿ | ಬೆರಸು |
| 39— 1 | .. | ಪಕ್ಷ | ಪಕ್ಷ್ಮ |
| 39— 7 | .. | ನಿಮ್ಮನೆ | ನಿಮ್ಮನ್ನೆ |
| 39— 8 | .. | ಶ.. | - ಶಕು |
| 39—21 | .. | ಕ....ನಂ | ಕ ಮಂಡಳಕ್ಕೆ ಮಂಡನಂ |
| 40— 4 | .. | ಯುಸಂ | ಯುಶಂ |
| 45— 5 | .. | ಜಿನ | ಜನ |
| 47—16 | .. | ದ್ಯಾನಿ | ದ್ಯೋಗಿ |
| 48—18 | .. | ಶೀ | ರೀ |
| 50—15 | .. | ಜರ | ಚಲ |
| 52— 4 | .. | ತಸ | ತಸ್ಸ |
| 53— 3 | .. | ಗೀರ್ವಾ | ನಿರ್ವಾ |
| 55— 1 | .. | ತೆಯಿಂ | ತೆಯುಂ |
| 55— 2 | .. | ವೆಯುಂ | ವೆಯುಂ |
| 55— 4 | .. | ದರ್ಶ | ದಾರ್ಶ |
| 56—10 | .. | ಶರ್ಮ | ಶೀರ್ಮ |
| 56—22 | .. | ಸ್ಥಲ | ಸ್ಥಳಿ |
| 67—18 | .. | ವೆಸರ್ಗೋ | ವೆಸಗೊ |
| 68— 1 | .. | ಪರ | ವರ |
| 72—13 | .. | ಗಡೆ | ಡೆಗೆ |
| 74— 3 | .. | ರ್ದ್ವೀ | ತದ್ವೀ |
| 75—21 | .. | ಸೌಮ್ಯ | ಸಾಮ್ಯ |
| 76— 3 | .. | ಕಾಂತದ | ಕಾಂತ |
| 80—12 | .. | ಪೂಜೆಗಳ | ಪೂಜೆಯೊಳ್ |
| 84— 6 | .. | ಕಾಪ್ರಮು . | ಕಪ್ರಮು |
| 86— 5 | .. | ಬಾಳೆ | ಚಾಳೆ |
| 87-9-10 | .. | .. | ಪ್ರತಾನ ಮಂಡಪ ವಿತಾನ |
| 87—11 | .. | ತಿರ್ದು | ತೀಡು |
| 92— 7 | .. | ವೃತಾ | ವೃತಾಂ |

| ಪುಟ. ಪಙ್ತ್ತಿ. | | ಅಶುದ್ಧ. | ಶುದ್ಧ. |
|---|---|---|---|
| 95—9 | .. | ಬ್ಜಿನೀ | ಜ್ಜಿನೀ |
| 96—11 | .. | ದವಂತೆ | ದಂತೆ |
| 97—12 | .. | ರಖ್ಬಿ | ರ |
| 98—23 | .. | ಕರ | ಕಿರ |
| 99—4 | .. | ಮತ್ತ | ಮುತ್ತಾ |
| 99—8 | .. | ತಳ | ತಳ್ತ |
| 99—21 | .. | ವಾಪೌ | ಮೊಪೂ |
| 105—22 | .. | ಸೂರಾ | ಸುರಾ |
| 109—19 | .. | ಗಳ್ | ಯೊಳ್ |
| 111—6 | .. | ರ್ಜನ | ಜ್ಜಿನ |
| 112—2 | .. | ಕಾಯು | ತಾಯು |
| 112—9 | .. | ಲಲ್ಲಿ.. | ಲಲ್ಲಿಗೆಯ್ದಿ |
| 112—19-20 | .. | ಕೋಟೆ | ಕೋಟಿ |
| 115—11 | .. | ಪ್ರತನ | ಪ್ರತಾನ |
| 117—10 | .. | ಭ್ರಮಭ್ರಮ | ಭ್ರಮದ್ಭ್ರಮ |
| 119—9 | .. | ಪರುಷವೇಧಿ | ಪುರುಷವೇದಿ |
| 119—14 | .. | ಸುತ್ತಂ | ಸುತ್ತುಂ |
| 122—5 | .. | ಬ್ಬರ | ಗ್ಗರ |
| 123—13 | .. | ಪಾಸಂ | ಪಾಸು |
| 125—10 | .. | ಕೇಳಿ | ಕಳಿಕೆ |
| 128—20 | .. | ಪತಿ | ಪಡಿ |
| 132—11 | .. | ನಿಮಿರ್ಚಿ | ನಿಮಿರ್ಚು |
| 132—16 | .. | ಲೋಮ | ಲೋಮ್ಯ |
| 134—22 | .. | ನರರ | ನರ |
| 135—18 | .. | ನಾಯಿಕಾ | ಗಾಯಿಕಾ |
| 139—3 | .. | ಶೇಖಾ | ರೇಖಾ |
| 139—6 | .. | ರುಳ್ಗಾ | ರುಳಾ |
| 140—3 | .. | ಡಾರ್ಥೇ | ಡಾರ್ಥೆ |
| 143—13 | .. | ಕಾಂಡಂ | ಪ್ರಕಾಂಡಂ |
| 143—17 | .. | ನಂದನಂ | ನಂದನ |

| ಪುಟ. ಪಙ್ತಿ. | | ಅಶುದ್ಧ. | ಶುದ್ಧ. |
|---|---|---|---|
| 144—22 | .. | ದರಿಗ | ದರಿಯು |
| 146—17 | .. | .... | ತೆಂಕಣ |
| 147—20 | .. | ರಾಳಿಯುಂ | ರಾಳಿಯರ್ |
| 150— 7 | .. | ತಂತಮು | ತಮತಮು |
| 150—11 | .. | ಡ್ಡೊಡ್ಡೆನು | ಡ್ಡೊಡ್ಡೊಡ್ಡೆಮು |
| 152—13 | .. | ದ್ರವ | ದ್ರವಂ |
| 152—20 | .. | ವರ್ಕಂ | ಮರ್ಕಂ |
| 153—20 | .. | ದುಪ್ರೋ | ದೋ |
| 155—17 | .. | ಮಿಶ್ವ | ಮಿತ್ವ |
| 155—20 | .. | ವರ | ಬರ |
| 160—12 | .. | ಗುಂರಠ | ಗುಂಠ |
| 160—17 | .. | ವೊಲಿ | ವೋಲಿ |
| 161—10 | .. | ಉರ್ವಿ | ತುರ್ವಿ |
| 168—11 | .. | ನುಗಳ್ದ | ನೆಗಳ್ದ |
| 173—20 | .. | ಸೋತ | ಸ್ರೋತ |
| 186— 5 | .. | ಪ್ರಭಾ | ಪ್ರಾಭಾ |
| 186-16-17 | .. | ವಹಾ | ಮಹಾ |
| 190— 1 | .. | ವಿಕಿ | ಕಿವಿ |
| 191— 3 | .. | ಧರ್ರ | ಧರ |
| 191— 6 | .. | ಚಿತ | ಚಿತ್ರ |
| 191—11 | .. | ಬಂದ | ಬಂಧ |
| 192—16 | .. | ನಿದಾನಂ | ನಿಧಾನಂ |
| 202—12 | .. | ಪೆಱು | ಪೊಱು |
| 204— 4 | .. | ಯುಗ | ಯುುಗ |
| 204—20 | .. | ತೊಱ | ತೋಱ |
| 205—10 | .. | ಜೆಚ್ಚ | ಬೆಚ್ಚ |
| 206— 6 | .. | ಕುಲ | ಕುಲಲ |
| 206—17 | .. | ಪರ್ಣ | ಪೂರ್ಣ |
| 208— 5 | .. | ಕಕ್ಕೆ | ಕಕ್ಕಿ |
| 214— 6 | .. | ಸಮಯುು | ಸಮಯು |

| ಪುಟ. ಪಙ್ಕ್ತಿ. | | ಅಶುದ್ಧ | ಶುದ್ಧ |
|---|---|---|---|
| 216— 2 | .. | ಕರ | ಕಾರ |
| 220— 4 | .. | ಪುದುಸರ | ಸುರನರ |
| 227— 8 | .. | ದೋರೆಗೇ | ದೋರೆಗೆಂ |
| 229— 5 | .. | ವೈಸ್ತಾಳಿ | ವೇಷ್ಬಾಳಿ |
| 230—27 | .. | ಲ್ಪಂಕ | ಕಲ್ಪಂ |
| 244—16 | .. | ಪರಿಚತ | ಪರಿಚಿತ |
| 245—24 | .. | ಮೇಷ | ವೇಷ |
| 252—10 | .. | ಗಳಳಿಯೆ | ಗಳವಂ |
| 258—13 | .. | ಪೆಡಮಂ | ಪೆಡಂ |
| 258—19 | .. | ನಿಪಂ | ನಿಪ |
| 262—17 | .. | ಗಳ್ತಿ | ಗಳಿ |
| 270—11 | .. | ಮೆಸಿನಿ | ಮೆನಿಸಿ |
| 271—12 | .. | ಹರಿಣ | ಹರಿಣೆ |
| 278—10 | .. | ಸಖ | ಸುಖ |
| 288— 9 | .. | ನುಡಿಯಾ | ನುಡಿಯ |
| 292—16 | .. | ಜನು | ಜೇನು |
| 300—21 | .. | ಬಡಿಸ | ಬರಸಿಡಿ |
| 301— 6 | .. | ಹೆಳಾ | ಹಳಾ |
| 302— 1 | .. | ಯಲೋಭ | ಭಯಲೋ |
| 332— 8 | .. | ನಿರ್ವಾಣ | ನಿರ್ಮಾಣ |
| 333— 8 | .. | ಕೇಳು | ಕೇಳ್ದು |
| 333— 9 | .. | ಮದ್ಧ | ಮಧ |
| 334— 4 | .. | ರಾಜ | ರಾಜ್ಯ |
| 336— 1 | .. | ಪೆಟ್ಚೊ | ಪೆರ್ಚಿ |

# ಅನಂತನಾಥ ಪುರಾಣಂ

## ಪ್ರಥಮಾಶ್ವಾಸಂ

ಶ್ರೀಮದನಂತಬೋಧದಿನನಂತವಿಳೋಕನದಿಂದನಂತಸಾ
ಖ್ಯಾಮೃತದಿಂದನಂತಬಲದಿಂ ತನಗಾದುದನಂತನಾಮಮು।
ದ್ದಾಮದನಂತಕರ್ಮಜಯದಿಂ ದೊರೆವೆತ್ತುದು ಮತ್ತನಂತಜಿ
ನ್ನಾಮನೆನಿಪ್ಪನೀಗೆಮಗನಂತಜಿನೇಂದ್ರನನಂತಸೌಖ್ಯಮಂ ॥ ೧

ಸಿದ್ಧರ್ ನಿಷ್ಪನ್ನಸೌಖ್ಯೋದಯದ ಮಹಿಮೆಯಿಂ ಸಂದ ನಿತ್ಯತ್ವದಿಂದಂ
ಸಿದ್ಧರ್ ಲೋಕಾಗ್ರದೊಳ್ ನಿಶ್ಚಳನಿವಸನರಾಗಿರ್ದ ವಿಖ್ಯಾತಿಯಿಂದಂ।
ಸಿದ್ಧರ್ ತಾಮಾದಮೂರ್ತರ್ ಚರಮತನುಸಮರ್ ನಿರ್ಗುಣರ್ ಸದ್ಗುಣರ್ ಸಂ
ಶುದ್ಧರ್ ಸಿದ್ಧರ್ ನಿತಾಂತಂ ನಿಲಿಸುಗೆ ನಿಜನಿಶ್ರೇಯಸಶ್ರೀಯೊಳೆಮ್ಮಂ ॥ ೨

ರೋಚಿರ್ಮಾಳೆಗಳಂತೆ ತಳ್ತೆಸೆಯೆ ಷಟ್ತ್ರಿಂಶದ್ಗುಣಂ ಕೂಡೆ ಪಂ
ಚಾಚಾರಾಚರಣಂ ದಿಗಂಬರವಿಳಾಸೋದ್ಭಾಸಮಂಭೋದ ಲ।
ಕ್ಷ್ಮೀಚಾತುರ್ಮುಖಬಿಂಬದಿಂ ಪರಮಧರ್ಮಾಂಭೋಜಿನೀಸೂರ್ಯರಾ
ದಾಚಾರ್ಯರ್ ದಯೆಯಿಂ ಕಟಲ್ಚುಗೆ ಮದೀಯಸ್ವಾಂತದಿಂ ಧ್ವಾಂತಮಂ ॥ ೩

ನ್ಯಾಯಜ್ಯೋತಿಯನಿಕ್ಕಿ ಮೆಟ್ಟಿ ಕುಮತಧ್ವಾಂತಂಗಳಂ ಮುಕ್ತಿಪಾ
ಥೇಯಂ ನಿರ್ಮಳಧರ್ಮಮೆಂಬ ನುಡಿ ಭವ್ಯರ್ಗಪ್ಪಿನಂ ತೋರ್ಪುಪಾ ॥
ಧ್ಯಾಯರ್ಗಾನತನಪ್ಪೆನೀಗೆನಗುಪಾದೇಯಂ ಪರ[1] ಬ್ರಹ್ಮಮಿಂ
ಹೇಯಂ ಕಾಯಸಮೇತವಸ್ತುವೆನಿಪೀನಿಶ್ರೇಯಸೋಪಾಯಮಂ ॥ ೪

---

1 ಕ. ಬರೆ.

ಪರಪಃದಯಾಗುಣಂ ನಯನದೊಳ್ ದೊರೆವೆತ್ತನುಕಂಪೆ ಕಾಯದೊಳ್
ಗುರುವಿನಯಂ ಗುಣಾಧಿಕದೊಳುದ್ಧತಭಾವನೆ ತತ್ವವೃತ್ತಿಯೊಳ್ ।
ಚರಿತಮುದಾತ್ತಷಟ್ಕ್ರಿಯೆಗಳೊಳ್ ಧೃತಮೌನತೆ ಲೋಕವಾರ್ತೆಯೊಳ್
ದೊರೆವಡೆದೊಪ್ಪೆ ಸಂದರೆಮಗೀಗಱಿವಂ ಸಲೆ ಸರ್ವಸಾಧುಗಳ್ ॥ ೫

ಅಪರಮಶ್ರೀದೃಷ್ಟಿಕ
ಳಾಪಮನೆಱಗಿಸುವ ಸಂಪದಕ್ಕೆಮಗದೆ ದಲ್ ।
ರೂಪರ್ಹತ್ಸಿದ್ಧಾಚಾ
ರ್ಯೋಪಾಧ್ಯಾಯಾಖ್ಯಸರ್ವಸಾಧುಸ್ತವನಂ ॥ ೬

ವಿತ್ರಸ್ತಾರಿ ಜಿನೇಶ್ವರಂ ಪರಮದೈವಂ ತನ್ಮತಂ ಜೀವರಾ
ಶಿತ್ರಾಣಾಗಮಮೆಂದು ನಂಬುವಱವಿಂದಾಚಾರ್ಯರಪ್ಪಂತನಂ[1] ॥
ತತ್ತ್ರೈಲೋಕ್ಯಪತಿತ್ವಮಂ ಕುಡುಗೆ ಸಮ್ಯಗ್ದರ್ಶನಜ್ಞಾನಚಾ
ರಿತ್ರಂಗಳ್ ಪರಮಾಮೃತಪ್ರಣಯಿ[2] ಭವ್ಯಶ್ರೇಣಿಗವ್ಯಾಕುಳಂ ॥ ೭

ಪದವಿನ್ಯಾಸವಿಶೇಷದೊಳ್ ಪದಪಿಲಾಸಂ ಸೊಂಪುವೆತ್ತಿರ್ದ ಕಾ
ವ್ಯದ ಮೆಯ್ಯೊಳ್ ಸಮುದಾಯಶೋಭೆ ವಿನುತಸ್ಯಾದರ್ಥದೊಳ್ ಮಧ್ಯಭಾ।
ಗದ ಕಾರ್ಷ್ಣ್ಯಂ ನಯಯುಗ್ಮದೊಳ್ ನಯನಭಾವಂ ಭಂಗಿಯಂ ತಾಳ್ದಿ ಸ
ನ್ನಿಧಿಯಾಗಿರ್ದ ಜಿನೇಂದ್ರವಾಗ್ವನಿತೆ ನಿಲ್ಕಸ್ಮನ್ಮುಖಾಂಭೋಜದೊಳ್ ॥ ೮

ವರದಕರಾಂಬುಜಂ ಮೆಱವ ಕೆಯ್ಯ ಫಳಂ ಕಡುರಯ್ಯಮಾದ ತೋ
ಳೆರಡಱ ಬಿಲ್ಲ ಕೋಲ ಪೊಸದೇಸೆ ವಿಳಾಸಮನಾಂತ ಯಕ್ಷಿ ಪಿಂ ।
ಜರರುಚಿ ಹಂಸವಾಹನೆ ಚತುರ್ಭುಜೆ ಶಾಸನದೇವಿ ಮದ್ವಚಃ
ಪರಿಣತಿಗೊಲ್ದನಂತಮತಿ ಮಾಡುಗನಂತಮತಿಪ್ರಕಾಶಮಂ॥ ೯

ಫಳ ಪದ್ಮಂ ಹಳ ಶೂಳಮಂಕುಶ ಕಶಾಯುಗ್ಮಂ ಭುಜಾದಂಡಮಂ
ಡಳದೊಳ್ತಳ್ತಿರೆ ಮೂಱುವಕ್ತ್ರವಳಯಂ ಶ್ವೇತಾಂಗವರ್ಣಕ್ಕೆ ಪಾ।
ಲ್ಗೊಳದೊಳ್ ಪಂಕಜಪುಂಜದಂತೆಸೆದು ತೋರ್ಪಂ ಮತ್ಕೃತಿಶ್ರೀಗೆ ಮಂ
ಗಳಮಂ ಮಾಳ್ಕಧಿರೂಢಹಸ್ತಿಮಕರಂ ಪಾತಾಳಯಕ್ಷೇಶ್ವರಂ ॥ ೧೦

---

1 ಗ. ನಂಬುವರಿವಿಂದಾಚರಿಪಿಂತವಂ. 2 ಗ. ಪ್ರಣಯು.

ಎನಗಾಲಂಬನಮಕ್ಕೆ ಮುಕ್ತಿಪದಪರ್ಯಂತಂಬರಂ ಜೈನಶಾ
ಸನಮಾನಂದಿತಪಾಕಶಾಸನಮುದಂಚತ್ಪುಣ್ಯಬೃಂದಾದಿವಾ।
ಸನಮೇನಃಪ್ರಕರಪ್ರಶಾಸನಮನಂತೈಶ್ವರ್ಯಲಕ್ಷ್ಮೀಸಮಾ
ಸನಮುಜ್ಜೃಂಭಿತನಿರ್ವೃತಿಪ್ರಿಯತಮಾನೇತ್ರಾಂಬುಜೋಲ್ಲಾಸನಂ ॥ ೧೧

ಅನುಯೋಗಪ್ರತಿಭಂಗುರಂ ನಯಲತಾಶ್ಲಿಷ್ಟಂ ದಯಾರ್ಣಪ್ರಪೂ
ರ್ಣನಿಜಾವಾಳಮುಪಾತ್ತಭವ್ಯಸುಖದಚ್ಛಾಯಂ ಶ್ರುತಸ್ಕಂಧನೂ।
ತನಚೂತಂ ಸುಖಲೀಲೆಯಿಂ ನಮಗೆ ಮಾಡ್ಕೊಲ್ದೀದಿಸುತ್ತಿರ್ಕೆ ಮ
ತ್ತನುಬದ್ಧಶ್ರುತಕೇವಳಿಪ್ರಕರಕೀರ್ತಿಪ್ರೌಢಿಮಾ ಕಪ್ರೌಢಿಯುಂ ॥ ೧೨

ಆಚಾರೋಚಿತಸಂಯಮೋಪಕರಣವ್ಯುತ್ಪಾದಕರ್ ಗೃಧ್ರಪಿಂ
ಛಾಚಾರ್ಯರ್ ಚತುರಂಗುಲೋದ್ಗಮನರೂಹರ್ ಧೀಪ್ರಭರ್ ಕೊಂಡಕುಂ।
ದಾಚಾರ್ಯರ್ ನೃಪಭೃತ್ಯವರ್ಧಿತಸುಧರ್ಮರ್ ಶ್ರೀಜಟಾಸಿಂಹಣಂ
ದ್ಯಾಚಾರ್ಯರ್ ದಯೆಗೆಯ್ವರಕ್ಕೆಮಗೆ ಶುದ್ಧಾಚಾರಸಂಪತ್ತಿಯಂ ॥ ೧೩

ಸದಮಳಧರ್ಮದ ಕಣ್ಣಂ
ಪದಯುಗಳದಿನೆಸೆವಗತಿಯುಮೊಪ್ಪೆ ವೆಸಗೊರ್।
ಪ್ಪಿದರಲ್ತೆ ಭೂತಬಳಿ ಪು
ಷ್ಪದಂತ ಜಿನಸೇನ ವೀರಸೇನಾಚಾರ್ಯರ್ ॥ ೧೪

[1] ಗಣಧರರೋ ಸ್ವಾಮಿಗಳೋ
ಗುಣದಿಂದಾಮಱಿಯೆ ಮೆಱೆಗೆ ಶುದ್ಧರೆಮೆಮ್ಮಂ।
ತಣಿಪುಗೆ ಸಮಂತಭದ್ರರ
ಗುಣಭದ್ರರ ಪೂಜ್ಯಪಾದರಾಖ್ಯಾನಂಗಳ್ ॥ ೧೫

ವಿಕಳಸ್ವಪಕ್ಷಮೆನಿಸಿದು
ದಕಳಂಕನ ವಾಕ್ಯವಜ್ರಹತಿಯಿಂ ನೈಯಾ।
ಯಿಕ ಪಾರಮರ್ಷ[2] ಮೀಮಾಂ
ಸಕ ಬಾರ್ಹಸ್ಪತ್ಯ ಬೌದ್ಧಕುಳ ಕುಧರಕುಳಂ ॥ ೧೬

---

1 ಯಶೋಧರಚರಿತೆ–ಪದ್ಯ. ೪. 2 ಗ. ಪಾರವರ್ಷ.

॥ತ್ರಿಪದಿ॥

ವಂದ್ಯರ್ಜಟಾಸಿಂಹಣಂದ್ಯಚಾರ್ಯರ್ಾದೀಂದ್ರ
ಣಂದ್ಯಚಾರ್ಯರ್ಾದಿಮುನಿಪರಾಕಾಣರ್ೂಗ
ಣಂದ್ಯಪೃಥಿವಿಯೊಳಗೆಲ್ಲಂ ॥ ೧೭

ಗುಣಚಂದ್ರಂ ತ್ರೈವಿದ್ಯಾ
ಗ್ರಣಿ ಘೋರತಪಃಕೃಶಾನುತನುಗುಣಿಯಾದಂ ।
ಗಣಿತನಭೋಮಣಿ ಜಿನಮುನಿ
ಗಣಚೂಡಾಮಣಿ ಸುಶೀಲಗುಣಗಣಿ ನೆಗಟ್ದಂ ॥ ೧೮

ಆಮುನಿಪತಿಗಂ ಶೀಲಮ
ಹಾಮುಹಿಮೋನ್ನತೆಗವೊಗೆದರಮಳೆನಿಪಮಳ ।
ತರ್ಾಮಲ್ಲ ಕನಕಚಂದ್ರಮ
ಹಾಮುನಿಯುಂ ಮಾಧವೇಂದುಯತಿಪುಂಗವನುಂ ॥ ೧೯

ಯತಿರೂಪಚಂದ್ರಸೂರ್ಯ
ದ್ವಿತಯಮಿದೆನೆ ಕನಕಚಂದ್ರ ಮಾಧವಚಂದ್ರ ।
ವ್ರತಿಗಳ್ ಸಧರ್ಮರುದ್ಯೋ
ತಿತಸಿದ್ಧಾಂತೋತ್ಪಳಾಂಬುಜಾಕರರೆಸೆದರ್ ॥ ೨೦

ಜಯಕೇಶಿಕ್ಷಿತಿಪಾಲನಾನೆ ವಿಸಟಂಬಾಯ್ವಂದು ಬೆಳ್ಗಾವೆ[1] ಯೊಳ್
ಲಯಕಾಲಾಂತಕನಂತೆ ಬಂದೊಡಚಳರ್ನಿಂದಿರ್ಪುದುಂ ಮೊಲ್ಗೆ ಪಾ।
ದಯುಗಂಗಳ್ಗುಪಶಾಂತಿಯಿಂದೆ ಬಲವಂದಾಚಾರಮಂ ತಾಳ್ದಿ ಶಾ
ಲೆಯೊಳಿರ್ದತ್ತಿದು ಮಾಧವೇಂದ್ರಮುನಿ[ಸಾಮರ್ಥ್ಯಂ] [2] ಜಗದ್ವಂದಿತಂ ॥ ೨೧

ಶ್ರೀಮದ್ಗಂಡವಿಮುಕ್ತಶಿ
ಖಾಮಣಿಗಳ್ ರಾಮಚಂದ್ರದೇವಮುನೀಂದ್ರರ್ ।
ಪ್ರೇಮದ ಶಿಷ್ಯಾಗ್ರೇಸರ
ರಾಮಾಧವಚಂದ್ರದೇವಸೈದ್ಧಾಂತಿಕರಾ ॥ ೨೨

---

1 ಗ. ವೇಳಾವೆ. 2 ಕ. ಪಾರ್ಮಥ್ಯಂ ; ಗ. ಪಾಮರ್ಥ್ಯಂ.

ನೆನೆಯಲ್ಬಾರದು ಸುಟ್ಟಿ ತೋಱಲರಿದಾರ್ಗಂ ರಾಮಚಂದ್ರವ್ರತೀಂ
ದ್ರನ ದುರ್ವಾರನಿಘೋರವೀರತಪಮೇನಂ ಪೇೞ್ವೆಪೆಂ ದೂರದ।
ರ್ಶನ ದೂರಶ್ರವಣಂ ಪ್ರಸಿದ್ಧ [1] ಮಲಧಾರಿಪ್ರಾಭವಂ ಕುಕ್ಕುಟಾ
ಸನವಾಗಂಡವಿಮುಕ್ತವರ್ತನೆ ಪುರದ್ವಾರಂ ಸದೈಕಾಂತರಂ॥ ೨೩

ಮದನನ ಕೆಯ್ದುಕೆಯ್ದ ಕರಶಾಖೆ ಮುರುಂಟಿದುದೆಯ್ದೆ ಗೊಟ್ಟುಗ
ಟ್ಟಿದುದು ಸರಲ್ಗೆಬೀಗಿ ನನೆದೋಱುವ ಪೂಗುಡಿ ಬಿಲ್ಲ ಕರ್ವು ನಾಂ।
ಟದೆನಸಿದತ್ತು ನಾರಿಯೆಳದುಂಬಿಯುವಾಲೆಯಕೋಡೆಱಂಕೆ ಸೀ
ದುದಿರ್ದುದು ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ॥ ೨೪

[2] ಶ್ರೀಮತ್ಕಾಣೂರ್ಗಣಚಿಂ
ತಾಮಣಿಗಳ್ ರಾಮಚಂದ್ರದೇವಮುನೀಂದ್ರರ್।
ತಾಮೆ ಗಡ ಗುರುಗಳೆನಿಪ ಮ
ಹಾಮಹಿಮೆಗೆ ಜನ್ನನಂತೆ ನೋಂತವನಾವಂ॥ ೨೫

ಲಕುಮಾದೇವಿ ಸುಶೀಲೆ ಸುವ್ರತನಿಧಾನಂ ರಾಯದಂಡಾಧಿನಾ
ಥಕೃತಾಂತಂ ಪೆಸರ್ವೆತ್ತ ಚಾಕಣನಪತ್ಯಂ ರೇಚಯುಂ ಪೆತ್ತ ಪು।
ತ್ರಿ ಕುಲಸ್ತ್ರೀ ಗಡ ಭಾಳಲೋಚನನ ಭವ್ಯಾಚಾರಗಾರ್ಹಸ್ಥ್ಯಮೇಂ
ಸಕಲೈಶ್ವರ್ಯಗಭೀರಮೇಂ ಸತತದಾನಾಧಾರಮೇಂ ಸಾರವೋ॥ ೨೬

ವ॥ ಆಸಮ್ಯಕ್ತ್ವಚೂಡಾಮಣಿಭೂಷಣೆಯ ಗುರುಕುಳಪ್ರಸಿದ್ಧಾಚಾರ್ಯ
ರೊಳಗೆ

ಜಾವಳಿಗೆಯ ಮುನಿಚಂದ್ರ
ತ್ರೈವಿದ್ಯರ ವಿಶ್ರುತಶ್ರುತಪ್ರತಿಬೋಧಂ।
ದೇವರದೇವನ ಜಿನಪನ
ಕೇವಳಲೋಚನದ ನುಡಿದ ನಾಲಗೆಯೆಂಬೆಂ॥ ೨೭

ಕುಲಭೂಷಣರ್ದಿಗಂಬರ
ಕುಲಭೂಷಣರವರ್ಗಳಗ್ರಸಂತತವಿದ್ಯಾ।

---

1 ಗ. ಪ್ರಸಿದ್ಧಿ. 2 ಯಶೋಧರಚರಿತೆ—ಪದ್ಯ ೨೨.

ಕುಲಭೂಷಣರಾದಗುರ್ಗರು
ಕುಲಭೂಷಣರಾದರಾಮುನೀಂದ್ರರ ಶಿಷ್ಯರ್ ॥ ೨೮

ಬೋಧನಿಧಿ ಸಕಲಚಂದ್ರತ
ಪೋಧನರಧಿಗತವಿನೂತವಿದ್ಯಾತ್ರಿತಯರ್ ।
ಮಾಧವಚಂದ್ರತ್ರೈವಿ
ದ್ಯಾಧಿಪನಾ ಸಕಲಚಂದ್ರದೇವಕುಮಾರಂ ॥ ೨೯

ಕಂತುವ ಮೀನಕೇತು ಚಮರಂ ಚಮರೀಜಮುಳಲ್ದೆಳಲ್ದ ತ
ತ್ಕಾಂತೆಯ ಕುಂತಳಾವಳಿಯೆ ಸೀಗುರಿ ಪೂವಿನ ಬಿಲ್ಲ ಬಾಗು ಶು।
ಭ್ರಂತಪನತ್ರಮಾಗಿ ಮೆಱೆಯುತ್ತಿರೆ ಮಾಧವಚಂದ್ರದೇವಸೈ
ದ್ಧಾಂತಿಕ ಚಕ್ರಿ ಕಾಮಜಯದಿಂ[1] ತಳೆದಂ ಮುನಿರಾಜಲೀಲೆಯಂ[2] ॥ ೩೦

ಭೂವಿನುತನೆನಿಸಿದಂ ಪಾ
ರಾವಾರದ ಮಣಿಗಳೊಳಗೆ ಕೌಸ್ತುಭಮೆಂತಂ।
ತೀವಿಭು ಮಾಧವಚಂದ್ರ
ತ್ರೈವಿದ್ಯರ ಶಿಷ್ಯರೊಳಗೆ ಗುರುಕುಲತಿಲಕಂ ॥ ೩೧

ಜಿನಶಾಸನಗುರುಕುಳವ
ರ್ಣನಭೂಮಿಗೆ ಸೀಮೆಯಾದನೂರ್ಜಿತಕವಿವ ।
ರ್ಣನನಟನೆಗೆ ನಾಂದಿನಿಬಂ
ಧನವಾದಂ ಬಾಳಚಂದ್ರಕವಿಕಂದರ್ಪಂ ॥ ೩೨

ಕವಿಕಂದರ್ಪನ ಬಾಳಚಂದ್ರನ ಲಸದ್ಬಾಣೋತ್ಕರಂ ಕೂರ್ತುವಂ
ದವರ್ಗಂ ನೆಟ್ಟನೆ ಕೂರ್ತು ಕೂಡಿದವರ್ಗಂ ರಾಗಾದಿಕಲ್ಲೋಲಮಂ ।
ಕಿವಿಯಂ ತಾಗಲೊಡಂ ತೆರಳ್ಚುವುದೆರ್ದೆಗೇಟ್ದಪ್ಪೆ ಸಮ್ಮೋಹನಾ
ಸ್ತ್ರಮೆನಲ್ಬಾರದು ಸಾಂದ್ರಚಂದ್ರಿಕೆಯೆನಲ್ಮೇಣ್ಬಾರದೇನೆಂದಪೆಂ ॥ ೩೩

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ।

---

1 ಗ. ಚಂದ್ರತಪದಿಂ. 2 ಕ. ಲೀಲೆಯಿಂ.

ದು ನೃಸಿಂಹಕ್ಷಿತಿಪಾಲ [1] ನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ
ಕ್ತಿ ನವೀನೋಜ್ವಳಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ॥ ೩೪

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ।
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧಮೀಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ॥ ೩೫

ಅರಿದಿದು ಬಾಳಬಟ್ಟೆ ಪರಮಾಗಮಮಲ್ಲದೆ ಜಾರಚೋರವೀ
ರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱುಕೆಯ್ವ ಚರ್ಚೆಯ।
ಲ್ಲರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ ಪೇೞ್ದಪೆಂ
ಚರಿತಪುರಾಣಮಂ ಬಱುದೆ ಪೇೞ್ದಪನೆಂದೊಡೆ [2] ತಿರ್ದುವಪ್ಪುದೇ ॥ ೩೬

ಸಮುದಾಯಂ ಮೆಱೆಯಲ್ಕೆವೇೞ್ಪುದು ಕಥಾವಿಸ್ತಾರದೊಳ್ವರ್ಣನ
ಕ್ರಮಮೋಯಾರಮನಾಳ್ದುದಳ್ಳಿಸಿಸ [3] ವೇೞ್ಕುಂ ವೃತ್ತವೃತ್ತಕ್ಕೆ ಭಾ।
ವಮೊಡಂಬಟ್ಟಿರವೇೞ್ಕುಮೊಂದೆ ತೆಱನಾಯಾಸಕ್ರಮಂ ಕಾವ್ಯಮಂ
ಸಮೆವಂಗಂ ಸಮೆವಂಗಮುಜ್ಜಳಿಪ ಸೂಚೀಯಾನಮಂ ಜೀನಮಂ [4] ॥ ೩೭

ಸಹಜಂವೇೞ್ಪುದು ಮುನ್ನೆವೇೞ್ಪುದು ಪದವ್ಯುತ್ಪತ್ತಿವೇೞ್ಕುಂ ಬಲಂ
ಬಹುಕಾವ್ಯಾನುಭವಂ ಕಳಾಪ್ರತಿಭೆ ಲೋಕಜ್ಞತ್ವವಾಪ್ತಾಗಮು।
ಸ್ಪೃಹೆಯೆಂದಿಂತಿದುವಿಲ್ಲದಿರ್ದ ಕವಿಗಳ್ ಕಾವ್ಯಂಗಳಂ ಮಾಡುವಾ
ಗ್ರಹಮಂ ಮಾಡಿದೊಡಾಗ್ರಹಂ ಪೊಡೆದವೊಲ್ ಬೆಂಡಾಗಿ ಬೇಳಾಗರೇ [5] ॥ ೩೮

ಕವಿರಸ ಸಂವ್ಯುತ್ಪನ್ನಂ
ವಿವಿಧಕಳಾಭಿಜ್ಞನಾಗಮಜ್ಞಂ ಬರೆದೋ।
ದುವ ಜಾಣನಾಗೆ ನಿರ್ವಹಿ
ಸುವುದಾಕವಿ ಪೇೞ್ದ ಕಾವ್ಯಮಖಿಳಶ್ರವ್ಯಂ ॥ ೩೯

---

1 ಕ. ಗ. ನಾಥ. 2 ಗ. ಬೊಡೆ. 3 ಗ. ದೂಷಿಸವೇ.
4 ಕ. ಜೀನಮುಂ. 5 ಗ. ಬೆಳಾಗದೇ.

ಪಱಿದೊಡೆ ಬಾೞ್ವನಲ್ಲದೊಡೆ ಸಾಯನೆ ಸತ್ಕೃತಿಗೇಳ್ದು ದುರ್ಜನಂ
ಪಱಿದು ವೃಥೋಕ್ತಿಸಲ್ಲದೊಡೆ ಸಲ್ಲದೆ ಕಾವ್ಯನಿಬಂಧನಕ್ಕಮಾ।
ಪಱಿಯೆ ಪೊಗೞ್ತೆಯಲ್ತೆ ರಸಪತ್ಕೃತಿಯಂ ಕವಿ ಪೇೞ್ಗೆ ದುರ್ಜನಂ
ಪಱಿಯುತುಮಿರ್ಕೆ ಬಾೞ್ವ ಮನೆಗೊಂದು ಬಗುಳ್ವುದು ಬೇೞ್ಕುಮೆನ್ನಿರೇ ॥ ೪೦

ಕೃತಿನಿರ್ಮಾಣದೊಳೇಕೆ ದುರ್ಜನಭಯಾರೇಕಂ ಪ್ರವೇಕಂಗೆ ಪಂ
ಡಿತಸಂದೋಹಶಿರಶ್ಶಿಖಂಡಿನಟನಾಂದೋಳಪ್ರದಂ ರೋಮಹ।
ರ್ಷತೃಣೋತ್ಪಾದಮುದಶ್ರುಪೂರಜನಕಂ ತಾನೆಂಬಿನಂ ಪೇೞ್ದೊಡಾ
ಕೃತಿವರ್ಷಾಗಮಲಕ್ಷ್ಮಿ ಧೂರ್ತದವಜಿಹ್ವಾಕರ್ತನಂ ಮಾಡಳೇ ॥ ೪೧

ಅಱಿಯದೆ ಪದವಿನ್ಯಾಸಮ
ನಱಿಯದೆ ಸಾರಸ್ಯಮಂ ಪರಪ್ರತಿಭೆಯ ಗು।
ಣ್ಪಱಿಯದೆ ತಾಮುಂ ಕೆಮ್ಮಗೆ
ದುಱುಕೆಂಬುವು ಕುಕವಿಕೂಪಮಂಡೂಕಂಗಳ್ ॥ ೪೨

ಪದಮುಂ ಪ್ರಾಸಮುಮಂ ತ
ಪ್ಪದೆ ಬಲ್ಲಂ ಬೇಱೆ ಹೋದ ಹೊಲನಂ ರಸಭಾ।
ವದೊಳಱಿಯನವನನೆಱ್ತೆ
ನ್ನದೆ ಮತ್ತೇನೆಂದು ಕರೆದೊಡೇಯಂ [1]ದಪ್ಪಂ ॥ ೪೩

ತತ್ವವಿದರಾದೊಡಂ ಸರ
ಸತ್ವಕ್ಕೆಡೆಗುಡದ ಜಡರದೆಂತಱಿದಪರೋ ।
ಸ್ವಾತ್ಮತ್ವಾಲಕರೊಳದೇಕೆ ಕ
ವಿತ್ವದ ಮಾತೇಕೆ ಕೇಳಿಸಲ್ವೇಡವರಂ ॥ ೪೪

ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚಬ
ಲ್ಲನನಱಸಲ್ಕೆವೇೞ್ಪುದವನಂ ಜಗದೊಳ್ಪಡೆಯಲ್ಕೆ ಬಾರದಾ ।
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ
ಱನ ಪೊಸಬಾಸಿಗಂಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ॥ ೪೫

1 ಗ. ಡೋಯಂ.

ಅವನ ಬೆಡಂಗು ಬೇಱವನ ವಕ್ತ್ರತೆ ಬೇಱವನೊಂದು ದೇಸೆ ಬೇ
ಱವನ ರಸಜ್ಞತಾವಿಷಯಸಂಗತಿ ಬೇಱನೆ ಪೇೞ್ದ ಸಂದವಂ ।
ಕವಿ ಪೞಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ
ಕವಿಗಳ ವೇಷದಿಂದೆ ಕುಣಿದೇಡಿಪ ಱೋಡಗನೆಂದು ನಕ್ಕಪೆಂ॥ ೪೬

ಕಳಕಂಠಸ್ವನಮುಂ ಪಳಂಚಲೆಪ ಶಬ್ದಂ ಬಂದ ಮಾಕಂದದೊ
ಳ್ಮೆಳೆಯುಂ ಪಾಳಿಸುವರ್ಥವಗ್ಗದ ಬಸಂತಕ್ಕಚ್ಚವೆಳ್ದಿಂಗಳು ।
ಜ್ವಳಿಪಂ ತಾಳ್ದ ಗುಣಂ ರಸಕ್ಕೆಸೆಯೆ ಪೇೞ್ದಂ ರಾಜವಿದ್ವತ್ಸಭಾ
ಕಳಹಂಸಂ ಕವಿಭಾಳಲೋಚನನಿಳಾಸಂಸೇವ್ಯಮಂ ಕಾವ್ಯಮಂ ॥ ೪೭

ಉಭಯಕವಿಚಕ್ರವರ್ತಿಯ
ಸಭೆಯಂ ಪುಗಲಣ್ಮವಲ್ತೆ ಪದವಾಕ್ಯಾರ್ಥ ।
ಪ್ರಭವಕಲಂಕಮಲಂಕಾ
ರಭಾವರಸರೀತಿದೂಷಣಾಭಾಸಂಗಳ್ ॥ ೪೮

ಚಂದನಪಂಕದೊಳ್ ಪರಿಮಳಂ ಮೆಱೆವಂತಿರೆ ಬಂಧದೊಳ್ ರಸ
ಸ್ಯಂದಿಗಳಾದ ಮಾತು ಮನಮಂ ಸಲೆ ಸೋಲಿಸಿ ಪೇೞ್ದ ಲೋಕದೊಳ್ ।
ಸಂದ ಜನಾರ್ದನಂ ಸುಕವಿವಲ್ಲಭನಾತನ ಮುಂದೆ ಗಣ್ಯರೇ
ಚಂದದ ಬಳ್ಳಿಸಂಕಲೆಯೊಳಕ್ಕರಮಂ ಸೆಱೆಗೆಯ್ವ ಕಕ್ಕಸರ್ ॥ ೪೯

ಪಳುಕಿನ ಕರ್ಪುರವಳುಕಿನ
ಮಳಯಜದಿಂಗಡಲ ಪೊಳೆವ ಮುತ್ತಿನ ಬೆಳ್ದಿಂ ।
ಗಳ ಸಿರಿಗೆ ಸರಿಗೆವರ್ಪುವು
ಪಳಚನೆ ಕವಿಭಾಳನೇತ್ರನಿಡುವ ಪದಂಗಳ್ ॥ ೫೦

ಚತುರಂ ನೀಱನುದಾರನುಜ್ಜ್ವಲಯಶಂ ಸೌಭಾಗ್ಯಸಂಪನ್ನನೂ
ರ್ಜಿತಪುಣ್ಯೋದಯನೀಜನಾರ್ದನನವಕ್ತ್ರಾಂಭೋಜಮಂಸಾರ್ದುಸು।
ಸ್ಥಿತೆಯಾಗಿರ್ದುದಱಿಂದೆ ತಾಂ ಸೊಬಗೆಯಾದಳ್ ಜಾಣೆಯಾದಳ್ ಸರ
ಸ್ವತಿ ಸಮ್ಮೋಹಿತೆಯಾದಳಗ್ಗಳಮೆಯಾದಳ್ ವಿಶ್ವಭೂಚಕ್ರದೊಳ್ ॥ ೫೧

ಪರಮಶ್ರೀಜಿನಪಾದಪಲ್ಲವಲತಾಂತಂ[1] ನಿರ್ಮಳಂ ಜೈನಮಂ
ದಿರನಿರ್ಮಾಣಧನಂ ವಿನೇಯನಿಧಿ ಗಂಗಾನಂದನಂ ಶಾಚಿ ಶಂ ।
ಕರಪುತ್ರಂ ಕವಿ ಕರ್ಮ್ಮವಂಶನಧಿಕಜ್ಞಂ ಕಾಶ್ಯಪಂ ಮಾನವೋ
ತ್ತರನೆಂದೇವೊಗಪ್ಸೆಂ ಕವೀಂದ್ರಪರಿಷದ್ಭಾಳೇಕ್ಷಣಂ ಜನ್ನನಂ ॥ ೫೨

ಕವಿತಾಕೌತುಕದಿಂ ಮಹಾಪ್ರಭೃತೆಯಿಂದೌದಾರ್ಯದಿಂ ಭೋಗರೂ
ಪವಿಳಾಸೋದಯದಿಂದೆ ಜನ್ನಮರಸಂಸಂದಿರ್ದು ಚೆಲ್ವಾಯ್ತು ಯಾ ।
ದವಸಿಂಹಂ ನರಸಿಂಹರಾಯನ ಸಭಾವಾಚೋತ್ಸವಂ[2] ಚಂದ್ರನಿ
ರ್ದ ವಸಂತಂ ಮಳಯಾನಿಳಂ ಸೊಗಯಿಸಿರ್ದುದ್ಯಾನಮೆಂತಂತೆವೊಲ್॥ ೫೩

ಬರೆಯಲ್ಮೇಣ್ಮಚ್ಚರದಿಂ
ಕರೆಯಲ್ಮೇಣ್ಕಯ್ಗೆ ಪಲಗೆ ಒರೆ ಕಾವ್ಯಕಲಾ ।
ಪರಿಣತೆಯೊಳ್ ಖಡ್ಗಕಳಾ
ಪರಿಣತೆಯೊಳ್ ಭಾಳನೇತ್ರನೆನಿಪಂ ಜನ್ನಂ ॥ ೫೪

ತನ್ನ ನುಡಿ ತನ್ನ ತೇಜಂ
ತನ್ನ ಬಲಂ ತನ್ನ ವಿದ್ಯೆ ತನ್ನ ವಿಳಾಸಂ।
ತನ್ನಮಯುವೆನಿಸೆ ನೆಗಳ್ದಂ
ಜನ್ನಂ ನರಸಿಂಹರಾಯನಾಸ್ಥಾಯಿಕೆಯೊಳ್ ॥ ೫೫

ನರಸಿಂಹನ ಚೋಳಕುಳೋ
ದ್ಧರಣನ ಸರ್ವಜ್ಞಭೂಪನೋಲಗದೊಳ್ಮಿಂ ।
ದಿರೆ ದಂಡಾಧೀಶಂ ಕು
ಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ ॥ ೫೬

ತರುಣಿಯರ ಕುರುಳನಿಟಿಪಲ್
ಬೆರಲಂ ಕೊಳಲುರದ ಮೇಲೆ ಪೆಸರಕ್ಕರಮಂ ।
ಬರೆಯಲ್ಕಲ್ಲದೆ ಸಮಯಂ
ನೆರೆಯಲ್ಕಿಲ್ಲೆನಿಪ ಸೊಬಗಿನಭಿನವಮದನಂ ॥ ೫೭

1 ಕ. ನಿತಾಂತಂ. 2 ಗ. ರಾಜೋತ್ಸವಂ.

ಉಡೆ ಬಾಳಕಿಯರ ಪೞಕ್ಕೈ
ದುಡುಕಿಂದಂ ಪಱಿದ ಮುಂಜಿ ಬಾಕುಳೆಯರ ಬಾ।
ಯ್ಕಡಿವಡೆದ ಸೆಳೆದು ಬದ್ದೆಯ
ರುಡಿಸಿದೊಡುಡಕಲ್ತ ಕೋವರನಭಿನವಮದನಂ ॥ ೫೮



ನುಂಗಿಯುಗುಳ್ವಬಲೆಯರ ದಶ
ನಂಗಳ ನಲಿಗರೆಗಳಲ್ಲದೆಳ್ಳಿಕ್ಕಲ್ಕಿ ।
ಲ್ಲಂಗಮೆನೆ ಸಂದ ಸೊಬಗಿನ
ಜಂಗಮಶಾಸನವೆನಿಪ್ಪ ಸುರತವಿಳಾಸಂ ॥ ೫೯

ಕವಿತಾಶಕ್ತಿಸುರೇಂದ್ರಧೇನುವದು ಪುಣ್ಯಾಯತ್ತಮಾಕಾಮಧೇ
ನುವೆ ಕೈಸಾರ್ದೊಡಮಾವಚಸ್ಸುಧೆಯನನ್ಯರ್ಗಿತ್ತು ಕಾಪ್ಚೆಕ್ಕಿಗೂ ।
ಡುವವೊಲ್ತುಯ್ಯಲನಿಂದ್ರವಂದಿತನನರ್ಹದ್ದೇವನಂ ಭರ್ತೃಮಾ
ಡುವುದಾತಂ ಕಱೆದಾತನಲ್ತೆ ತಳೆಯೊಳ್ಪಾಲಂ ಭವದ್ವಂದ್ವದಾ ॥ ೬೦

ದೇವಾಧೀಶನನೊರ್ಮೆ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ
ದೇವೇಂದ್ರತ್ವಮೆ ಸಾರ್ವುದೆಂದೊಡೆ ತದೀಯಾಶ್ಚರ್ಯಚಾರಿತ್ರದೊಳ್।
ಭಾವಂ ನಿಂದು ಪುರಾಣಮಂ ಸಮೆದನಾರ್ಹಂತ್ಯಕ್ಕೆ ಹಂಗೇಕೆ **ಯೋ**
**ಭಾವಸ್ಸ್ವೋಭವ**ಮೆಂಬ ವಾಕ್ಯಮೆ ವಲಂ ಮೂಢಪ್ರಬೋಧಾವಹಂ ॥ ೬೧

ಕವಿಭಾಳೇಕ್ಷಣ ಜನ್ನ ನಿನ್ನ ಕವಿತಾಪ್ರೋತ್ತುಂಗಸಂಪತ್ತಿ ಮೇ
ರುವಿನಂತಿರ್ದಪುದಿಂದ್ರನಂ ಮಱೆಯಿಸಲ್ ಸಾಲ್ದಪ್ಪುದೀ ನಿನ್ನಭ।
ವ್ಯವಿಳಾಸಂ ಕೃತಿಪೂರ್ಗಪಾಂಡುಕಶಿಲಾಪಟ್ಟಾಗ್ರದೊಳ್ ವಾಕ್ಸುಧಾ
ಸವನಂ ಶ್ರೀಮದನಂತನಾಥಚರಿತಕ್ಕಂಬಾಗೆ ಸಂಭಾವಿಸಾ ॥ ೬೨

ಎಂದೆನ್ನಂ ಭರದಿಂ ವಿನೇಯಜನಮೆಲ್ಲಂ ಪೇೞೆ ಪೇೞಲ್ಕನಂ
ದಂದೆಂ ಭಕ್ತಿನಿತಂಬಿನೀಪ್ರಣಯದಿಂದಂ ಕಾಮಿ ಕಣ್ಗಾಣನುಂ ।
ತುಂ ದಲ್ ಪೂರ್ವಕವಿಪ್ರಬಂಧಪರಿಪಾಕಕ್ಕಿಂತಿದಲ್ತೆಂದೊಡಂ
ಕುಂದೇಂ ತುಂಬಿಗರಲ್ಗೆಳೊಳ್ ಬಿರಿಮುಗುಳ್ ಸಂಪ್ರೀತಿಯಂ ಮಾಡದೇ ॥ ೬೩

ರಸತೋಯಂ ಭಾವಗಂಧಂ ಪದಸದಕಚಯಂ ಕಾವ್ಯಪುಷ್ಪಂ ಗುಣಾನ್ನ
ಪ್ರಸರಂ ವೃತ್ತಪ್ರದೀಪಂ ವಚನರುಚಿರಧೂಪಂ ಜಿನಶ್ರೀಫಲಂ ನಿ।
ಪ್ಪೊಸತಾಯ್ತಷ್ಟಪ್ರಕಾರಾರ್ಚನೆಯೆನಿಸಿದಪೆಂ ಸಲ್ಗನಂತಂಗೆ ಮತ್ಕಾ
ವ್ಯಸಪರ್ಯಾಶ್ಚರ್ಯದೊಳ್ ಸತ್ಕವಿಸಮಯಿಗಳಿಂ ಶಾಂತಿಧಾರಾವಿಶೇಷಂ ॥ ೬೪

ಬೆಸೆಗೊಂಡಂ ಭರತೇಶ್ವರಂ ವೃಷಭಸೇನಸ್ವಾಮಿ ಕೈಲಾಸದೊಳ್
ಬೆಸಸಿಟ್ಟಂ ಪುರುನಾಥನೋಲಗದೊಳಾಸದ್ವೃತ್ತಮಂ ಶ್ರೇಣಿಕಂ।
ಬೆಸಗೊಂಡಂ ವಿಪುಳಾದ್ರಿಯೊಳ್ ತಿಳಿಯೆ ಪೇಟ್ದರ್ ಗೌತಮರ್ ವರ್ಧಮಾ
ನಸಭಾಮಧ್ಯದೊಳಾಪುರಾಣಕೃತಿಯಂ ಬಲ್ಲಂದದಿಂ ಪೇಟ್ದಪೆಂ ॥ ೬೫

ಮುನಿಮಾರ್ಗೋಕ್ತಿ ಪುರಾಣಪದ್ಧತಿಗೆ ಲೋಕಾಕಾರಮುಂ ತೀರ್ಥವ
ರ್ತನಮುಂ ವ್ಯಾಪ್ತಚತುರ್ಗತಿಸ್ಥಿತಿಗಳುಂ ಭಾಸ್ವತ್ತಪೋದಾನಕೀ ।
ರ್ತನಮುಂ ತತ್ಫಲಸಿದ್ಧಿಯುಂ ನೆಗಟ್ದು ವೈದಂಗಂ[1] ಕವಿಪ್ರೋಕ್ತಕಾ
ವ್ಯನಿಬಂಧೋಚಿತಮೆಂಟು[2] ದೇಶನಗರೀರಾಜ್ಯೋತ್ಸವಾಖ್ಯಾನದಿಂ ॥ ೬೬

ವ॥ ಅದಱೊಳರ್ಹತ್ಪರಮೇಶ್ವರನ ದೇವರದೇವನ ಕೇವಲಾಗಮಲೋಚ
ನಕೆ ಗೋಚರಮಾದ ಲೋಕಪ್ರಕಾರಮೆಂತೆಂದೊಡೆ

ಅದಕರ್ತೃಕಮದಭರ್ತೃಕ
ಮದಹಂಕೃತಮಂತದೂರ್ಧ್ವಮಧ್ಯಾಧೋಭೇ।
ದದಿನಿರ್ಪುದು[3] ಷಡ್ದ್ರವ್ಯಾ
ಸ್ಪದಮಾಗಮಸಿದ್ಧಮಂಬರ[4] ಪ್ರತಿಬದ್ಧಂ ॥ ೬೭

ಡಮರುಗದ ಮೇಲೆ ಡಮರುಗ
ಸಮಖಂಡಮನಿಟಿಪಿದಂತೆ ಜಗಮಿರ್ಪುದಶ್ರ ।
ಸಮಚತುರಶ್ರಂ ಕೃಶಮ
ಧ್ಯಮುಮಂತವ್ಯಾಸಮಗ್ರಭಾಗಸಮಾನಂ ॥ ೬೮

1 ಗ. ದ್ವೈದಂಗಂ. 2 ಕ. ಮೆಂಟುಮು ; ಗ. ಮೆಂದು. 3 ಗ. ನಿಪ್ಪುದು.
4 ಕ. ಬರಂ.

ತಳವೇಟಂತರವೊಂದುರಜ್ಜುಮಗುಬ್ದ್ಯೈಮತ್ತೊಂದುಪೂರ್ವಾಪರಂ
ಗಳೊಳಿರ್ವರ್ಗಡಮಲ್ಲಿಮಿರ್ಕೆ ಪದಿನಾಲ್ಕುದ್ದಂ ತ್ರಿವಾತಂಗಳಿಂ ।
ಬಳಿಸಿತ್ತಿಂತುಟು ಲೋಕಮಿಾತ್ರಿಜಗಮಂ ಕೋದಿಟ್ಟದಾರಂಬೊಲ
ಗ್ಗಳಿಸಿರ್ಕುಂ ತ್ರಸನಾಳವೊಂದಗಲದಿಂದಾಮೂಳಚೂಳಂಬರಂ ॥ ೧೯

ತ್ರಸನಾಳದೊಳಲ್ಲದೆ ಜನಿ
ಯಿಸುವಖಿಳಪ್ರಾಣಿರೂಪಕತ್ರಸವದಱಿಂ ।
ತ್ರಸನಾಳಂ ಪೆಸರಿಂದಾ
ತ್ರಸನಾಳಬಹಿಷ್ಟವಾದ ವಿಷ್ಟಪದೆಡೆಯೊಳ್ ॥ ೨೦

ಮರುತಾವೃತಿವರೆಗಂ ಸ್ಥಾ
ವರಮಲ್ಲದೆ ಪುಟ್ಟವಿತ್ತ ಮೇಗಣ ಲೋಕಂ।
ಸುರಲೋಕಂ ನಡುವಣದಿದು
ನರಲೋಕಂ ಕೆಳಗೆ ಭವನಮತ್ತಲು ನರಕಂ॥ ೨೧

ಮೇರುವೆ ಮಧ್ಯದೊಳ್ನೆಲಸೆ ಸುತ್ತಿಱಿದಿರ್ಪುದು ಜಂಬುದೀಪವಂ
ಕ್ಷಾರಪಯೋಧಿ ಸುತ್ತಿದುದನುಕ್ರಮದಿಂ ಪಲವಬ್ಧಿಗಳ್ ಸ್ವಯಂ ।
ಭೂರಮಣಾಬ್ಧಿ ಮುಟ್ಟನಿತು ದೀಪದ ಪುಂಧರವಿಂಬುವೆತ್ತ ವಿ
ಸ್ತಾರದೊಳೇಕರಜ್ಜುಪರಿಮಾಣವೆನಿಪ್ಪುದು ಮಧ್ಯವಿಷ್ಟಪಂ ॥ ೨೨

ವ॥ ಆಮಧ್ಯವಿಷ್ಟಪದ ನಟ್ಟನಡುವೆ

ದಿವಿಜೋರ್ವೀಧರೆ ಕರ್ಣಿಕಾವಿಳಸಿತಂ ಗೋತ್ರಾಳಿ ಪತ್ರಪ್ರಪಂ
ಚವಿನದ್ಧಂ ಗಜದಂತಶೈಲಚಯಚಂಚತ್ಕೇಸರಂ ದ್ವೀಃಪ್ರದೇ।
ಶವಿದೇಹಾನ್ವಿತಪರ್ಣವಭ್ರಮದುಲಿಡ್ವಿಭ್ರಾಜಿ ರಾರಾಜಿಕುಂ
ಲವಣಾಂಬೋಧಿಸರೋವರಪ್ರಥಿತಜಂಬೂದ್ವೀಪನೀರೇರುಹಂ ॥ ೨೩

ಆಜಂಬೂದ್ವೀಪಮಹಾ
ರಾಜಮರಾಳನ ಪತತ್ರಯುಗಮೆನಿಪುವು ವಿ ।

ಭ್ರಾಜಿತ ಭರತೈರಾವತ
ದೋಜೆಗಳವಱೊಳಗೆ ತೆಂಕ ಭರತಕ್ಷೇತ್ರಂ ॥ ೭೪

ಆಭರತದೊಳತಿಶಯಸುಖ
ಲಾಭರತರ ನಚ್ಚಿನಚ್ಚು ತಾನೆನೆ ನಾನಾ।
ಶೋಭಾವಿಳಸಿತಮುಂಟು ಯ
ಶೋಭಾವಿಷಯಂ ವಿನೂತಕೌಶಲವಿಷಯಂ ॥ ೭೫

ವ॥ ಅಲ್ಲಿ

ಬೆಳೆನೆಲನೊಂದು ಮೆಟ್ಟಿನೆಡೆಯುಂ ಬಿಡಲಿಲ್ಲದನೇಕಧಾನ್ಯಸಂ
ಕುಳಬಹುವರ್ಣಪೂರ್ಣಕಣಿಶಾವಳಿಯಿಂ ನವರತ್ನರಾಶಿಯಂ।
ಬೆಳೆದವೊಲಿರ್ಪುದಾಬೆಳಸಿನೊಳ್ ಪಡೆದೂರ್ಜಿತಪುಣ್ಯಪುಂಜಿಕಾ
ವಳಿಯವೊಲಿಪ್ಪುವೂರ್ಗಳನಿತುಂ ನವಸೌಧನಿಕೇತನಂಗಳಿಂ ॥ ೭೬

ಗಿಳಿಗಿಳಿವಿಂಡಿನೊಳ್ ಸೆಣಸಿ ಬಯ್ವುವು ಕೋಗಿಲೆ ಕೋಕಿಳಕ್ಕೆ ಕೆ
ಕ್ಕಳಿಸಿತು ಕೀಲ್ವುವುದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಜಾ।
ವಳಿಸಿ ಚಡಾಳದೊಳ್ಮೊರೆವುವಾದೊಡೆಯೂರ ಬನಂ ಬನಂಗಳೊಳ್
ಕೆಳೆಗಿಡದಂತೆವೊಲ್ಗಡಣಿಸಿರ್ಪುವು ತದ್ವಿಷಯಾಂತರಾಳದೊಳ್ ॥ ೭೭

ತೂಱಲ ಸೆಳ್ಳಗೊಂಬುವರಂ ನನೆಪೇಱಿದಮಾವು ಮೊಗ್ಗೆಯಿಂ
ಪೇಱಿದ ಮಲ್ಲಿಕಾಲತೆ ಮಡಲ್ತಲರ್ವೇಱಿದ ಚಂಪಕಾಳಿ ಕಾ।
ಯ್ವೇಱಿದ ತೆಂಗು ತೋರಗೊನೆವೇಱಿದ ಕಂಚಳವಾಱೆ ತೋರವ
ಣ್ಪೇಱಿದ ಬಕ್ಕೆ ಗುಂದದನುಸಂಧಿಸೆ ನಂದನನಂದನಂಗಳೊಳ್ ॥ ೭೮

ಕರೆವಂತಧ್ವಗರಂ ತೃಷಾರ್ತಮುಖರಂ ಪೀಯೂಷಮೇಕೆಂದು ಮಾಂ
ಕರಿಪಂತಗ್ಗದ ಸಗ್ಗದೇಪ್ಪಗೆ ರಸಾಸ್ವಾದಕ್ಷಣೋನ್ಮಾದದಿಂ।
ಕರೆವಂತಿರ್ಪುವು ನಂದನಾಂಚಳಮಿಳತ್ತಾಳೀಯ ಪಾಳೀನಿರಂ
ತರಿತಂ ಚೀರ್ಗರೆಪಿಕ್ಷುಯಂತ್ರನಿಕರಂ ಪುಂಡ್ರೇಕ್ಷುಷಂಡಂಗಳೊಳ್ ॥ ೭೯

ವ॥ ಅದಲ್ಲದೆಯುಮಲ್ಲಿ ಬಿತ್ತಿದ ಹೊನ್ನ ಬೀಜದೆ ವೊತ್ತರಿಸಿ ಬೆಳೆದಂತೆ ರಂಜಿಸುವ ಮಂಜೀರಪಿಂಜರವರ್ಣದಿಂದೆಸೆವ [ಇಳಾ]ವಿಳಾಸಿನಿಗೆ ಕೇಸರದಂಗರಾಗಮಂ ಸಂಗಳಿಸಲ್ಕೆಱೆದ ಪಣ್ಬೆಳಸಿಂ ಕಣ್ಬಸರಮಾದ ಕೇದಾರವನಂಗಳೊಳಗೆ

ಕದಲೊಡೆದ ಬೆಳೆದ ಕೞವೆಯ
ಕದಿರ್ಗಂಪಿಂಗೆಱಗಿ ಪಱಿಮೆಗಳ್ಮುಱೆಯಿಸುಗುಂ ।
ಮದನಂ ಮಡದಿಱಿದಿೞಿಪಿದ
ಹೊದೆಯಂಬಿನ ಸರಲ ಗಱಿಯ ಹಿಳ್ಕಿನತೆ ಱನಂ ॥ ೮೦

ಮಡಿಯೊಳ್ ಪಾಲೆಱಗಿರ್ದ ಶಾಳಿವನದೊಳ್ ಕೀರಾಳಿಯಂ ಸೋವಲೊ
ಳ್ಮಡಿಯಿಂದಂ ಮಿಡಿವಿಲ್ಲೊಳೆಚ್ಚೊಡೆದೆಯೊಳ್ ಪುಂಡ್ರೇಕ್ಷುವಂ ತಾಗೆ ಗಂ ।
ಟೊಡೆದೆತ್ತಂ ರಸಮೆಚ್ಚುಪಾಯೆ ಪಥಿಕರ್ ಪೊಕ್ಕೀಂಟುತುಂ ಕೈಯಬಾ
ಯೆಡೆಯೊಳ್ಪಾಯ್ದುಗೆ ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ ॥ ೮೧

ಅವಿರಳವಾದ ತುಂಗಕುಚಭಾರದೆ ತೋಳ್ಸೆಣೆದಿಟ್ಟ ತಕ್ಕಿನೊಳ್
ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು ಕೆಯ್ಗೆ ಪಾಮರೀ ।
ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಿಾಂಚರಮೆಂದು ಬೆರ್ಚಿಪಾ
ಱವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುವಾಪ್ರದೇಶದೊಳ್ ॥ ೮೨

ವ॥ ಮತ್ತಮಾಜನಪದಂ ಭೂಲಕ್ಷ್ಮಿಯುಪಹಾರವಿಸರದಂತೆ ಸುರಸಮಾಗಿ ನಾನಾಖ್ಯಾನಗ್ರಾಮನಗರಖೇಡಖರ್ವಡಮಡಂಬಪತ್ತನದ್ರೋಣಾಮುಖಂಗಳ್ಗೆ ಮಾಣದೆ ನಡೆವ ನಾಣ್ಬಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯಕಾಯಮಾನನಿಕಾಯಾಭ್ಯಂತರಾಳದಲ್ಲಿ

ಪಱಪಡೆ ಸೇದೆ ಪಿಂಗೆ ತೃಷೆ ತಣ್ಗೞಸಂಗಳನೆತ್ತಿ ನಿಂದು ನೀ
ರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳ ಮೊದಲ್ಗೆ ತೀವಿ ಕಿ।
ಕ್ಕಱಿದ ಕುಚಕ್ಕೆ ಕಣ್ಬರಿದು ಧಾರೆಗಳೋರಗೆ ಸೂಸೆ ಮುಟ್ಟಿ ಕೆ
ಯ್ಮಱೆದು ಬಯಲ್ಗೆ ಬಾಯ್ವಿಡುವರಧ್ವಗರಧ್ವತಟಪ್ರಪಾಳಿಯೊಳ್ ॥ ೮೩

ಕುಡಿನೀರೆತ್ತುವವೊಲ್ ಪ್ರಪಾಪ್ರಮದೆಯರ್ ಸತ್ರಂಗಳೊಳ್ ಸಂಮನಂ
ಬಡೆವೇಕಾಕಿನಿಯರ್ ಮನೋಜಸುಖದಾನಾಗಾರದೊಳ್ ಚಿತ್ತಮಂ ।
ಪಿಡಿವೊಳ್ಪೆಂಡಿರೊಡರ್ಚೆ ಮೆಚ್ಚನೊಲವಿಂದೊರ್ಗೆವುದಕ್ಕೊಯ್ಯನೆಂ
ಚಿಡೆಗೆಯ್ದಪ್ಪುವು ಕಾರ್ಯಹಾನಿಪಥಿಕರ್ಗೂರೂರ ನಾಣ್ಬಟ್ಟೆಯೊಳ್ ॥ ೮೪

ವ॥ ಅಂತುಮಲ್ಲದೆಯುಂ

ನಿಗಡಂ ಸೊರ್ಕಾನೆಯೊಳ್ ವಿಗ್ರಹವೊದವಿದ ವಾದಂಗಳೊಳ್ ದಂಡಮುತ್ಕೇ
ತುಗಳೊಳ್ ಕಾರ್ಶ್ಯಂ ವಧೂಮಧ್ಯದೊಳತಿಕಠಿನತ್ವಂ ಕುಚದ್ವಂದ್ವದೊಳ್ ವ।
ಕ್ರಗಮಂ ನಕ್ಷತ್ರದೊಳ್ ಭಂಗದ ಪರಿ ತೆರೆಯೊಳ್ ಕಂಟಕಂ ಹರ್ಷದೊಳ್ ಬ
ಲ್ಬಗೆ ಕಾವ್ಯಪ್ರೌಢರೊಳ್ ತಳ್ತಿಱುವುದೆಮೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ ॥ ೮೫

ಜನಪನ ಕಾದು ರಕ್ಷಿಸುವ ನೀತಿ ಜನಂಗಳ ಮೇಲ್ಮರಲ್ವ ವ
ರ್ಧನಸುಖಲೀಲೆಯೇಂಪಿರಿದೊ ಕುಂದದ ಕಾಲ್ಸಲೆ ಸಂದ ಸುಗ್ಗಿ ಬಂ ।
ದನುದಿನವಿರ್ಪ ದೀವಳಿಗೆ ನಾಡ್ಕೆ ಬಸಂತನ ಕಾಪು ಕಾಮದೇ
ವನ ರತಿಯಾಜ್ಞೆ ಚಂದ್ರನ ತಳಾರಿಕೆ ತೆಂಬೆಲರೊಂದು ಬೆಂಬಲಂ ॥ ೮೬

ಕರವೊಪ್ಪಂಬಡೆದಿರ್ಪುದಾವಿಷಯಲಕ್ಷ್ಮೀವಕ್ತ್ರವೊ ವಕ್ತ್ರಪಂ
ಕರುಹಕ್ಕುನ್ನತನಾಸಿಕಾಮುಕುಳಮೊ ನಾಸಾವಿಳಾಸಕ್ಕೆ ಭಾ ।
ಸುರಲಾಲಾಟಮೊ ತಲ್ಲಲಾಟತಿಲಕಶ್ರೀಗಿಂಬುಗೊಟ್ಟಿರ್ದ ಶೇ
ಖರವೊ ಶೇಖರಚೂಳಿಕಾಮಣಿಯೊ ಪೇಳೆಂಬಂತಯೋಧ್ಯಾಪುರಂ ॥ ೮೭

ಧವಳಾಗಾರತರತ್ತರಂಗಬಹಳಂ ಮತ್ತದ್ವಿಪಗ್ರಾಹಕೋ
ಟಿವಿಟಂಕಂ ವರಕಾಮಿನೀಪುರುಷರತ್ನಭ್ರಾಜಿತಂ ಭೂಮಿಭೃ ।
ದ್ಭುವನೋಪಾತ್ತಸುನಾಕಪಾಕಳಿತಕೋಟಾಚಕ್ರವೇದೀವಿಲಂ
ಘ್ಯವಿಳಾಮಧ್ಯದೊಳೆಟ್ದಪಾಲ್ಗಡಲೆನಲ್ ಸಾಕೇತಮೇಂ ಸಾಲ್ವುದೋ ॥ ೮೮

ವ॥ ಆಪುರವರದ ಪರಿಸರಾಭಾಗಕ್ಕೆಪರವಾಗಿ,

ಗರುಡಿಯೊಳಂಕದೋಜೆಗಳ ತೋಳ ಲಯಂಗಳ ಸೂಳಿವಾಹಳೀ
ತುರಗಖುರಪ್ರಹಾರಗತಿಯೊಳ್ ಜಗಜಟ್ಟಿಗಳಖ್ಖಡಂಗಳೊಳ್ ।

ಮರಳದೆ ಪಾರ್ವ ಶಕ್ತಿ ತಳೆಯೊಳ್ ನಡೆಪೋರ್ವ ಮದದ್ವಿಪಂಗಳೊಳ್
ಪುರುಡಿಸೆ ಸುತ್ತಲುಂ ಪೊಱವೊಟಲ್ಮೆಱೆಗುಂ ವಿಜಯೋತ್ಸವಂಗಳಂ ॥ ೪೯

ಪರಪುಷ್ಪಧ್ಯಾನದಿಂ ಪೆರ್ವಡಿಯುಱುಲಿ ಭೃಂಗಾಂಗನಾಪುಂಜದಿಂ ಸೀ
ಗುರಿಗಳ್ ಮಂದಾನಿಳಂ ಸಂದಿಸಿ ಕೆದಱುವ ಪೊಂಬಾಳೆಯಿಂ ಚಾಮರಶ್ರೀ ।
ಣಿ ರಸಾಳೋದ್ಯತ್ಪ್ರಸೂನಸ್ತಬಕದೆ ಧವಳಚ್ಛತ್ರಮಾಗಲ್ಕಿನಿತ್ತಾ
ಪುರಬಾಹ್ಯೋದ್ಯಾನಮಂಗೋದ್ಭವನ ಸಕಲಸಾಮ್ರಾಜ್ಯದಂತಾಯ್ತು ಪೂಜ್ಯಂ ॥

ವ॥ ಮತ್ತಂ ಚಿತ್ತಭವನ ಮೆಯ್ವಂಣನುಂಣಿಸಿತೋರ್ಪಂತೆ ಕರ್ಪು ಕಾಳಸೆಗೊಂಡ ತಮಾಳಮಾಳೆಗಳ। ರತಿಯ ಮುಗುಳ್ನಗೆಯ ನಗೆವೊಯ್ದಂತೆ ನಗೆಗಳೊಳಗೆ ನನೆಕೊನೆವೋಪ ಸಹಕಾರದಾರಮೆಗಳ। ವಸಂತವಲ್ಲಭನ ತೇಜದೋಜೆಯಂತೆ ಕೆಂದಳಿರಳಂಕಿದ ಕಂಕೆಲ್ಲಿಯ ಕುಸುಂಕುಱುಗಳ। ಸಂಜೆಯ ಸೊಬ್ಗೆವಂದಚಂದ್ರಮನಸೊಂಪಿನಂತೆ ಚಂಪಕಮಾಗೆ ಪೂತ ಸಂಪಗೆಯ ಸಾಲ್ಗಳ। ಶೃಂಗಾರಸರಿತ್ತರಂಗಾವಳಿಯಂತೆ ಪಸುರ್ಪುವಡೆದ ಪೂಗವನದಾಗರದ ಬಂಣವಂಣಿಗೆ ತಿಂಣಮಾಗೆ ಪಂಚಶರಸಾರ್ವಭೌಮನ ಪಂಚರತ್ನದ ಸಂಚಯಕ್ಕೆ ಪಚ್ಚೆಸಾರದ ಕೇರಂ ಕಟ್ಟಿದಂತೆ ನಂದನಕ್ಕೆ ಬಾಪ್ಪೇಲಿಯಾದ ಕೇದಗೆಯ ಬನದ ಬಳಸಿನೊಳಗೆ,

ಶಿವನರೆವೆಣ್ಣನಂ ಹರಿಯ ಹಾದರವಬ್ಜಜನೊಲ್ದ ಲಜ್ಜೆ ಹೇ
ಟವೆ ನನೆವಿಲ್ಲ ಬಲ್ಲಹನ ಶೌರ್ಯಮನೆಂದನುರಾಗದಿಂದವೋ।
ದುವುದಲರಾದ ಕೇದಗೆಯ ಕುತ್ತೆಸಳೋಲೆಯನೆತ್ತಿ ನಿಟ್ಟೆಸ
ಳ್ಗವಳಿಗೆಯಾಗೆ ಭೃಂಗವಿಟರಾಜಿ ಮನೋಜನ ವೀರವೃತ್ತಿಯಂ ॥ ೫೧

ಎಳಲತೆಯೆಂಬ ನಚ್ಚಣಿಯನಾಡಿಸಿ ತುಂಬಿಗಳೆಂಬ ಗಾಯಕಾ
ವಳಿಯನಲಂಪಿನಿಂ ತಗುಳೆ ಪಾಡಿಸಿ ಕೂಡೆ ಒಟಲ್ದು ನೋಟ್ಪ ಪೆ।
ಣ್ಗಳ ಮುಗಳ್ಗಣ್ಗಳಂ ಬಯಸಿ ವೇಡಿಸಿ [1] ರಾಜಕುಮಾರಲೀಲೆಯಂ
ತಳೆವುದು ತತ್ಪುರೋಪವನವೀಥಿಯೊಳಾಡುವ ಮಂದಮಾರುತಂ ॥ ೫೨

ಬಗೆಯಂ ಬಲ್ಸೆಱೆಗೆಯ್ದು ಕಾದಲರ್ಗಲಂಪಂ ಬೀಱುಗುಂ ನಾಗವ
ಲ್ಲಿಗೆ ಕೈಗೊಟ್ಟೆಳಗೌಂಗು ಮಾಧವಿಯ ಸೋಂಕಿಂ ತಳ್ತ ಕಂಕೆಲ್ಲಿ ಮ।

[1] ವದನಂಗಳಂ ಬಳಸಿ ಬೇಂಟದ—ಎಂದು ಕಾವ್ಯಸಾರದ ಪಾಠ.

ಲ್ಲಿಗೆ ಬಂದಪ್ಪಿದ ಮಾವು ಮಾಳತಿಯ ಮೇಳಾಪಕ್ಕೆ ಪಕ್ಕಾದ ಸಂ
ಪಗೆ ಹೊಂಬಾಳೆ ತುಱುಂಬಿದೀಳೆ ಬನದೊಳ್ ಪೆಣ್ದುಂಬಿ ನಿಂದಂಬುಜಂ ॥ ೯೩

ಅಳಿಮಾಲಾರುಚಿಯಂ ಪಳಂಚಲೆವ ಕನ್ನೈಯ್ದಿಲ್ಗೊಳಂ ಹಂಸಮಂ
ಡಳಿ ತಾಱುಂಬಟಿಗೊಳ್ವ ತಾವರೆಗೊಳಂ ಕಾಮಂಗೆ ಪುಷ್ಪಾಸ್ತ್ರಮಂ ।
ಬಳೆವಾವಲ್ಗೊಳನಚ್ಚಗೆಂಪೆಸೆವ ಚೆನ್ನೈಯ್ದಿಲ್ಗೊಳಂ ಚಂದ್ರಮಂ
ಡಳಮಂ ಸೋಲಿಸುವಾಲಿನೀರ್ದಿಳಿಗೊಳಂ ರಮ್ಯಂ ಪುರೋದ್ಯಾನದೊಳ್ ॥ ೯೪

ಮಲೆಯೆಲರ್ಗಳ್ಕಿ ಬಳ್ಕಿ ಮಱುದುಂಬಿಯ ಮಾಳೆಗೆ ಕಾಯ್ದು ಬಯ್ದು ಕೋ
ಗಿಲೆಗೆ ಕನಲ್ದೊನಲ್ದು ಗಿಳಿಪಿಂಡಿನ ತೊಂಡುಗಟಲ್ದೆಟಲ್ದು ತ।
ಳ್ತಲರ್ದೆಳಮಾವು ಮಲ್ಲಿಗೆಗೆ ಕೋಳ್ಗುದಿರೊಳ್ಕುದಿಗೊಂಡು ಜೋಲ್ವರು
ತ್ಕಳಿಕೆಯಿನಾಮ್ರವಲ್ಲರಿಯೊಳೊಪ್ಪವರಾಪುರನಂದನಂಗಳೊಳ್ ॥ ೯೫

ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗಳೊಳ್ ಲಲ್ಲೆ ಭೃಂಗಾಗನಾಱುಂ
ಕರಣಪ್ರೇಂಕಾರದೊಳ್ಕಂಕಣಕಳರವಮಾಂದೋಳಚೀತ್ಕಾರದೊಳ್ ಸೀ ।
ತ್ಕರಣಂ ಪೊಯ್ಕೆಯ್ಗೆವಂದೋಪರ ರತದ ಪಿಸುಣ್ಬೇಟ್ದುವಾಕೀರ್ಣಪರ್ಣ
ಸ್ತರಣೀತಾಂಬೂಲಮಾಳಾಮೃಗಮದಲತಿಕಾನಂದನಂಗಳ್ ಬನಂಗಳ್ ॥ ೯೬

ಅಣಿಯರಮಲರ್ದ ಸೇವಂತ
ರ್ವಣದ ಬಹಿರ್ವಣದ ಕಂಪು ಪೊಂಪುಟಿವಡೆ ಪ ।
ಟ್ವಣಮಿರ್ಪುದು ಮದಿಲೊಳ್ತಿಂ
ತಿಣಿಯೆನೆ ಪರಿಮಳದ ಬಳೆತವಂ ಕಟ್ಟಿದವೊಲ್ ॥ ೯೭

ಇದು ರತ್ನಾಕರಮಿಲ್ಲಿ ನೀರ್ಮೊಗೆವ ಮೇಘವ್ಯೂಹಮಿಾತೋರ್ಪುದಿಂ
ತಿದೆ ಪಾಥೋನಿಧಿಯಿಲ್ಲಿ ವಜ್ರಮಯವೇದೀಚಕ್ರಮಿಂತಿರ್ಕೆ ಮ ।
ತ್ತಿದೆ ದುಗ್ಧಾಬ್ಧಿ ಕಲಂಕದಿಲ್ಲಿ ನೆಲಸಿತ್ತಿಂದಾದ್ರಿಯೆಂದಂದು ನೋ
ಡದರಾರ್ಮೆಚ್ಚದರಾಪುರಪ್ರಥಿತಖಾತೀವಪ್ರವಿಸ್ತಾರಮಂ ॥ ೯೮

ತೀರದಲಂಪಿಂ ಪರಿಖೆಯ
ತೀರದ ಕಣ್ದಿಱವಿಯೆನಿಪ ತಾಮರೆಗಳಿಗಳ್ ।

ಕೈರವದಿಂ ಪಾಯ್ವುವು ಪೋ
ಕೈರವದಿಂ ಮುಱಿಸೆ ಮದನಕಾರ್ಮುಕರವಮುಂ ॥ ೯೯

ಮುಗಿಲ ಮಣಿಮಂಟಪಂಗಳ್
ಗಗನದೊಳಿರೆ ನೆರೆಯಲೆಳಸಿ ಗಾಳಿಯ ಕೋಳ್ಗಾ ।
ಮುಗಿಲ ಪರಿಪರಿಯೆ ನೆಗೆವುದು
ಮುಗಿಲಟ್ಟಣೆಯೊಳಗೆ ಖಚರದಂಪತಿನಿಚಯಂ ॥ ೧೦೦

ತೆತ್ತಿಸಿದಂತಿರೆ ಕೋಟೆಯ
ಕೊತ್ತಳದೊಳೆ ಪರಿವ ತೇರ್ಕೆರ್ಡಂಗೆಡೆದೊಡೆ ಕೈ ।
ಗುತ್ತಿ ಮರಲ್ದು ರಥಾಂಗಮೆ
ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ ॥ ೧೦೧

ಪ್ರಾಕಾರದ ಮಣಿಮಯುವ
ಪ್ರಾಕಾರದ ಪಸುಳೆವಿಸಿಲ ಮುಸಕದಿನಿರುಳುಂ ।
ಕೋಕನದಮುಡುಗವುಡುಗವು
ಕೋಕನದುಚ್ಚರತಮುವಱ ಗೃಹಸರಸಿಗಳೊಳ್ ॥ ೧೦೨

ಪುರವರದೊಳಗಣ ಮಂಡಳಿ
ಕರ ದಂಡಾಧಿಪರ ನೆಗಟ್ದು ಪರದರ ಸಾಮಂ ।
ತರ ಪಡೆದ ಪುಣ್ಯಪುಂಜದ
ಸಿರಿಗಳಿವೆನಿಸುವುವು ನೆಗೆದ ಜಿನಭವನಂಗಳ್ ॥ ೧೦೩

ಹಿಮರೋಚಿಃಕುಂದಚಂದ್ರಾತಪವಿಪುಳವಿಳಾಸೋಪಹಾಸಿಪ್ರಭಾಸೌ
ಧಮಯಂ ಶ್ರೀಮಜ್ಜಿನೇಂದ್ರಾವಸಥಮೆಸೆವುವಲ್ಲಲ್ಲಿ ತದ್ಧೂಮವೇಳಾ ।
ಕ್ರಮದೊಳ್ ಮಂದಾಕಿನೀಮತ್ಸರಮುದವತಿಕಾಳಿಂದಿಪುಂದ್ಯೆಸಿಬಿದ್ದಂ
ಹಿಮವತ್ಕೂಟಾಗ್ರದಿಂ ಪಾಯ್ದುಪುದೆನಿಪಗರುದಾಮಧೂಮಂಗಳಿಂದಂ ॥ ೧೦೪

ಪರಿಧೂತಕೇತುಭೀತಂ
ಕುರಂಗನಪಹರಿಸೆ ಮುದಮನೆಯ್ದುವನರ್ಹ ।

ತ್ಪರಮೇಶ್ವರಮಣಿಭವನೋ
ಪರಿಲಂಘನಪಾಪಲೋಪದಿಂದಂ ಚಂದ್ರಂ ॥ ೧೦೫

ವ॥ ಅದಲ್ಲದೆಯುಮಲ್ಲಿ ತೂಂತಿಟ್ಟಂತೆ ನಿರಂತರಂ ಸುಟಿವ ನಾನಾದೇಶ ಪ್ರಸಿದ್ಧ ರಾಜಪುತ್ರ ವಣಿಗ್ವಲ್ಲಭ ವಾರನಾರೀ ಭಾರತಿಕನಿಕರದ ಮಣಿಭೂಷಣ ಮಂಜರೀಸಿಂಜಾನರಂಜಿತ ನಿಘರ್ಷಣಪ್ರವರ್ಷಿತ ಪರಾಗರಾಗಭೂತ ಮಂದ ಮಂದಮಾರುತದೋಳಿಯಿಂ ಪರಿಪ ಕುರುಳ ಕತ್ತುರಿಯ ಕೆಯ್ಯ ಕಪ್ಪುರದ ಮೆಯ್ಯ ಕುಂಕುಮದ ಮುಡಿದ ಕೇದಗೆಯ ಧೂಳಿಜಾಳದ ಸುಟ್ಟುರೆಯೊಳ್ ಸುಟಿದು ನೆಗೆವ ಪರಿಮಳಪ್ರವಾಹಸಮೂಹದಿಂ ರಾಜವೀಧಿ ವಿಪಣಿಮಾರ್ಗ ಗಣಿಕಾವಾಟಸರಣಿಸಂತಾನಂ ವಸಂತವಲ್ಲಭನ [1] ಪರವರಿಯಂತಿರ್ಪುದು. ಮತ್ತ ಮುಚ್ಚಂಡವಾದ ಭಂಡಣಂಗಳೊಳ್ ಗಂಡಗರ್ವಮನುಟಿದು ದಂಡಾಪನತರಾದ ಮಂಡಳಿಕರೊಳ್ ದಂಡುಟಿಗೊಂಡ ಮದವೇತಂಡಗಂಡಭಿತ್ತಿಗಳ ಪುಷ್ಕರಷಂಡದ ದಾನಧಾರಾನೀಕಸೀಕರಾಸಾರದೊಳಂ ನೆಲೆಯ ಮಾಡಂಗಳೊಳ್ ಮಲೆದು ಮೆಟ್ಟಿ ಮೆಲ್ಲನೆಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಗಳ ಕಾಂತಿಕೌಮುದಿಗಳಿಂ ಇಂದುಕಾಂತದ ಮತ್ತವಾರಣದ ಮರಕತತೋರಣದ ಕುಸುರಿವೆಸದೊಳೊಸರ್ತು ಸುರಿದು ಪಂಜರಿಸೆ ನೆಗೆವ ಮಂಜಿನ ಮುಸುಕದೊಳಸಮಶರಧಾರುಣೀವನ ಧಾರಾಯಂತ್ರಧಾರೆಯಂತಿರ್ಪುದು. ಮತ್ತಮುತ್ತಲರಮನೆಯ ಪಿರಿಯ ಸಿರಿಯ ಕರುಮಾಡದ ಬಳ್ಳಿಮಾಡದ ಗಾಡಿ ಮೆಱೆಯೆ ಸೋಮಸೂರ್ಯವೀಧೀಸನಾಥಮಾಗಿ ಮೇಗೆಮೇಗೆಸೆವ ಸಪ್ತಭೂಮಿಸಾಮಾನ್ಯಸೌಧಸಾರಾಧಾರದ ಕೇರಿಗಳ ಮಾಣಿಕದ ಕಳಸದ ಮುತ್ತಿನ ಲಂಬಣದ ಪಚ್ಚೆಯ ತೋರಣದ ಪವಳದ ಕಂಬದ ಇಂಬಿನೊಳ್ ನಿಗುಂಬಿಸಿ ನಿಂದು ಪಾಡುವ ನೋಡುವ ಕೂಡುವ ಭಾವಸಮುಚ್ಚಯದ ಸಜೀವಮಾದ ಪಿಚಿತ್ರಪುತ್ರಿಕೆಗಳ ಬಿತ್ತರಂಗಳಿಂ ಕಣ್ಗಳ ಮನಂಗಳ ಮಂಗಳಾಚರಣಮಿರ್ಪಂತಿರ್ಪುದಂತುಮಲ್ಲದೆಯುಂ

ಪುರದೊಳ್ ಗಂಧವಣಂಗಳೊಳ್ ಶಶವಿಷಾಣದ್ವೀಪಿನೀಸ್ತನ್ಯವ
ಸ್ತುರಸಾದ್ಯಂಗಳೊಳಾವುದಿಲ್ಲ ವಲಮುಂಟಾಕೇರಿಯೊಳ್ ಲೋಹಸಿ ।
ದ್ಧರಸಂ ದೇಹರಸಾಯನಂ ಮೃತಪುನಸ್ಸಂಜೀವನಂ ವಿಕ್ರಿಯಾ
ಪರದಿವ್ಯೌಷಧಿ ದೇವಲೋಕದಮೃತಂ ಪಾತಾಳಭೇದ್ಯಂಜನಂ ॥ ೧೦೬

[1] ಕ. ಹರಿಹಯ ; ಗ. ಹರಿಹರಿ.

ವ॥ ಮತ್ತಂ ಸುರಭಿಶರನ ಕುಸುಮಶರಶರಾಸನಕ್ಕಂ ಸುರಭಿಸಮಯಕ್ಕಂ ಚಂದನಸುಗಂಧಿಗಂಧವಹಂಗಳ ಸೌರಭ್ಯಮೊಱೆಗೆಟ್ಟಿ ಗೆಲ್ವ ರಾಜವಿಟವಿಲಾಸಿನೀಜನಮನೋನಂದನಂಗಳಂ ಪರಿಮಳದ ಬಱಿವೊನಲ್ಗಳಿನಂಕುರಿತಪಲ್ಲವಿತಂಗಳಂ ಮಾಟ್ಪ ಗಂಧಾಪಣಂಗಳೊಳಗೆ

ಪುರುಡಿಪುವೆಮ್ಮ ಲೋಲನಯನಾಳಿಗೆ ಕರ್ಪಿನೊಳೆಮ್ಮ ವಕ್ತ್ರಪಂ
ಕರುಹದರಲ್ಗೆ ಕಂಪಿನೊಳಿದೆಮ್ಮಲಕಾವಳಿಗಳ್ಗೆ ನಾಯಕ ।
ಸ್ಫುರಿತದಿನೆಂದು ತಂದು ಶಶಿಕಾಂತದ ಸಣ್ಣಿಗೆಯೊಳ್ಪೊರಳ್ಚಿ ಪೊ
ಯ್ದಿರೆವಳರಂತೆ ಕತ್ತುರಿಯ ಘಟ್ಟಿಯನಲ್ಲಿಯ ಘಟ್ಟಿವಳ್ತಿಯರ್ ॥ ೧೦೭

ವ॥ ಅದಲ್ಲದೆಯುಂ

ಪರಿಮಳವಿಭ್ರಮದ್ಭ್ರಮರಮಾಲೆಗೆ ತಮ್ಮ ಕಟಾಕ್ಷಮಾಲೆಗಳ್
ಪುರುಡಿಸೆ ಮಾಲೆಗೊಳ್ವ ನೆವದಿಂ ವಿಟಮಾಲಿಕೆ ಮಾಳೆಯೆತ್ತುವೀ ।
ಸರಿಸದ ಮಾಲೆಗಳ್ಗೆ ಬೆಲೆಯೇನೆನೆ ಕುಟ್ಮಲಕುಂದಹಾಸದಿಂ
ಪರಪುವರಚ್ಚಮಲ್ಲಿಗೆಯ ಮಾಲೆಯನಲ್ಲಿಯ ಮಾಲೆಗಾರ್ತಿಯರ್ ॥ ೧೦೮

ಮನಸಿಜಮಂತ್ರದೇವತೆಯರಿರ್ಪ ವಿಮಾನಮನಂಗರಾಗಮೋ
ಹನಶರಜಾಲಮಿರ್ಪ ಜಯನಾಳಮನಂಗಜರಾಜರಾಜ್ಯಗೋ ।
ಮಿನಿ ನಲವಿಂದಮಿರ್ಪ ಕರುಮಾಡಮಿದೆಂಬಿನವಾರ ಕಣ್ಣುಮಂ
ಮನಮುಮನೇಂ ಕವರ್ತೆಗೊಳಲಾರ್ತೆಸೆದಿರ್ಪುವೊ ಸೂಳೆಗೇರಿಗಳ್ ॥ ೧೦೯

ಶರದದ ಗೊಟ್ಟಿಗಾಯಳರ ಕೇಳರ ಕೇರಿಯೊಳಿಂದುಕಾಂತಮಂ
ದಿರದೊಳಗಿರ್ದು ತಮ್ಮ ತರಳೇಕ್ಷಣಚಂದ್ರಿಕೆಯಿಂ ತೆರಳ್ವ ಶೀ ।
ಕರನಿಕರಂಗಳೊಳ್ ಪಸದನಂ ಮಸುಳುತ್ತಿರೆ ಕಾಯ್ದು ತದ್ಗೃಹಾಂ
ತರಮನಗಲ್ದು ನೀಲಮಣಿಮಂಡಪಮಂ ಪುಗುವರ್ ಲತಾಂಗಿಯರ್ ॥ ೧೧೦

ಮಾಡದ ಮೇಲ್ನೆಲೆಯೊಳಗೆಡೆ
ಯಾಡುವ ಲಾವಣ್ಯವತಿಯರಂಗಪ್ರಭೆ ಕೈ ।
ನೀಡಿ ನೆಗಪುವುದು ತಮ್ಮಂ
ನೋಡಿ ಬಟಲ್ವಾಸೆಕಾಱಿರಾಲೋಕನಮಂ ॥ ೧೧೧

ಸುರರಾಜಂ ಕಣ್ಣಮೆಯ್ಯಿಂ ನನೆಗಣೆಗೊಡಲಾದಂ ಜವಂ ಛಾಯೆಯೊಳ್ಮೈ
ಗರೆದಂ ರತ್ನಾಕರೇಂದ್ರಂ ಕಡಲೊಳಗುಟಿದಂ ಭಿಕ್ಷುವಂ ಪೊರ್ದಿ ಯಕ್ಷಂ ।
ಮರುಳಾದಂ ಮಿಕ್ಕವರ್ಗೊಂಟಿನೊಳೆ ಮುದುಡಿದರ್ ಚಿತ್ತಮಂ ವಿತ್ತಮಂ ತ
[1] ಬ್ಬರಿಗೊಂಡಚ್ಚೈಸಿದಾಸೂಳೆಯರುಟಿದೊಡೆ ಸಂತಾಪದಿಂ [2] ದೈನ್ಯದಿಂದಂ ॥

ಮಕರಾಂಕಾವಾಸಭೋಗಪ್ರಹತಪಣವಸಂವಾದಿಸೌಭಾಗ್ಯಘಂಟಾ
ನಿಕುರುಂಬಾಂದೋಳಲೀಲಾಯುವತಿಕಬರಿಕಸ್ತೂರಿಕಾರೇಣುಸಂವಾ ।
ಹಕಚಂಚತ್ಕೀರಸಾರೀಪರಿತಗಳಿತಗಾಳಿಪ್ರದಂ ಮಾಟಕೂಟಾಂ
ತಿಕಹೇಳೋದ್ಯಾನಪಾಳಂ ಸುಟಿವುದು ಗಣಿಕಾವೇಶ್ಮಚಾರಂ ಸಮೀರಂ ॥ ೧೧೩

ವ॥ ಮತ್ತಮಾನಗರಪ್ಪ್ಯಗಲೋಚನೆಯ ಮಧ್ಯೋಪಾಂತಮನಲಂಕರಿಸಿದ ಕಾಂಚೀಕಲಾಪದಂತೆ ರೂಪುವಡೆದ ರಣಮಂಡಳದ ರಾಜರಾಜಪ್ರಸಾದಶಿಖರಮೇ ಶಿಖರಮೆನಿಸಿದುದಯಶಿಲೋಚ್ಚಯಪ್ರಸ್ತ ಪ್ರಘಣಪ್ರಾಂಶಪ್ರದೇಶಲಕ್ಷ್ಮೀದ್ವಾರ ಮಾಟಕೂಟಚ್ಛಲದಿನುದಯಂಗೆಯ್ವ ಹರಿಣಾಂಕಬಿಂಬದ ಕೆಲಂಬಿಡಿದು ನಿಮಿರ್ವ ಚಂದ್ರಿಕಾಡಂಬರದಂತೆ ವಿಲಂಬಿಸಿ ನಿಂದ ರಾಜತಪ್ರಾಕಾರವಿಸ್ತಾರದೊಳಗೆ

ಬರೆಯಲ್ಬಾರದು ಬಚ್ಚಿಸಲ್ಕರಿದು ಮಾಡಲ್ಕೂಡದೊಡ್ಡೈಸದ
ಚ್ಚರಿ ಭೂಮಂಡಳಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ ।
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಿ ಬಂ
ಧುರಸಂಧಿಪ್ರವಿಭಾಸಿ ನಾಟಕದ ಪಾಂಗಿಂ ಚೂಳಿಕಾಲಾಲಿತಂ ॥ ೧೧೪

ಪ್ರಮುಖದ್ವಾರಪಿನದ್ಧತೋರಣಹರಿದ್ರತ್ನಪ್ರಭಾಲಕ್ಷ್ಮಿ ಸೌ
ಧಮಯೋದಂಚಿತಮಾದ ಚುಂಚುಲೊವೆಯೊಳ್ ಬಾಲಾತಪಾಸಕ್ತಸು ।
ಪ್ತಮರಾಳಂಗಳನಿಂದ್ರಚಾಪರುಚಿಯಿಂ ತಳ್ಪೊಯ್ದು ತತ್ಕೇಕಿನೀ
ಭ್ರಮೆಯಂ ಮಾಡಿ ಶಿಖಂಡಿಮಂಡಳಿಗೆ ತರ್ಕುಂ ತಾಂಡವೋತ್ಸಾಹಮಂ ॥೧೧೫

ಬಳಸಿದ ನೀಲದ ಮುತ್ತಿನ
ತೊಳಗುವ ಮಾಣಿಕದ ಬೆರಕೆವೆಳಗಿನ ಬೆಳಗಂ ।

---

1 ಕ. ಚ್ಚರಿ. 2 ಗ. ಧೈರ್ಯ.

ತಳತಳಿಸಿ ಬಿಸಿಲ ಬೆಳ್ದಿಂ
ಗಳ ಕಾಳದ ಕಣಿವೊಲಿರ್ಪುದಾಕರುಮಾಡಂ ॥ ೧೧೬

ಕರುಮಾಡಕ್ಕೆ ಸರೋಜರಾಗರುಚಿಯಿಂ ಕಾಶ್ಮೀರಮಂ ನೀಡುವಂ
ತಿರೆ ಮುಕ್ತಾಫಲಲಂಬನಪ್ರಚುರಸಾಂದ್ರಜ್ಯೋತ್ಸ್ನೆಯಿಂ ನೋಡುವಂ ।
ತಿರೆ ಸುತ್ತಿರ್ದ ವಿಳಾಸದಿಂದಮೆಸೆದತ್ತಾಲಿಂಗನಂ ಮಾಡುವಂ
ತಿರೆ ಶುದ್ಧಾಂತನಿತಂಬಿನೀಮಣಿಮಯಪ್ರಾಸಾದವಾಸೋತ್ಕರಂ ॥ ೧೧೭

ವ॥ ಆರಾಜಗೇಹಾಜಿರದ ಸೀಯದರದ ಕಂಟಿಯುಬಾರದಂತರಾಳದಲ್ಲಿ

ಗಿರಿಗಳ ರೂಪದಿಂ ಕೆಲವು ಕರ್ಪುಗಳಿರ್ದಪುವೆಂದು ಕಾಯ್ದಿಳೇ
ಶ್ವರನ ವಿಶಾಲನಿರ್ಮಲಯಶಃಪ್ರಸರಂ ಪಿಡಿತಂದು ನೀಳಭೂ ।
ಧರನಿಕುರುಂಬಮಂ ಸೆಜೆಯೊಳಿಟ್ಟುದು ತಾನೆನೆ ದಾನಪೂರನಿ
ರ್ಜರಕಟಸಾನುಗಳ್ ಸೊದಯ ಸಾಲೆಯೊಳಿರ್ಪುವು ಪಟ್ಟದಾನೆಗಳ್ ॥ ೧೧೮

ಸಿಂಗದ ಜಂಗುಳಿ ಸರಬದ
ಸಂಗಡಮಾನೃಪನ ತೇಜಮಂ ಮಱೆವೊಕ್ಕಂ ।
ತೇಂ ಗಡಣಿಸಿ [1] ಮೆಱೆವುವೊ ಚೆಂ
ಬೊಂಗಳ ಮಂದಿರದ ತೇಜವಾಜಿಸಮಾಜಂ ॥ ೧೧೯

ವ॥ ಅಂತನಂತವಿಸ್ತಾರಸಾಮರ್ಥ್ಯಮಂ ತಳೆದುದಂತುಮಲ್ಲದೆ

ಪುರುತೀರ್ಥೇಶ್ವರನಾದಿದೇವನುದಯಂಗೆಯ್ವಂದು ಮುನ್ನಂ ಪುರಂ
ದರನತ್ಯುತ್ಸವದಿಂದೆ ನಿರ್ಮಿಸಿದ ಸಾಕೇತಂ ಜಗತ್ಖ್ಯಾತಮು ।
ಚ್ಚರಿಯೆಂದೊಚ್ಚತಮಾಡಿ ಮಾಣ್ಬೆನಱಿಯೆಂ ಮತ್ತಾಪುರಂ ಚೆಲ್ವನಾ
ಪುರಮಿಂಬಾಪುರಮೊಳ್ಳಿತಾಪುರಮದಂತಿಂತೆಂಬ ಬೇಳಂಬಮಂ ॥ ೧೨೦

ಅದನಾಳ್ವಂ ನಿಜಬಾಹುರಾಹುಕಬಳೀಭೂತಾರಿಸಂತಾನನಂ
ಘ್ರಿದಳತ್ಪಂಕಜರೇಣುಶೋಣಿತಶಿರೋಭೂಭೃತ್ಸಮಾದಾನನಾ ।

1 ಗ. ಮೆರೆವುವಾ.

ಸ್ಪದಸಂಭಾವಿತಸತ್ಯಶೌಚಗುಣರತ್ನಾಂಭೋನಿದಾನಂ ಧರಾ
ಸುದತೀಹೃತ್ಪತಿ ಸಿಂಹಸೇನನನಘಂ ಸಾಹಿತ್ಯರತ್ನಾಕರಂ ॥ ೧೨೧

ಇದು ಪರಮಜಿನಸಮಯವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣಪ್ರಸ
ನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳ
ಲೋಚನ ಜನಾರ್ದನದೇವ ವಿರಚಿತಮಪ್ಪ
ಅನಂತನಾಥಪುರಾಣದೊಳ್
ಪೀಠಿಕಾಪ್ರಕರಣವರ್ಣನಂ
ಪ್ರಥಮಾಶ್ವಾಸಂ.

---

# ದ್ವಿತೀಯಾಶ್ವಾಸಂ

ಶ್ರೀವರನಿಕ್ಷ್ವಾಕುಕುಳೇಂ
ದೀವರಪೀಯೂಷಭಾನು ಸಾಹಿತ್ಯನಟೀ।
ಭಾವಕಶ್ಶೈಲೂಷಂ ಜಗ
ತೀವಿದಿತಯಶಂ ವಿನೇಯಜನಮುಖತಿಲಕಂ ॥ ೧

ಸಿರಿಯ ಘನಸ್ತನಂ ತುಟಿದಗಲ್ದುರಮುರ್ವರೆ ಪರ್ವಿ ಮೆಟ್ಟಿ ನಿಂ
ದಿರೆ ನಿಡಿದಾದ ಬಾಹುಬಳಮುನ್ಮದಸಿಂಧುರಕಂಧರಕ್ಕೆ ಬ।
ಜ್ಜರದಮಳ್ಗಂಬವಾದ ತೊಡೆ ನೀಳ್ದು ಬೆಳಂತಿಗೆಬೆಳ್ಪನಾಳ್ದ ಪಂ
ಕರುಹಮನಾಳಿಗೊಳ್ವ ನಗೆಗಣ್ ಜಗದೊಳ್ಮೆಱೆಗುಂ ನೃಪೇಂದ್ರನಾ ॥ ೨

ಮನಸಿಜಕಲ್ಪಲತಾನಂ
ದನಮೆನೆ ಬಿಂಕಕ್ಕೆ ಕೊಂಕಿದಬಳಾಜನಮಂ।
ನನೆಕೊನೆವೋಗಿಸುತಿರ್ಪುದು
ಮನುಜಮನೋಭವಭವದ್ವಿಲಾಸವಸಂತಂ ॥ ೩

ಬೆದಱೆ ಮನಂ ಕಲಂಕೆ [1] ತನು ಬಾಡೆ ಮೊಗಂ ಸುಟಿದೋಡೆ ಕಣ್ಣನೀರ್
ಬೆದೆಬೆದೆಬಂದು ತಾವೆ ತಮಗೇನೆರವಪ್ಪರೊ ಚಿತ್ತಜಂಗೆ ಬಾ। ೪
ಪ್ಮೊದಲೆನಿಪಟ್ಟಿಕಾರ್ತಿಯುರಟಿಲ್ದು ನೃಪಾಲಮನೋಜನಿಂತು ನೋ
ಡಿದ ಕಡೆಗಣ್ಣ ಕಾಂತಿಲತಿಕಾಸುಮನಶ್ಶರಮೋಹಪಾಶದೊಳ್ ॥ ೫

ಸ್ಮರಪಾಶಪ್ರೇರಿತಂ ಗೋರಿಯ ಹರಿಣಿಯವೊಲ್ ಸ್ಥಾನಮಂ ಪೊಕ್ಕು ತತ್ಕೇ
ಕರರೋಚಿರ್ವಾರಿಯಿಂ ತದ್ದರಹಸಿತವಚಶ್ಚಂದನಾಸೇಕದಿಂ ತ।
ತ್ಪರಿಹಾಸಸ್ಪರ್ಶಸೌಖ್ಯಾಮೃತದಿನೊದವೆ ಶೀತೋಪಚಾರಂ ಪ್ರವಾಲಾ
ಧರೆಯರ್ ಕಣ್ಬೇಟದೊಳ್ ಕೋಟಲೆಗೊಳೆ ಮೆಱೆಗುಂ ಭೂಪ [2] ನಾಶ್ಚರ್ಯ
ರೂಪಂ ॥ ೬

1 ಗ. ಕಲಂಕಿ. 2 ಗ. ರೂಪಂ.

ನೆರವಿಲ್ಲೀವಿಱುವಲ್ಲಗೇಹೆಱಗದೇಂ ಕೇಳಾತ್ರಿಲೋಕೀಧುರಂ
ಧರನಾಗೋತ್ರಮಹೀಧರದ್ರಢಿಮನಾಕೂರ್ಮೋನ್ನತಾಂಸಂ ದಿಶಾ ।
ಕರಿಹಸ್ತಾಯತಮಾಂಸಲಂ ಭುಜಗರಾಜದ್ರಾಘಿಮಂ ವಿಶ್ವಭೂ
ಭರಮಂ ತಾಳ್ದಿದುದೊಂದೆ ದಕ್ಷಿಣಭುಜಾದಂಡಂ ಧರಾಧೀಶನಾ ॥ ೬

ಚಪಳವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮ
ನ್ನಿಪಳೆನೆ ತೀಕ್ಷ್ಣಖಡ್ಗಭಿದುರಾಭದುರೀಕ್ಷಣದತ್ತಚಿತ್ತನಾ ।
ನೃಪನ ಕೃಪಾಣಪಟ್ಟಿಕೆಯನೋಲಗಿಪಂ ವಿಕರಾಳಿಕಾಳಿಕಾ
ಲಪನೆ ವಿಚಂಡಿ ಚಂಡವೆರಸಂತಕನುಜ್ಜ್ವಲಕಾಂತಿದಂತಕಂ ॥ ೭

ಯಮದಂತಾಶನಿಪಾತದೊಂದು ಸವಿಯಂ ಶ್ರೀಸಿಂಹಸೇನಪ್ರತಾ
ಪಮನುಗ್ರಾಜಿಯೊಳುಂಡು ಕಂಡು ಬೞಿಯಂ ಪ್ರಾಣೈಕಮಾತ್ರಪ್ರಸಾ ।
ದಮಹಾಲಾಭದಿನಾತನಾಜ್ಞೆ ತಿಲಕಂ ತತ್ಕೀರ್ತಿ ಪೂಮಾಲೆ ತೇ
ಜಮೆ ಚೂಡಾಮಣಿಯಾಗೆ ಬಾೞ್ವರಿಳೆಯೊಳ್ ವೀರಾರಿಭೂಪಾಲಕರ್ ॥ ೮

ಮದಗಜದ ಪೊರಱು ಪೊಯ್ದೀ
ೞ್ವ ದೊಡ್ಡಮಾರ್ಗದ ಕಿಣಂಗಳಂ ಕಿಗ್ಗಣ್ಣೊಳ್ ।
ಪದನತನ್ನಪರೀಕ್ಷಿಸೆ ನೃಪ
ನೊದೆದೇಱೆಂದತ್ತ ತಲೆಯ ನಂಟಿಸದೇೞ್ವರ್ [1] ॥ ೯

ತನಗೆ ಶುಭಮೆಂದ ವಂದಿಯ
ಮನೆಯಂಗಣದೊಳಗೆ ಪಣ್ತುಪರ್ವಿದ ಮಂದಾ ।
ರನಮೇರುಪಾರಿಜಾತದ
ಬನದೊಳ್ಸಿರಿ ಮೆಱೆವೇಳ್ತೆ ವನಕೇಳಿಗಳಂ ॥ ೧೦

ಬಿದಿ ಕೊಟ್ಟ ಶಾಸನಂ ಸುಕೃ
ತದ ರಾಶಿಗೆ ಬರೆದ ಲಚ್ಚಣಂ ಸಂಸೃತಿಮೋ ।
ಹದ ಸಿದ್ಧಾಂತಂ ತಾನೆಂ
ಬುದು ಭೂಪನಮೋಘವಾಕ್ಯಮಂ ಭುವನಜನಂ ॥ ೧೧

1 ಗ. ನಂಟಂಪೆರೆಳ್ವರ್.

ವ॥ ಆನೃಪಾಲಮೌಲಿಮಾಣಿಕ್ಯಂ ಪದವಾಕ್ಯಪ್ರಮೇಯ ನ್ಯಾಯ ರಾಜನೀತಿ ಭರತ ಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ। ನಿಸರ್ಗಸಮಗ್ರ ರಿಪುಷಡ್ವರ್ಗಜಲಧರಪಟಲಿಕಾಮಾತರಿಶ್ವನುಂ। ಚತುಃಪ್ರಕಾರ ಶಸ್ತ್ರವಿದ್ಯಾಧಿದೇವತಾಯೌವತನಿತ್ಯನಿಷೇವ್ಯಮಾಣ ವೀರವಿಜಯಲಕ್ಷ್ಮೀಲಕ್ಷಿತ ಕೇಯೂರಮಂಡಿತಭೂರಿಭುಜದಂಡನುಂ ವೈರಿವೀರಧಾರಿಣೀಧವಜೀವಗ್ರಾಹಂಗ್ರಹಣಸಮಾಗೃಹೀತಸಪ್ತಾಂಗಷಂಡನುಂ। ಸಿಂಹಪೀಠ ಪರಿಸರಧರಾಲಿಂಗಿತ ಸರ್ವಾಂಗೀಣಪ್ರಣತ ಪ್ರಾಣದಾನ ಪ್ರಾರ್ಥನಾ ಪಾರ್ಥಿವ ಚೂಡಾಪೀಡ ಮಣಿಗಣಮರೀಚಿಪರಿಧಿ ಪರೀತ ಚರಣ ನಖ ಚಂದ್ರಮಂಡಲನುಂ। ಸಮ್ರಾಜ್ಯ ಪ್ರಾಜ್ಯರಾಜ್ಯಾನುಭೋಗ ವಿಭವ ವಿಲಾಸೋಪಹಾಸಿತಾಖಂಡಲನುಂ। ಅಖಿಲದಿಶಾನಿತಂಬಿನೀ ಕದಂಬಕುಚಕಲಶ ಮಲಯರುಹ ಕಂಠ ಕಂದಳಹಾರ ಕಬರಿಕಾಭಾರಮಲ್ಲೀಫುಲ್ಲ ವಿಲಾಸಭಾಸುರವಿಜಯಯಶಃಪ್ರಸರಕೌಮುದೀವಿಭ್ರಮಶಾರದಾಂಬರನುಂ । ರಾಷ್ಟ್ರಕಂಟಕನಿಷ್ಪಪ್ತಮಸ್ತಕ ಹಸ್ತಿವರ್ತಿಕಾದೀಪ್ತೀಭೂತ ತೇಜಃಪ್ರತಾಪಾಡಂಬರನುಂ । ಸತ್ಯತ್ಯಾಗಪರಾಕ್ರಮಪರಾರ್ಧ್ಯಮಣಿರಾಜಿತ ರಾಜರತ್ನಾಕರನುಂ ಇಕ್ಷ್ವಾಕುವಂಶಕುಶೇಶಯಾಕರಭೂಲೋಕದಿವಾಕರನುಮೆಂಬ ನೆಗಟ್ತೆಗಂ ಪೊಗಟ್ತೆಗತ್ತಳಗಮಾದಂ.

ಆನೃಪಮಕರಧ್ವಜನ ಮ
ನೋನಯನಮರಾಳಮಧುಪಕೇಳಿಗೆ ಸರಸೀ ।
ಜಾನನೆ ಕೈರವಲೋಚನೆ
ತಾನೆ ಜಯಶ್ಯಾಮೆ ಸರಸಿಜಾಕರಮಾದಳ್ ॥ ೧೨

ರಮಣೀಯೋಜ್ಜ್ವಲಸಾರವಸ್ತುಚಯದೊಳ್ ಸೌಂದರ್ಯಸೌಭಾಗ್ಯಭಾ
ಗ್ಯಮನುತ್ಪಾದಿಸಿ ಮುಟ್ಟಿ ಮಾಡೆ ಸುಕರತ್ವಂ ತೆಮಳ್ದಪ್ಪುದೆಂ ।
ದು ಮನೋಜಾತನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿ
ದ್ಧಮನೆಂಬಂತುಟು ಗಾಡಿ ರೂಢಿಯ ಜಯಶ್ಯಾಮಾಮಹಾದೇವಿಯಾ ॥ ೧೩

ಅಲರಂಬು ಶಶಿಬಿಂಬದೊಳ್ ಮಸೆದವೊಲ್ ಕೂರ್ಪಿಂಗಡಪ್ಪಾದ ಕ
ಣ್ಮಲರ್ಗಳ್ ದರ್ಪಣರತ್ನಮಂ ತಿರುಳಮಿಂಚಿಂದೊಪ್ಪಮಿಟ್ಟಂತಿರು ।

ಜ್ಜ್ವಲಿಪಾಸ್ಯಂ ಪೊಸಮುತ್ತಿನಾಯ್ದಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿ
ರ್ಮಲದಂತಚ್ಛವಿ ಬೇಡಿದರ್ಗೆ ವರಪೀವಂತಿರ್ಪುವಾಕಾಂತೆಯಾ ॥ ೧೪

ಸುಮನೋಬಾಣಮನಿಕ್ಷುಚಾಪಲತೆಯಂ ಭೃಂಗಾವಳೀಜೀವೆಯಂ
ಚಮರೀಜಾಯತಕೇತುವಂ ನಯನದಿಂ ಭ್ರೂಲೇಖೆಯಿಂ ಬೆಸೆಯಿಂ ।
ಸುಮವೃದ್ವೇಣಿಯಿನಪ್ಪುಕೆಯ್ವ ಜಗಮಂ ಗೆಲ್ವೆನ್ನ ಶಸ್ತ್ರಾಧಿದೈ
ವಮಿದೆಂದಾಗಳುಪಾಮಹಾಸತಿಯ ರೂಪಂ ಕಾಮನಾರಾಧಿಪಂ ॥ ೧೫

ತಳಿರ್ಗಳ್ ಬೀಟುಡೆ[1] ಹಸ್ತಪಾದತಳರಾಗಶ್ರೀಗೆ ಕಣ್ಗೊಳ್ವ ಕ
ಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ ಸ್ಮೇರಾಸ್ಯಬಿಂಬ[illegible]ಮಂ ।
ಗಳನೀರಾಜನಭಾಜನಂ ವಿಧು ಮರಾಳಂ ಮಂದಯಾನಕ್ರಮಂ
ಗಳ ಕಾಲ್ಗಾಪೆನೆ[2] ಬಣ್ಣಿಸಲ್ಪವಣ್ ರೂಪಂ ಭೂಪನರ್ಧಾಂಗಿಯಾ ॥ ೧೬

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ ಕೋರಕಾಕ್ಷೇಪಲೀಲಾ
ದಳಿತಾಪಾಂಗಾನುರಾಗಂ ಮಧುರಫಲರಸಾಸ್ವಾದ್ಯಹೃದ್ಯಾಧರಂ ಕೋ ।
ಮಳೆಯೊಳ್ ಸಂಭೋಗದಿಂ ಸಂಧಿಸೆ ನೃಪನ ಮನೋರಾಗಕೀರ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುವೆಳಸಿ ತತ್ಪ್ರೇಮಕಾಂತಂ ವಸಂತಂ ॥ ೧೭

ತರಲಾಪಾಂಗದಿನಾನೃಪಾಲತಿಲಕಂ ಮುಯ್ವಾಂತ[3] ರಲ್ಲುದ್ತ್ಪಯೋ
ಧರಸಂಘಟ್ಟದೆ ಕಾಮುಕೋತ್ಕುರವಕಂ ಸೊಂಪೇಱ ಪಾಮೇತರೇ ।
ತರಪಾದಾಹತಿಯಿಂದಶೋಕನೊಲವಿಂದಂ ತಳ್ತು ಸಂತಂ ನಿರಂ
ತರಮುನ್ಯಾನವಿನೋದಮಂ ಸಲಿಸುವಂ ಭೂಕಾಂತನಾಕಾಂತೆಯಂ ॥ ೧೮

ಘುಸೃಣರಸಾವಗಾಹಭರಮಂ ರದನಚ್ಛದರಾಗಭೋಗಮಾ
ಗಿಸೆ ಘನಸಾರಚಂದನಜಳಪ್ಲವಮಂ ದರಹಾಸಕಾಂತಿಗಳ್ ।
ಪಸರಿಸೆ ಮನ್ಮಥಸ್ವನರಸಾಮೃತದೊಳ್ಮುಳುಗಾಡಿ ಮೂಡಿ ಸಂ
ದಿಸೆ ಪುಲಕಂ ನೃಪಂ ಪಡೆವನಂಗನೆಯೊಳ್ ಜಳಕೇಳಿಲೀಲೆಯಂ ॥ ೧೯

---

1 ಕ. ಪೀಳುಡೆ. 2 ಕ. ಕಾಳ್ಗಾಪೆನೆ. 3 ಕ. ಮುಯ್ವಾಂತು,

ವ॥ ಆಧರಾಧಿನಾಥಂ ಭೀಮಸಕುಲಶಿಲೋಚ್ಚಯು[1] ಶಿಖರಿಸಿಂಹಾಸನಂ ಸಿಂಹಸೇನಮಹಾರಾಜನೊಂದು ದಿವಸಂ ಸರ್ವಾವಸರಸಭಾಲಕ್ಷ್ಮೀಪ್ರಸಾದ[2] ಭವನಮುಖಭದ್ರದೊಳ್ ಕಂಠಕಾಂಡಮಂಡನೀಭೂತನಿರ್ಮುಕ್ತಮುಕ್ತಾಫಳಯಿತ ಪ್ರತಿಫಳಿತ ನಕ್ಷತ್ರಮಾಳಿಕಾಪಿಧೂಷ್ಯಮಾಣ ಚೂಳಿಕಾಮಾಣಿಕ್ಯಕಲಶ ವಿಳಸನದೊಳ್ ಗೋಪಾನಸಿಕಪ್ರಾಂತಸೂತ್ರಿತ ಮರಕತಮುಕುಳ ಮಾಣಿಕ್ಯಲಂಬನ ಮುಕ್ತಾಲಂಭೂಷ ನೀಲವಂದನ ಮಾಲಿಕಾಜಾಲ ಸಂಭೇದ ಪ್ರಗ್ರಹಪ್ರವಾಹ ತರಿತಾಯ್ಯರ್ವಾಣದಿಕ್ಕೋಣಕುಹರದೊಳ್ ಕುಳಿಶದಳಫಳಕಪ್ರವಾಳಿಕಾದಂಡಿಕಾ ವೈಡೂರ್ಯಪರ್ಯಂಕ ನಿರ್ಯೂಹ ಮಯೂಖಲೇಖಾವರ್ಣ ಸಾಕಲ್ಯ ನಿರ್ನ್ನರ್ತಿತ ರಾಜಾಂಗಣಭೂಮಿಭಾಗದೊಳ್ ಪ್ರಣಯವರ್ತಿತಕಾರ್ತಸ್ವರಸ್ತಂಭ[3] ಸಂಭೃತ ರಂಗರಮಣೀಯಕದೊಳ್ ನಿಷ್ಟಪ್ತತಪನೀಯ ನಿಷ್ಠುರಾರೂಢಮಾನ ರಾಜನ್ಯಕೋಟೀರಕೋಟಿ ಪರಾರ್ಧ್ಯರತ್ನರೋಚಿರ್ವೀಚಿಕಾನೂತ್ನರತ್ನಾಕರನಿರ್ಧೂತ ಪೋತ ಬಿಂಬಾಡಂಬರ ಸ್ತಂಬೇರಮವೈರಿಪೀಠಿಕಾಧಿಷ್ಠಿತಂ ನಿಜಾರ್ಧಾಸನಸನಾಥೀಭೂತ ಜಯಶ್ಯಾಮಾಶ್ಯಾಮಳಾಪಾಂಗ ಹರಿನೀಲಮಾಲಾಪರಿಲಬ್ಧ ವಕ್ಷಸ್ಥಲತಾರಹಾರಂ ಕುಂತಲಕಲಾಪಲತಾಂತಭಾರ ಮೃಗಮದಾಮೋದ ಪರಿಹಸದದ್ಭ್ರಮದ್ಭ್ರಮರಮಂಜರೀಪುಂಜ ಚಂದ್ರಕಸ್ತಬಕವಾರನಿವಾರಣರಣಿತ ಚಮರೀಜವೀಜನ ಮಂದಮಾರುತಾಂದೋಳ ತರತ್ತರಂಗಿತೋತ್ತರಂಗ ಗಭೀರ ಮನಶ್ಚೇಳಾಂಚಳವಿಳಸನನೋಡ್ಡೋಲಗಂಗೊಟ್ಟು ಕುಳ್ಳಿರ್ಪಾಗಳ್[4]

ಪೊಳೆವೆಳದುಂತುಱಂ ತುಱುಗೆ ಸೂಸುವ ದುಗ್ಧತರಂಗಮಾಲೆ ಕೆಂ
ದಳಿರ್ಗಳೊಳಂಚೆ ಸಂಚಳಿಪನಂಗನ ಜಂಗಮಕಲ್ಪವಲ್ಲಿ ಮಂ ।
ಜುಳಕರಪುಂಜಮಂ ಕೆದಱುವೈಂದವಕೋರಕಜಾಲಮೆಂಬಿನಂ
ಬಳಸಿದುದಾಮಹೀಪತಿಗೆ ಚಾಮರವಿಕ್ಕುವ ಕಾಮಿನೀಜನಂ ॥ ೨೦

ವ॥ ಮತ್ತಂ ಮೃಗಮದದ ಕಂಪಿಂಗಂ ಮೃಗಧರನ ಸೊಂಪಿಂಗಂ ಪುಟ್ಟಿ ಕಳೆಗಳೊಡನೊಡವಳೆದು[5] ಜಾಣೊಡನೆ ಜವ್ವನಂ ಮೆಱೆದು ನಾಣೊಳ್ ನನೆಕೊನೆ ಪೋಗಿ ಬೇಟದೊಳ್ ಬಿರಿದು ಕೂಟದೊಳರಲ್ದು ಲೇಸಿನೊಳ್ ಪಾಸವೆಡೆದು ಜಗಮಂ ಜಕ್ಕುಲಿಸುಪಿಂಗೋಲ್ವಿಲ್ಲನ ಬಲ್ಲಾಳನ ಕೈದು[6] ಸರಲ್ಗಳೆಯ್ದುವೆಂದು

1 ಕ. ಗ. ಚ್ಚಯೋಯ. 2 ಕ. ಪ್ರಸಾದ, 3 ಕ. ಸ್ತಂಭಿತಕ.
4 ಕ. ಕುಳ್ಳಿರ್ದಾಗಳ್. 5 ಗ. ವರಿದು 6 ಗ. ಕೈಪು.

ಕಾಂತಾವೇಷ್ಟಿತಲತಾಂತಕಾಂಡಮಂ ವಸಂತನನಂತಮಂ ನಿರವಿಸಿದನೆಂಬಂತೆ ಗಾಡಿ ರೂಢಿಯುಂ ತಳೆಯೆ ತುಡುಗೆಯು ಕೆಂಬರಲ ಪಸುಳೆವಸಿಲೊಳಂ ಕಡೆಗಣ್ಣ ಕಾಂತಿಯು ಕಡುವೆಳದಿಂಗಳೊಳಂ ಮುಡಿಯ[1] ಕರ್ಪಿಟ್ಟುಳುರ್ಕೆಗತ್ತಲೆಯೊಳಂ ಮನ ನಿಜಮಹೇಂದ್ರಜಾಲಮೆಂಬ ಲೀಲೆಗಾಲಂಬಮಾಗಿ .

ಅಳವಡೆ ಕೊಂಡ ಸುಣ್ಣಸದನಂ ಪೊಸಜಾಣ್ನುಡಿ ಜಾಣರಂ ಮರು
ಳ್ಗೊಳಿಸೆ ಪೊದಳ್ದ ಮುದ್ದುನುಡಿ ಬಾಪಕರೊಳ್ ಮದನಾನುರಾಗಮಂ ।
ಬಳಯಿಸೆ ರೂಪು ನೋಟಕರ ಕಣ್ಣಮೃತಾಂಜನಪುಂಜಮಂ ಪುಮಂ
ಗೊಳಿಸೆ ನೃಪೇಂದ್ರನೋಲಗದೊಳಿರ್ದುದು ವಾರವಿಲಾಸಿನೀಜನಂ ॥ ೨೧

ಸವಿಯುಂ ಸಾಲಿಪೆ ಪೊಯ್ದು ನೋಡಿ ಶ್ರುತಿಯುಂ ಮೇಲ್ತಂತಿಯುಂ ನೂಂಕಿ ಕೂ
ಡುವ ಪಾಂಗಿಂ ಪ್ರತಿದಂಡಿಕಾಪ್ರಕರಮಂ ಮೇಳೈಸಿ ವೀಣಸ್ತನಾ[2] ।
ಗ್ರವನಾಲಿಂಗಿಸಿ ತುಂಬಿ ಸಾರ್ಚಿ ಕಳೆಯುಂ ತೀರ್ದತ್ತು ಮಾರ್ದತ್ತು ನೋ
ಡುವಿಳಾಕಾಂತನ ಪಕ್ಕದೊಂದು ಕೆಲದೊಳ್ ವೀಣಾದರೀಸಂಕುಲಂ ॥ ೨೨

ಕ್ಷಮರಾಪ್ತರ್ ನಯಕೋವಿದರ್ ಸಕಳಶಾಸ್ತ್ರಾರ್ಥರ್ ಸ್ವಕೀಯಾನ್ವಯ
ಕ್ರಮಸಿದ್ಧರ್ ಮತಿಯುದ್ಧವೃದ್ಧರುಪಧಾಶುದ್ಧರ್ ಕುಲೀನರ್ ನೃಪೇಂ ।
ದ್ರಮೃಗೇಂದ್ರಾಸನಪಾದವಿಷ್ಟರದೊಳಿರ್ದರ್ ಸಂದ ಪಂಚಾಂಗಮಂ
ಕ್ರಮವಾತ್ಯಾಕೃತಿವೇಷಮಂ ತಳೆದವೋಲ್ ಪಂಚಪ್ರಧಾನೋತ್ತಮರ್ ॥ ೨೩

ಪರಿಜನಜೀವನಂ ಸಕಲದೇಶಸಮಾಹಿತವೃತ್ತಿ ಮೂತೆಳೇ
ಶ್ವರಧನವೃದ್ಧಿ ರಾಜಗೃಹಕೆಮ್ಮ[3] ಕಳಾಪಸಮುಪ್ಪೆಯುಂ ನಿರಂ ।
ತರಮಿವರೊಂದು ಕಂಟಮೊನೆ ಬಾಳ್ಕೆನೆಯಾಗಿರೆ ಸಲ್ವುದೆಂಬಿನಂ
ಕರಣಗಣಾಗ್ರತಸ್ಸರರ ಪಾಲಿ ಮನಕ್ಕೆನಗಿತ್ತು ಲೀಲೆಯುಂ ॥ ೨೪

ಇವು ವಿದ್ಯಾಪರ್ವತಮಂ
ಬಿ ವಿಳಾಸಾನ್ಯ್ಯಕ್ಕೆದಿಂದೆ ಮಣಿಮಯಪೀಠಾ ।
ನಿವಹದೊಳೆಸೆದುದು ಗಡಣಂ
ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳಾ ॥ ೨೫

೧ ಗ. ಕರ್ಪಿನತಳುಕೆ. ೨ ಕ. ಗ. ಸ್ತನಾಂ ಗ. ಪರ್ಮ. ೩ ಗ. ಕಳಾನ್ವಪಸೇ.

ಜಗತೀಶಂ ನೋೞ್ಪ ಕಣ್ಗಂ ನಱುವ ದಸಿಗಮಿಂಬಾಗಿ ಕುಳ್ಳಿರ್ದರಂದೋ
ಳಿಗಳಂ ದಂಡಾಧಿಪರ್ ಮಾಂಡಳಿಕರಥಿಕಸಾಮಂತರಂತರ್ನಿಯುಕ್ತರ್ ।
ಪಗೆಕಾಱರ್ ಗಾಯಕರ್ ಪಾಠಕರಡಪದವರ್ ನೆತ್ತಕರ್ ಪಾಸಕಾಱರ್
ನಗೆಕಾಱರ್ ವಾದ್ಯಕರ್ ಚಿತ್ರಕರಣುಗಿನವರ್ ಸೂೞೆವಾಳರ್ ಪಯಾಳರ್ ॥ ೨೬

ವ॥ ಮತ್ತಂ ಕಲಿತನದಿಂ ಕಡಿದಂತೆ, ಗರುವಿಕೆಯಿಂ ಕರುವಿಟ್ಟಂತೆ, ಗಂಡಗರ್ವದಿಂ ಕಂಡರಿಸಿದಂತೆ, ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡಂಗಾಡಿ ಸಭೆಯ ಕಣ್ಗಳಂ ಕಪ್ಪುರಗೊಳಿಸೆ ಪೂಸಿದ ಚಂದನದ ಭೂರಿಭುಜಶಿಖರದೊಳಣ್ಕೆಗೆಯ್ದ ಕುಂಕುಮದ ಬಿಂಕಂ ಬೆಳ್ಳಿಯ ಬೆಟ್ಟದ ತೋಳ ಮೊದಲೊಳ್ ನೆಮಿರ್ಸಿದ ಕೆಮ್ಮುಗಿಲಿನ ಪೆರ್ಮೆಯಂ ಪಡೆಯೆ ಮಾಱಿಳಿಪಿಗಗ್ಗಳಮಾದ ಪೇರುರದ ಪರೆಪು ಕರಿಯದಂಡೆಯ ಜಳವಟ್ಟಿಗೆಯ ಬೆರಕೆವೆಳಗಿಂ ಸುರಧನುವಿನ ಪೊರಜೆಸುತ್ತಿದೈರಾವತಕ್ಕೆ ವೈರಮನೊಡರ್ಚೆ ಮಲ್ಲಪಡಿಯ ಪಱಿಯ ದತ್ತಿಗುಳ್ಳಾಳದಿಂ ನಡೆದು ತೋಱಿ ಪಿಂಗಾಲ್ಕಿಂದ ಸೂಳಾನೆಗಳ ತಾಳವಟ್ಟಮಂ ಪಿಡಿದು ಪಿಂದಣ್ಗೆ ಬಗಿದು ತೆಱಪುಮಾಡಿ ಮೊಗಂಬಡೆದುತರತರಂ ತ್ರಿಭಂಗಿ ಮುಱಿವ ಜಂಗಮಗಿರಿಗಳಂತೆ ತಮಂಗಮಳ್ಳಾಡೆ ಘಟ್ಟಿಸಿ ನಿಂದು ಸಿಡಿಲ ಸಡಗರದ ತಡೆಬಿಟ್ಟಂತೆ ಬಾಹಾಸ್ಫೋಟನಮಳುರ್ಕೆವಡೆವಿನಮಿತ್ತಂ ದೇವಚಿತ್ತೈಸೆಂದು ಜೆಟ್ಟಿಗಳಂತರ[1] ಜೆಟ್ಟಿಗಳ ಗೋವಳರ ಗೊಂದಣಂ ಜೋಳಿದೆಗೆದು ಮೇಳೈಸುವಾಗಳ್

ಕಡುಮುಳಿಸೇಱಿ ಮಲ್ಲವೆಸರಿಂ ಗಜವಾಂತೊಡಮುರ್ಬಿ ಭಾಯಿಯೊ
ಕ್ಕಿಡಪದೊಡೇಕೆ ಮಲ್ಲತನವೊಲ್ಲದೆ ದಾನಕದೊಳ್ಪುದಪ್ಪೊಡಾಂ ।
ಪಿಡಿದುಡೆ ಕತ್ತರಂ ಕರವಳಂ ಸೆರವಟ್ಟಿಣಿ ಹತ್ತೆ ಡೊಕ್ಕರಂ
ಚಟಿಕೆ ತುಳಾಡಿ ಪೊಟ್ಟುಮುಡುಹಂ ಮುಹಡಂ ದಣು ವಟ್ಟಿ ಪಟ್ಟಿಸಂ ॥ ೨೭

ವ॥ ಎಂದು ಮಲ್ಲಮಾತಂಮಾಡಿ ಪೊಡೆವಟ್ಟು ಕುಳ್ಳಿರ್ದ ಜಗಜೆಟ್ಟಿಗಳ ಗೊಂದಣಂ ಮಾನಕನಕಾಚಳನ ಮಹಿಮೆಯನೋಲಗಿಸಲ್ ಬಂದ ಕುಲಶಿಖರಶಿಖರಕಳಾಪದಂತಿರ್ದುದಂತುಮಲ್ಲದೆಯುಂ

ಜಗಮನದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ಮು
ತ್ತುಗುಜದ ಬೀರವರ್ತಿಸಕರಂಗಳ ಬಾಪ್ಮ್ಯದಲಾದ ಚಾಗದೋ ।

---

1 ಕ. ಳಂತರಜೆ.

ಲಗದ ವಿಡಂಬಡಂಬರಕೆ ಕಣ್ಸೆಲೆಯಾದ ವಿಲಾಸವೊಪ್ಪೆ ಗ
ದ್ದಿಗೆಯೊಳಗಿರ್ದುದಗ್ಗಳಿಕೆಯಗ್ಗದ ಪಾರ್ಥಿವಪುತ್ರಸಾರ್ಥಕಂ ‖ ೨೮

ವ‖ ಅದಲ್ಲದೆಯುಂ ತಿಮಿತ್ತಿಳಿಕಮೆಂಬುದು ಪಸುಗೂಸಿಂಗೆ, ಮಸಿಯೆಂಬುದು ಹುರಿಯೋಡಿಂಗೆ, ಪಣಿಕಟ್ಟೆಂಬುದು ಪೆಟವಲೆಟ್ಟಿಂಗೆ, ಬೇಳ್ವೆಯೆಂಬುದು ಪಾರ್ವಂಗೆ, ಜಡೆಯೆಂಬುದು ಗೊರವಂಗೆ, ತಟ್ಟೆಂಬುದು ಸವಣಂಗೆ, ತಳಪಟ್ಟೆಂಬುದು ಹೊಲ್ವಂಗಲ್ಲದೆ ಕೊಲ್ವ ಗೆಲ್ವ ಕಲಿಗಂ ಬಿರುದಂಗವೇವುದೊಂದಲ್ಲದೆ, ಸಿರಿಗಂದದಣ್ಪಿನೊಳ್ ಪರಭಾಗಂಬಡೆದ ಮುತ್ತಿನ ತಿಸರಂ ತಿಂಗಳ ಬೆಳಗಿನೊಳ್ ತೇಂಗಿನಿಂದ ತಾವರೆಯ ಮಾಲೆಯೊಳೋರಗೆಯಾಗೆ ಮದಪಟ್ಟಿದೆಗೆದಿಟ್ಟ ಕತ್ತುರಿಯ ಚೆಲ್ವ ಕೊರಲೊಳಿಕ್ಕಿದ ಕರಿಯದಂಡೆಯೊಳೆರಡೆಡೆ[1] ಒರೆ, ಮುಡಿದ ಮಲ್ಲಿಗೆಯ ಪರಿಮಳಕ್ಕಮುಡಸಿದ ಕಪ್ಪುರದ ಪಪ್ಪುಕಕ್ಕಂ ಮಱಿದುಂಬಿವಿಂಡು ಮುಂದೆ ಮಂಡಳಿಸಿ ಕಟ್ಟಿಬರೆ, ಕಟ್ಟಿಬಂದು ರೂಪು ರೇಖೆವಡೆಯೆ, ರೇಖೆ ಕೋಮಳಿಕೆವಡೆಯೆ, ಕೋಮಳಿಕೆ ಕೊಂಕುವಡೆಯೆ, ಕೊಂಕು ಬಿಂಕಂಬಡೆಯೆ, ಬಿಂಕಂ ಲುಳಿವಡೆಯೆ, ಲುಳಿ ನವಣಿವಡೆಯೆ, ನವಣಿ ಬಹುವಿಕೆವಡೆಯೆ, ಬಹುವಿಧದ ವಹಣಿಯ ವಾರಚಿತ್ರದ ಗತಿಗಳೊಳ್ ಮೆಱೆದು

ಬಿರುದಂ ಮೇಳಯದೊಳ್ತೊಡರ್ಚಿ ಬಿರುದಂಕಂ ಮೆಚ್ಚುತುಂ ಸಾರ್ಚಿಮ
ಚ್ಚರದಂಕಂ ಕಳದಲ್ಲಿ ನೋಡು ಬಯಲೊಳ್ಬೇಡೆಂದು ಕೈಯಾಣಿಯಿ
ಟ್ಟರ[2] ಸಂಕಂ ಪಱೆಗುಟ್ಟಿ ಮಾಸವಳದಂಕಂ ಬಾಸೆಯುಂ ಸಾಱೆ ಬಿ
ತ್ತರದಿಂದಿರ್ದುದು ಮೊತ್ತದಿಂದೆ ಭೃಗುಪಿದ್ಯಾಮೂರ್ತಿ ಮಾರ್ತಟ್ಟವೊಲ್ ‖ ೨೯

ವ‖ ಮತ್ತಮತ್ತ ಕಂಟಿಯುಬಾರದ ಸೀಯದರದೆಡೆಯೊಳ್ ಮೇಲೆ ಸಾಱುವ ಡಾಡೆಯ ದನಿಗಂ ಕೆಳಗೆಸೆಯೆ[3] ತೆಮಳ್ದು ಕುಪ್ಪಳಿಸುವಂದುಗೆಯ ತೊಡರ ಬಲ್ಲಿಗೆ[4] ಬಲ್ಲುಲಿಗಂ ಸುಟ್ಟುರೆ ಮಸಗಿ ಸುಟಿದು ನೆಗೆದು ಕವ್ವರಸಿ ಕವಿವ ಸೊರ್ಕಿನ ಸೊವಡಿಂಗಂ ರಾಜಾಂಗಣದೊಳ್ ಪಣ್ಣಿ ಬಂದು ನಿಂದ ಯಾಮಸಾಮಜಸ್ತೋಮಮನಿತುಂ ಬಾಯ್ವಿಟ್ಟು ಬೆದಱೆ ದೆಸೆಗೆಟ್ಟೋಡೆಯುಂ। ಎರಲ್ವಟ್ಟೆಗೆತ್ತಿ ಸುಟ್ಟಿಸಿದ ಕೆಯ್ಯ ಸುಯ್ಯಭರದೊಳ್ ಸುಱಿದು ಸೂಸುವ ಪುಷ್ಕರದ ತುಂತುಱಿಂ ತುಱುಗಿ

1 ಗ. ಳೆರಡೆರಡೆ. 2 ಗ. ಟ್ಟಿರೆಸಂಕಂ. 3 ಕ. ತೆಮಳ್ದಿ. 4 ಗ. ಬಲ್ಲುಲಿಯಂ.

ಸುತ್ತಿದ ಪಂಚಾಯುಧದ ಪುಲ್ಲಿಗೆಯ ತೊಂಗಲ ಸೆಱಂಗು ನಾಂದುಪಿಣಿಲ್ಲೇಱಿದೆ ಟಲ್ಚಿದ ವೇಣಿಯೊಳ್ಪೆಣೆದು ಮಿಂಚಿನಂಚೆವೆರಸು ಕಾರ್ಮುಗಿಲ ಬಿಟಲು ಕಾಲೂಱಿ ದಂತೆ ಮೇಲೆ ಮೆಱೆಯೆಯುಂ। ಗಂಡಮಂಡಳದಿಂ ಬಿರಿವಿಟ್ಟಂಬರಕ್ಕೊಗೆವ ಮದದ ಕದಡಿನ ತೋರಧಾರೆಗಳನಡಿಗಡಿಗಪ್ಪಳಿಸುವಗ್ರಪಲ್ಲವದ ಚಪ್ಪರಣೆಗಳಿಂ ಬೆಪ್ಪಳಿಸಿ ನೆಗೆದು ತಿಮಿರ್ದ ಕುಂಕುಮದಿಂ ಕೆಂಕಮಾದಂಗವಟ್ಟದೊಳ್ ಬಿಂದು ವಿಟ್ಟು ಕಿಱುಪುಲಿಯ ಜೋಡಂ ತೊಟ್ಟಂತಿರಿಪ್ಪಳಮಾಗೆಯುಂ । ಭೋರೆಂದು ಸುರಿವ ಕೀಲ್ಮದದ ಪೂರದಿಂ ಕಾರ ಕಾವಣಮಂ ಜಂಝಾನಿಳನೊತ್ತುವಂತೆ ಕುಱುಕುಱುಂ ಮೆಟ್ಟಿ ನಡೆಯಿಸುತ್ತುಂ, ಗಜಱುವ ಗಳೆಕಾಱರ, ಚಪ್ಪರಿಸು ವೊಪ್ಪಕಾಱರ, ಕರೆವ ಪರಿಕಾಱರ, [1] ಪಾರೈಸುವಾರೆಕಾಱರ ನೆರವಿಗಳಂ ಕೈಸ ನ್ನೆಯಿಂ ನಿವಾರಿಸುತ್ತುಂ । ಪೊಱಮುಯ್ಯಿನೊಳ್ ಮಲಂಗಿದ ಕೂರಂಕು ಶದಿನೆಳವೆಱೆ ಮೂಡಿದ ಮೂಡವೆಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು ತಮಂಗಮಂಟಪದ ಮತ್ತವಾರಣದ ಕೆಲಕ್ಕೆ ಮತ್ತವಾರಣಮಂ ಸಾರ್ಚಿ ಪೊಡೆವಡುತ್ತುಂ

ತಟಿಯೊಳ್ ಚಾದಂತನೆನ್ನಾನೆಗೆ ಮಲೆದೊಡೆ ವೈಹಾಳಿಯೊಳ್ ದಿಗ್ಗಜಂ ಬೆಂ
ಬಟಿಯೊಳ್ ಕಾಲ್ಗೊೞ್ದೊಡೀಕಟ್ಟಣಕದ ಮದದೊಳ್ ಕರ್ಬೊಲಕರ್ಾವರೂಹುಂ।
ಸುಟಿದೋಡಿತ್ತಾದೊಡಾರೋಹಕತನಮನೆಲೇ ಕೇಳ ನೀ ನಿನ್ನ ಕೈಗೈ
ವಟಿಯೊಳ್ ಕಲ್ತಾತ [2] ನಲ್ತೆಂಕುಡು ಸಮಯಮನೆಂದಂಕದಾಸಾರರಿರ್ದರ್॥ ೩೦

ವ॥ ಅದಲ್ಲದೆಯುಮಲ್ಲಿ ಪಣ್ಣಿಸಿ ಬಂದು ಮೆಲ್ಲಮೆಲ್ಲನೆ ಸುಟಿವ ಪೀಯೂಷ ಪೋಷಮೃಗ್ಯುಳೂಕಸಂಭವಂಗಳುಂ ದೇವಮುನಿಸತ್ವಂಗಳುಮಪ್ಪ ಪಟ್ಟತರದ ವಾರುವಂಗಳಾಂದೆಯಂತೆ ಮದಕ್ಕೆ ಮೆಱೆವ ತಪ್ಪಿದಕ್ಕರದಂತೆ ತೊಡಿಗೆಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾತಿಜಾಯಿಲಂಗಳನುಯ್ಯಲ ಮಣಿಯನೊಲೆದು ಬಿಟ್ಟಂತೆ ತಿರಿಪಿ [3] ತಂದು ಸಮ್ಮುಖದೊಳ್ ಕೈಕೊಳಿಸುವ [4] ಮೆಲ್ಲಾಯದಲ್ಲಿ ಪೊಲ್ಲದಿನು [5] ಲ್ಲಾಳಸಮೆಸೆವು ಲ್ಲಾಳದೊಳಂ ಕೆದಱಿದ ಪೂವಲಿಯ ಕುಸುಮದೆಸಟ ಪರಿಮಳಮನಂಟಂಟು ವಾಸಿಸುವಂತೆ ನಾಸಾಪುಟದಿಂ ಖುರಪುಟಮಂ ಸೂಸಿ ಬಂಬಲು [6] ತುರುಂಗಲಾಗಿ

---

1 ಕ. ಪಾಲ್ಯೆಸುವಾಲೆಕಾಱರ. 2 ಗ. ನಲ್ಲೆಂ. 3 ಕ. ತಮ್ಮ
4 ಕ. ವೆಲ್ಲಾಯ. 5 ಗ. ಮು. 6 ಗ. ತುರುಂಗಲ್ಮಾಗಿರೆ.

ರೆವೊಳಿಸಿ ಪೊಱಮಡುವ ಕಾಲನವಣಿಗಳೊಳಮೇಂ ನವವಿಧದ ಬಿನ್ನಣಮಂ ನಿನ್ನಾ ಳ್ದಂಗೆ ಬಿನ್ನವಿಸೆಂಬಂತಿರುದ್ಭಾವಂಬಡೆದು ಮುಱಿದು ಪತ್ತಿಸಿದ ಕೊರಲ ಕೊಂಕಿನೊಳಂ ಚಳಯಮಿತ್ತ ಕತ್ತುರಿಯ ಕದಡಮೆಟ್ಟದಂತಿರುಟ್ಟೆಳಿಸಿ ಪಾಯ್ವ ಪಡೆಮೂತ್ರದ ಪದಪಿನೊಳಂ ಕೈಮಣಿಗೊಂಡ ಪೆಱವನಂತೆ ಕುಕ್ಕುರಿಸಿ ಪೊಕ್ಕುಸಾರ್ವ ಪಚ್ಚೆವದ ಪದಪಿನೊಳಂ ಮೆಟ್ಟಿ ನೋೞ್ಪ ರಾಜರಾಜನ ಕಣ್ಗೞಂಗಣದೊಳ್ ಬೆಡಂಗು ಭಂಗಿವಡೆವಿನಮೇಱಿ ತೋಱಿ ಪೆಸರಿಟ್ಟು ಪೋಗಟ್ಟಿ ಕುದುರೆಕಾಱರ [1] ಕೇಣಕದನುಮಾನಕ್ಕವೋಜಾಯಿತರೋಜೆಯೊಲವ [2] ಱಿದ ಭೂಮನಕ್ಕಂ ಸಕ್ಕಸಮನಾಗಿ ತೂಗಿದಂತೆ ಲುಳಿಯುಸಲ್ಗೞಿಯ ಮೇಲೆ ಹೋಯೆಂದು ನಿಲಿಸಿ

ಖುರಮಂ ನಾಸಿಕೆ ಸೂಸುವಂದದೆ ಚೆಡಂಗಂ ತ್ರಾಸಿನೊಳ್ತೂಗಿದಂ
ತಿರೆ ಲೋಹಕ್ಕೆ ನಿರಾಳವಾಗಿ ಮೊಗಮಿತ್ತುದ್ಘಾವಮಂ ಜಾಱುಕ|
ಲ್ಪರಿವಂತಾಸೆಯ ಪೈಸರಂ ಮೆಱೆವ ಚೆಲ್ವಂ ದೇವ ನೀವೇಱಿ ನೋ
ಡಿರೆ ಚಿತ್ತಂಬಡೆದಪ್ಪುವೆಂದು ಮೆಱೆದರ್ ವಾಹಂಗಳಂ ವಾಹಕರ್ ‖ ೩೧

ವ‖ ಅಂತುಮಲ್ಲದೆಯುಂ

ತನಿಗಂಪುಂ ಕಡುಸೊಂಪುಮಗ್ಗಳದ ಪೆಂಪುಂ ಕೂಡೆ ಕೈವಂದ ನಂ
ದನವಂತೋಲಗಮಿರ್ದ ದೂಱಿಪುಱಿವಾಗಾಬ್ಬೈಸಜಾ [4] ತೂಱಳೂ |
ವಿನವೀಸಾವಿಸಸಾವುಘೇವ್ವಘವುಘೇಹೋಜಾಗುಬೊಲ್ಲೆಂಬ ಗೋ
[5] ಸನೆಯಂ ತಾಳ್ದಿತು ಗಂಡುಗೋಗಿಲೆಯ ತಂಡಂ ಪ್ರಾತಿಹಾರ್ಯಸ್ವನಂ ‖ ೩೨

ವ‖ ಅಂತು ಒಡ್ಡೋಲಗವಷ್ಟಪರವೆಷ್ಟವಾಗಿರ್ದವಾಪ್ರಸ್ತಾವದೊಳ್

ದೆಸೆವಿಸರಂ ಪ್ರವಾಲಲತಿಕಾವಳಿಯಿಂ ತಳಿರ್ವೇಱಿದಪ್ಪುದಾ
ಗಸವರುಣಾಂಬುಜಾತನವರಾಜಿಗಳಿಂ ದಳವೇಱಿದಪ್ಪುದ|
ರ್ವಿಸೆ ಮಣಿಮಾಲೆಯಿಂ ಜಲದಮಾಲೆ ಫಲಾವಲಿವೇಱಿದಪ್ಪುದಾ
ವೆಸಕಮಿದೆಂದು ನೋಡಿಮುದು ಮೂಡಿದ ಕೌತುಕಮಂ ಸಭಾಜನಂ ‖ ೩೩

---

1 ಕ. ಕೇಣದನುಮಾನಕ್ಕವೋಜಯಿತ. 2 ಗ. ವಕವ. 3 ಗ. ಸಕ್ಕು.
4 ಏಳಹೂ (ಕಾವ್ಯಸಾರದ ಪಾಠ.) 5 ಕ. ಸನಮುಂವಾಳ್ದುದು.

ವ॥ ಆಖಂಡಳದಿಶಾಮಂಡಳದಿನಂತು ಬಳ್ಳಿಳ ಬಳೆದ ಕದಂಬವೆಳಗೆಂಬ ಧವಳಾರುಣನೀಲನೀರರುಹವನಕ್ಕಿದಿರೆೞ್ದು ಲೋಚನಮರೀಚಿಗಳ್ ವಿಕಸಿತಸರೋವರಜಳಂಗಳನಳಂಕೆಗೊಳಿಸಿ

ಅದು ನಾನಾರತ್ನರೋಚಿಃಪಟಳಜಟಿಳಮಂ ಪುಷ್ಪಕಾನೀಕಮಲ್ಲಿ
ರ್ದುದದೇಂ ತೂಣೀರದೊಳ್ತೀವಿದ ಕುಸುಮಶರಶ್ರೇಣಿಯಂತಲ್ತು ಚಿತ್ರಂ ।
ಒದವಾಳೀಜಾಳದೊಳ್ಪೊಯ್ದೆಳವೆಱಗೆಯಲ್ತಲ್ಲದಭ್ರಾಬ್ಧಿಯಿಂದಂ
ಸುದತೀಸಂದೋಹಮಿಂತಿಂತೊಗೆದಪುದೆನುತಿರ್ದತ್ತು ತದ್ರಾಜಲೋಕಂ ॥ ೩೪

ವ॥ ಅನ್ನೆಗಮಿತ್ತಲೆಸಟ್ಟಸಗಿದಲರ ಗೊಂಚಲ್ಗಳನಿಟಿಪ ಚಂಚರೀಕಸಂಚಯದಂತೆ ಪಾಱುನೀಱೆಯರ್ ಪುಷ್ಪಕವಿಮಾನಮಾಳೆಗಳಿನವನೀತಳಕ್ಕವತರಿಸಿ ಪರಿಷದ್ವಲಯಮಂ ಪುಗುತಪ್ಪಾಗಳ್

ಯುವತಿಜನಕುತಕಪಾತ್ರ
ಪ್ರವೇಶದೊಳ್ ಸಭೆಯನವರ ತನುಸುರಭಿಗದೇಂ ।
ಕವಿದತ್ತೊ ನೀಲಚೇಲದ
ಜವನಿಕೆವಿಡಿದಂತೆ ಮುಂತೆ ಭೃಂಗೀಪಟಲಂ ॥ ೩೫

ಆಸಭೆಗೆ ಪುಗುವ ಖಚರವಿ
ಲಾಸಿನಿಯರ್ ನಡೆವ ನೆವದೆ ಕುಸುಮಾಂಜಲಿಯಂ ।
ಸೂಸಿದರೆಂಬಿನಮೇನಧಿ
ವಾಸಿಸಿದುದೊ ಚರಣನಖಮಯೂಖಪ್ರಕರಂ ॥ ೩೬

ನೆಲನಂ ಮುಟ್ಟದ ಖೇಚರ
ಲಲನೆಯರ್ಗರುಣಾಬ್ಜದೆಸಟನೊಡ್ಡಿದಳವನೀ ।
ಲಲನೆಯೆನೆ ನೀಳ್ದ ಕುಟ್ಟಿಮ
ತಲದೊಳ್ ಪಾರ್ವೊಳೆದುವಂಘ್ರಿಕಿಸಲಯರುಚಿಗಳ್ ॥ ೩೭

ತರುಣಿಯರಿದೆ ಕಟಿದಪ್ಪದ
ಸುರಚಾಪತರಂಗಿಣೀಪ್ರವಾಹಾಂತರದೊಳ್ ।

ಬರುತಿರ್ದಪರೆನೆ ರಶನಾ
ಪರಿಕರಶಬಳಾಂಶು ಮುಟುಗಿಸಿತ್ತೋಲಗಮಂ ॥ ೩೮

ನಳಿನವನಶ್ರೀನಿವಹಂ
ಕಳಹಂಸಂಬೆರಸಿ ಬಂದುದೆನೆ ಲತಿಕಾಕೋ ।
ಮಳೆಯರ ನಡುವೋರ್ವಂ ನಿ
ರ್ಮಳರೂಪಂ ದ್ವಿಜಕುಲೋತ್ತಮಂ ಬರುತಿರ್ದಂ ॥ ೩೯

ವದನದೊಳಿರ್ದ ತತ್ವತರುಣೀನಯನಾಂಶುಕದಂಬದಂತಿರಿ
ರ್ದುದು ಕಿವಿಯೊಳ್ ಚಲನ್ಮಕರಕುಂಡಲಶೋಭೆ ಲಲಾಮಕಂ ಲಲಾ ।
ಟದ ನಯನಂಬೊಲಿರ್ದುದೆಸೆದಿರ್ದುದು ತಕ್ಕುಪವೀತಮಾತನಂ
ಗದೊಳೆಡೆಗೊಂಡ ಭಾರತಿಯ ಹಾರರುಚಿಪ್ರತಿಬಿಂಬಮೆಂಬಿನಂ ॥ ೪೦

ಬಳಸಿ ತಲೆಪಟ್ಟ ದುರಿತಂ
ಗಳೊಳಿಕ್ಕತುಳಕ್ಕೆ ತಕ್ಕನುಷ್ಠಾನಪದಾ ।
ವಳಿಯಂತಿರ್ದುದು ತಿರ್ದಿದ
ಪಳಿತಾರ್ಧಶ್ಮಶ್ರುಲಂಬಕೂರ್ಚಕಳಾಪಂ ॥ ೪೧

ಕೆಂಗದಿರ ನಖದ ಕಿಸಲಯ
ದಂಗಸ್ಪರ್ಶನದೆ [1] ಶುಚಿಗಳಾಗಲ್ ಬಂದಾ ।
ಲಿಂಗಿಸಿದವೊಲೆಸೆದುದು ವಸ
ನಾಂಗದ ತಳಿರ್ಗಾಸೆ ಪಾರ್ವನುರುಕಟಿತಟದೊಳ್ ॥ ೪೨

ತುಂಬಿ ಪರಿಮಳಕೆ ಬಳಸಿ ನಿ
ಲುಂಬಿರೆ ನಿರ್ದಂಡಚಂದ್ರಕಚ್ಛತ್ರಮನಾ ।
ಲಂಬಿಸಿದುದವನ ಸೇಸೆ ತು
ರುಂಬಿನ ಮಂದಾರಪಾರಿಜಾತಪ್ರಸವಂ ॥ ೪೩

ಪಿಂತಣ ಶಿಷ್ಯನ ಕರಶಶಿ
ಕಾಂತಕಮಂಡಲು ಪಳಚ್ಚನೆಸೆದಿರ್ದುದು ಶು ।

1 ಕ. ರುಚಿ.

ದ್ಧಾಂತಃಕರಣೋಪಾಧ್ಯಾ
ಯಾಂತೇವಾಸಿಯವೊಲಾಧರಾಮರಪತಿಯಾ ॥ ೪೪

ಮಾಣಿಯ ಕೌಂಕುಟ ಚರಿತವು
ರಾಣದ ಕವಳಿಗೆ ಸಮಾನಮಾಯ್ತುಮಳಪಚೋ ।
ಬಾಣಂ ತೆಕ್ಕನೆ ತೀವಿದ
ತೂಣೀರತಳಾಗ್ರಭಾಗದೊಳ್ ಧಾರ್ಮಿಕನಾ ॥ ೪೫

ವ॥ ಅದಲ್ಲದೆಯುಂ

ಪರಿವಾರಾಂಗನೆಯರ್ ಪರಿಗ್ರಹಮಣಿಸ್ರಕ್ಪಾದುಕಚ್ಛತ್ರಚಾ
ಮರತಾಂಬೂಲಕರಂಕದರ್ಪಣನಪೀನಪ್ರಾಭೃತಾಮಪ್ರಸುಂ ।
ದರಹಸ್ತಾಬ್ಜೆಯರೆತ್ತಲುಂ ಬಳಸಿ ತನ್ನಂ ಬರ್ಪಿನಂ ಬಂದಳಾ
ಸ್ಮರಚಕ್ರೇಶನ ರಾಜ್ಯಲಕ್ಷ್ಮಿಯೆನಿಪನ್ನಂ ನಾಯಿಕಾಗೌರವಂ ॥ ೪೬

ವ॥ ಅಂತು ಬಂದು ನೃಪೇಂದ್ರಪ್ರ್ಯಗೇಂದ್ರವಿಷ್ಟರಕ್ಕನತಿದೊರದೊಳ್ನಿಂದು ನಿಜರಾಜ್ಯವಿಶಿಷ್ಟನನಿಷ್ಟಶರ್ಮನೆಂಬನನೆ ಪುರೋಹಿತನಂ ಮುಂತಿಟ್ಟು ಕಾಣಿಸಲೊಡಂ

ಕರನಖರಕುಮುದಕುಸುಮಾಂ
ಕುರಷಂಡಂ ವಿಮಲದಂತಕಾಂತಿಪ್ರಭೆಯಿಂ।
ಶರದದ ಪೊಸವೆಳ್ದಿಂಗಳೊ
ಳಿರೆ ಭವತೇಸ್ವಸ್ತಿಯೆಂದು [1] ಸಂಯುತಹಸ್ತಂ ॥ ೪೭

(ಸಂಸ್ಕೃತ ಶ್ಲೋಕ)

ಭೂತಭವತ್ತೀರ್ಥ [2] ಕೃತಸ್ಸತಾನಸ್ಸಫಲಮಸ್ತು ತವ ನೃಪತೇ ।
ಅವಿರತಮನನ್ತನಾವ್ನಾ ಪ್ರೇಮರಸೋದ್ಭಾವಿತೀರ್ಥಕೃತಃ ॥

ವ॥ ಎಂದಾಶೀರ್ವಚನಪುರಸ್ಸರಂ ಸಿದ್ಧಶೇಷಾಕ್ಷತಪ್ರಸ್ತಪ್ರಶಸ್ತಪ್ರಸ್ತರಣ ನುಚಿತಪ್ರದೇಶದೊಳಿರ್ಪುದುಮಾನಿತಂಬಿನೀವಿಯಚ್ಚರಲೋಕದೊಳ್ ಅಚ್ಚರಿಯೆ

1 ಗ. ಸಮ್ಮುಖ. 2 ಕ. ಕೃತಂಸಂತಾನಾ. ಗ. ಕೃತಂಸಂತಾನ.

ನಿಸಿದುಪಾಯನ ಸಹಸ್ರಮಂ ಸಖೀಸಹಸ್ರಂ ಕೈಗೈಯೊಳ್ ನೀಡೆ ತಾನೆ ಕಳೆದು ಕೊಂಡು ಸಿಂಹಸೇನಮಹಾರಾಜಂಗಂ ಜಯಶ್ಯಾಮಾಮಹಾದೇವಿಗಮವಟಯಿಸು ವಾಗಳ್ ಕೆಲದೊಳಿರ್ದ ಮಂತ್ರಿಮಹತ್ತರರಾಧರಾಪುರಮುಖ್ಯನನೀಮಹಾನು ಭಾವೆ [1] ಯಾದ ಮನೋಹರಿಯ ಪೆಸರೇನೆಂದು ಬೆಸಗೊಳಲೊಡನಾತಂ

(ತರಲವೃತ್ತಂ)

ಮದನಮಂಜರಿಯೆಂಬಳೀಕೆ ಭುಜಂಗಸೇನನೃಪೇಂದ್ರನ
ಗ್ಗದ ತನೂಭವೆಯೆಂಬುದುಂ ಕರೆಗಣ್ಮಿ ಕಂಬನಿ ಕಂಠದೊಳ್ ।
ಪುದಿಯೆ ಗದ್ಗದನಾದಮುಳ್ಳೆರ್ದೆ ಡಕ್ಕೆವಾಯೆ ನಿಜೇಶನಂ
ಕದಿನಿಳೇಶನ ಕಾಂತೆ ಚೆಚ್ಚರಮೆರ್ದು ಬಿಚ್ಚತಮಪ್ಪಿದಳ್ ॥ ೪೮

ಫಳಭರನಮ್ರಕಮ್ರಲತೆಯಂ ಲತೆ ತೆಂಬೆಲರಿಂದಮಪ್ಪಿದಂ
ತೆಳಸಿದ ಸೋದರಪ್ರಣಯದಿಂ ಲಲಿತಾಂಗಿಯರಪ್ಪಿ ನೀಳ್ದ ತೋಳ್ ।
ಬಳಸಿದುವಿಲ್ಲ ಪೆರ್ಮೊಲೆಗಳಿಂ ನಡುವಂ ನಡುಸೋಂಕಿತಿಲ್ಲ ಮೈ
ಪುಳಕದಿನೊಂದಿತಿಲ್ಲ ಬಗೆಯಿಂ ತೆಗೆದಪ್ಪಿದರೊರ್ವರೊರ್ವರಂ ॥ ೪೯

ವ॥ ತದನಂತರಂ

ಪಳಯಿಪ ಸರಸೀರುಹದಿಂ
ತಿಳಿಗೊಳದೊಳ್ ತೇಂಕಿಪ ಮುದಶ್ರುಪೂರದೆ ಮನದು ।
ಚ್ಚಳದಿಂದಕ್ಕನ ಕೇಸಡಿ
ದಳಿರ್ಗೆ ಜಯಶ್ಯಾಮೆ ಪಾದ್ಯಮಂ ಪ್ರಕಟಿಸಿದಳ್ ॥ ೫೦

ವ॥ ಅಗಳಾಪ್ರಣಯಪ್ರವಾಹಿನಿಯೊಳ್ ಮುಳುಂಕಿ ತೇಂಕಾಡುವ ಪಂಕ ಜಾನನೆಯುಂ ಸಿಂಹಸೇನಮಹಾರಾಜನಿಂತೆಂದಂ:—

ವ್ಯಾಮೋಹಂ ನಿನಗಿನಿತಾ
ಯ್ತಾಮಾನಿನಿ ನಮಗದಾವಳೆಂದನುನಯದಿಂ ।
ಭೂಮೀಶಂ ಕೇಳೆ ಜಯ
ಶ್ಯಾಮಾವಧು ಕಿಂಚಿದವನತಾನನೆಯಾದಳ್ ॥ ೫೧

---

[1] ಕ. ಯಾವಳ್ ಈ.

ಸುಟಿಗೊಂಡೆೞ್ಚು ಮುದಶ್ರು ಪಕ್ಷಪುಟದೊಳ್ ಬಟ್ವಾಡೆ ನುಣ್ಮಿಂಚು ಪೆ
ರ್ಮಿದೆಯೊಳ್ಪೊಣ್ಮಿದಪೋಲಪಾಂಗರುಚಿಗಳ್ತೊಳ್ಪಯ್ಯೆ ಶೋಣಾಬ್ಜದೊಳ್ ।
ಕೆಱೆಗೊಂಡಿಂದುಕಲಾಂಕುರಚ್ಛವಿಯುಮೊಲ್ ಬಿಂಬೋಷ್ಠ ಪಿಂಬಾದ ಬೆಂ
ಬಟಿಯೊಳ್ ಪುಂಜಿಪ ದಂತಕಾಂತಿ ಬಟಿಕಿಂತೆಂದಳ್ ಮಹೀಕಾಂತನೊಳ್ ॥೫೨

ವ॥ ದೇವ ನೀಮುನ್ನ ಪರಿಣಯನದಂದು ಬಂದು ಕಂಡ ಕಾಶ್ಮೀರದೇಶಕ್ಕೆ ವಿಶೇಷವಾದ ಪದ್ಮನಗರದೊಳ್ ಎಮ್ಮ ತಾತಂ ಭುಜಂಗಸೇನಮಹಾರಾಜಂ * ಈ ಮದನಮಂಜರಿಮಹಾದೇವಿಯನೆ ನಿಮ್ಮನೆ ಪಡೆದಣುಗಿನೊಳ್ ಕೊಂಡಾಡೆ ನಡೆಯಿಸೆ ಶ......ನಸಮಯದಂತೆ ರೂಢಿಸಿ ನಡೆಯಲಱಿಯದೆ ಶೈಶವದೊಳೊಮ್ಮೆ ಹರ್ಮ್ಯಾಂಗಣದ ಮರಾಳಕೇಕಿಗಳೊಡನೆ ನಡೆಗಲ್ವಂತೆ ಕಣ್ಗೊಳಂಗಣಕ್ಕೆ ಮಂಗಳಾಳಂಕರಣವಾದ ಬಾಲಕೇಳೀವಿಲಾಸದೊಳ್

(ಉಜ್ಜ್ವಲವೃತ್ತ)

ಮದನಮೋಹನಪುತ್ರಿಕೆ ಮುದ್ದಿಂ ದಟ್ಟಡಿಯಿಟ್ಟಪುದೆಂಬ ಚೆ
ಲ್ವಿದಿಗೊರ್ಗಳುತ್ತಿರೆ ರಾಜಗೃಹಪ್ರಾಸಾದಮಣಿಪ್ರಘಣಾಂತರಾ ।
ಳದೊಳಗಾಡುವ ಬಾಲಕಿಯಂ ವಿದ್ಯಾಧರನುತ್ಪಲಚೂಡನೆಂ
ಬದಟನುದ್ಧತಯಾನವಿಮಾನಂ ಕಂಡು ಮನೋಜವಿಮೋಹದಿಂ ॥ ೫೩

ನಡೆವ ಬಯಲ್ದಾವರೆಯುಂ
ನುಡಿವಂಗಣಕುಮುದಕುಸುಮಮುಂ ಕಂಡಳಿಗಳ್ ।
ಒಡವೆಱಗುವಂತಿರೆಱಗಿದ
ಕಡೆಗಣ್ಗಳ ಕಾಂತಿಯಿಂದೆ ತೆಗೆದಂ ಖಚರಂ ॥ ೫೪

ವ॥ ತೆಗೆದು ಗಗನಲತಾಕುಸುಮದಂತಿರೆಸೆವ ಪುಷ್ಪಕದೊಳ್ ನಿಜಪರ್ಯಂಕ......ನಂ ಮಾಡಿ ಬಾಲಕಿಯಂ ಸಮ್ಮೋಹಿಸಿ ವಿದ್ಯಾಪ್ರಭಾವದಿಂ ಮೋಹಿಸೆ ತಾತಮಾತೃಜನಂ ಕೇಳಿ ಶೋಕಾಪನೋದವಾದನಮನೇನಾನುಮಂ ನುಡಿದು ನಿಜನಿವಾಸಕ್ಕೊಯ್ದು * * ತುಹಿನಕರಕಳೆಯುಂ ಬಳಯಿಸುವ ಗಗನವಲ್ಲಭ

* ಇಲ್ಲಿಂದ * * ಇಲ್ಲಿಯವರೆಗ ಕ. ಮಾತೃಕೆಯಲ್ಲಿ ಪಾತವಾಗಿದೆ.

ನಂತೆ ಕಳಾಕಳಾಪದೊಳಂ ವಿದ್ಯಾಧರವಿಳಾಸದೊಳವೊಡನೊಡನೆ ಒಳಸೆ ಬಳೆಯು ಮಳವಿಗಟಿದ ತಾರುಣ್ಯರಾಗದಿಂ ಬಣ್ಣಿಸಿದಂತೆ ಲಾವಣ್ಯರಸದಿಂ ನುಣ್ಣಿಸಿದಂತೆ ಮಂದಗಮನೆಯ ಸೌಂದರ್ಯಮಾಶ್ಚರ್ಯಮನಳಂಕೆಗೊಳಿಸೆ

ಅಯಸಂ ಮಾತೃಪಿತೃದ್ವಯಂ ಕುಡದೆಯುಂ ಕೊಂಡಂದು ಮತ್ಖೇಚರಾ
ನ್ವಯಮಂ ಪೊರ್ದುಗುಮೆಂದು ಪದ್ಮನಗರಕ್ಕೈತಂದು ತಾತಂಗೆ ವಿ ।
ಸ್ಮಯಮಪ್ಪಂತಿರೆ ರೂಪುವಿಭ್ರಮವಿಲಾಸಾಶ್ಚರ್ಯಮಂ ತೋಱಿ ಕ
ನ್ನೆಯನಾಖೇಚರನೊಳ್ ಭವ [1] ಚ್ಛ್ವಶುರನತ್ಯುತ್ಸಾಹದೊಳ್ ಕೂಡಿದಂ ॥ ೫೫

ಎಂದೀಕೆಯ ವೃತ್ತಾಂತಮ
ನಂದಾಂ ಕೇಳ್ವೆಂ ಮದೀಯಪುಣ್ಯಫಲಂಗಳ್ ।
ತಂದೆಮ್ಮಂ ಕಾಣಿಸಿದವೊ
ಲಿಂದೀಗಳ್ ಕಂಡೆನೀಚಕೋರೇಕ್ಷಣೆಯಂ ॥ ೫೬

ವ॥ ಎಂಬುದುಮಿಲಾಕಾಂತನತ್ಯಂತ ವಿಸ್ಮಯಸ್ವಾಂತನಾಗಿ ನಿಜಮನೋವಲ್ಲಭೆಯೊಳೊದವಿದೌತ್ಸುಕ್ಯಸಂಕಟಮನಾನುಕೂಲ್ಯದಿನಗಲೆದೆಗೆದು ಮದನಮಂಜರಿಯಂ ಕೆಲಕ್ಕೆದೆಗೆದು ಇಷ್ಟಶರ್ಮರಂ ವಿಶಿಷ್ಟಾಸನದೊಳಿರಿಸಿ ಪರಿಚತೋಪಚಾರಚಾತುರ್ಯವಚನರಚನೆಗಳಿನಾಚಕೋರಲೋಚನೆಯನನುನಯಿಸುತ್ತುಂ ಓಲಗಮಂ ಪರೆಯಲ್ವೇೞ್ದು ಗೃಹಮಹತ್ತರಾನ್ತರ್ವಂಶಿಕನರ್ಮಸಚಿವ ಹಿತಪುರೋಹಿತಸೌವಿದಲ್ಲರಾಜವಲ್ಲಭಪರಿಮಿತಪರಿಜನಪುರಜನಪರೀತನಾಗಿ ಬೞಿಯುಮಿಂತೆಂದಂ:—

ಧರಣೀಭರ್ತೃ ಭುಜಂಗಸೇನನವನೀಸಾಮ್ರಾಜ್ಯಮಂ ಕೀರ್ತಿಶೇ
ಖರನೊಳ್ [2] ನೆರ್ಮಿಸಿ ಪೆರ್ಮೆಯಂ ಪಡೆದುದಂ ಮುಂ ಕೇಳ್ವೆವಿಂದೆಮ್ಮ ದೇ ।
ವರನೇಂ ಕ್ಷೇಮದೊಳಿರ್ದನೇ ಕುಶಲವೇ ತದ್ವಲ್ಲಭಂಗಂ ಭವ
ದ್ಗುರುಪಾದಾಬ್ಜಪರಾಗರೇಣುತಿಲಕಂ ತದ್ರಾಜ್ಯಮೇಂ ಪೂಜ್ಯಮೇ ॥ ೫೭

ವ॥ ಎಂದು ಭಾವಂ ನಿಜಪ್ರಭಾವಸಂಭಾವಿತನಮ್ರಕಮ್ರಾಮ್ರೇಡಿತಮಂ ಮೆಱೆಯಲೊಡಮಾಮೃದುಮಧುರಭಾಷಿಣಿ

1 ಕ. ಗ. ತ್ಸುಸುರ. 2 ಗ. ನಿರ್ಮಿಸಿ.

ದೇವರ ನಣ್ಪಿನಿಂ ನಿಜವಿಳಾಸನಶಾಸನರಾಜ್ಯವೈಭವಂ
ದೇವರ ಪೆಂಪಿನಿಂದೆ ಗುರುಪಾರ್ಥಿಕರಾಜವಿಲಾಸಗೌರವಂ ।
ದೇವರ ತೇಜದಿಂದೆ ಪುದಧೀಶವಿಲಾಸಮನೂನವಿಾಗಳಿಂ
ದೇವರ ಮಿತ್ರನಂತೆಸೆವುದುನ್ನತಿವೆತ್ತ ಕುಳಂ ನಿರಾಕುಳಂ ॥ ೫೮

ವ॥ ಎಂದು ಮತ್ತಮಿಂತೆಂದಳೊಂದುದಿವಸಂ ವಿನೇಯವೃಂದಮನಾನಂದರಸದಿನೋಕುಳಿಯಾಡಿಸಲ್ಬಂದ ಬಸಂತದ ನಂದೀಶ್ವರಾಷ್ಟಮಿಯೊಳ್ ವಿಶಿಷ್ಟಾಷ್ಟಮಂಗಳಪುರೋವರ್ತಿ ಕೀರ್ತಿಶೇಖರಮಹೀವಲ್ಲಭಂ ಮದೀಯವಲ್ಲಭಸಮೇತಮಾಂ ಬೆರಸು ಪೂರ್ವವಿದೇಹಾಗತಚಾರಣ ಮುನೀಂದ್ರ ವೃಂದಾರಕರ ತಪಃಫಲಾವಳೀನಿರ್ಗಳಿತ ಶಾಂತರಸಪ್ರವಾಹವಿತಾನನಿಜಲತಾಪ್ರತಾನನಾನಾಖಗಮೃಗವಿಶಿಷ್ಟಮಾಗಿ ವಿಷ್ಟಪತ್ರಿತಯಾಗ್ರಲಕ್ಷ್ಮೀಕೇಳೀಶಿಖರದಂತೆ ಭುವನಶೇಖರಮಾದ ಕುರುವಿಂದಮೆಂಬ ಗಿರಿವರಕ್ಕೆ

ಭುವನೈಕಾರಾಧ್ಯರಂ ಪೂಜಿಸುವೆಸಕದೆ ಪೋತಂದು ಮಾಂಗಲ್ಯಪೂಜೋ
ತ್ಸವದಿಂದಂ ಭಾಪನುಂ ಮೈದುನನುಮೆಸೆಯೆ ಕಲ್ಯಾಣಮಂ ಮಾಡಿ ಧರ್ಮ ।
ಶ್ರವಣಾನಂತರ್ಯ[1] ಕಾರ್ಯಂ ಮನದೊಳಿರೆ ಜಯಶ್ಯಾಮೆಗಿನ್ನಾತ್ಮಜಾತೋ
ದ್ಭವಮೆಂದಕ್ಕುಂ ನಮೋಸ್ತುಂ ಬೆಸಸಿಮೆನೆ ಮುನಿಶ್ರೇಷ್ಠರಿಂತೆಂದು ಪೇಳ್ದರ್ ॥

ಪರಮಮುನೀಂದ್ರದಿವ್ಯವಚನಾಮೃತವರ್ಷಮನಾಂ[2] ತೆರಳ್ಪುವಂ
ತಿರೆ ಪವಣಲ್ತದಂ ಘನರಸಾವಹವಾಕ್ಯದಿನಿಷ್ಟಶರ್ಮನಿಂ ।
ಸುರಿಯಲೊಡರ್ಚಿ ಬಂದೆನಿವರಿಂದವಧಾರಿಸಿ ಕೇಳ್ವುದಂತದ
ಚ್ಚರಿ ಸವಣೋ ಅಮೋಘವಯಣೋ ಎನೆ ತಪ್ಪದು ತತ್ಫಲೋದಯಂ ॥ ೬೦

ಎಂಬ ಕಳಸ್ವನಸ್ತನಿತಮಾಸ್ಮಿತವಕ್ತ್ರೆಯ ವಕ್ತ್ರಬಿಂಬಕಾ
ದಂಬಿನಿಯಿಂದಮುಚ್ಚಳಿಸಿ ಚೆಚ್ಚರಮಾನರನಾಥಯುಗ್ಮಕಾ ।
ದಂಬಲತಾಮಹೀರುಹಯುಗಂ ನಿಜಬಂಧುಜನಾವಳೋಕಮೆಂ
ದೆಂಬ ಕದಂಬಮುಗ್ನತೆಯನಾಳ್ದುದು ಕಂಟಕಪುಲ್ಲಪುಂಜದಿಂ ॥ ೬೧

1 ಕ. ಕಾರ್ಯಾನುನಯ. 2 ಕ. ತರಳ್ಚನಂ.

ಪಿರಿದೊಂದಾದರದಿಂ ನನಾಂದೃಪರಿವಾರಸ್ತ್ರೀವಯಸ್ಯೋರ್ವರಾ
ಮರರಂ ಮಜ್ಜನಭೋಜನಚ್ಛದನಭೂಷಾಲೇಪಮಾಲಾಪರಂ ।
ಪರೆಯಿಂ ಮನ್ನಿಸಿ ಮುನ್ನೆ ತೀರ್ಚಿ ಗಗನಾಧ್ವಶ್ರಾಂತಿಯುಂ ತತ್ಕಥಾಂ
ತರಮಂ ಕೇಳಲೊಡರ್ಚಿದಂ ಬಟಿಕಮಾಸಾಹಿತ್ಯರತ್ನಾಕರಂ ॥ ೬೨

ಗದ್ಯ ॥ ಇದು ಪರಮಜಿನಸಮಯವನವಸಂತಸಂತಾನಾರಾಮರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂ
ತಃಕರಣ ಕವಿ ಚಕ್ರವರ್ತಿಬಿರುದ ಕವಿಭಾಳಲೋಚನ ಜನಾ
ರ್ದನದೇವವಿರಚಿತಮಪ್ಪ ಅನಂತನಾಥಪುರಾಣದೊಳ್
ಸಿಂಹಸೇನ ಮಹಾರಾಜರಾಜ್ಯೋತ್ಸವವರ್ಣನಂ
ದ್ವಿತೀಯಾಶ್ವಾಸಂ

---

# ತೃತೀಯಾಶ್ವಾಸಂ

ಶ್ರೀವನಿತೆವೊಲ್ ಜಯಶ್ಯಾ
ಮಾವಧುವಿರಲ್ಸಖಿ ಮದನಮಂಜರಿ ಸಹಿತಂ ।
ಸಾವಸ್ಥಿಕಕಥನಸುಧಾ
ಸೇವೆಯೊಳಿರ್ದಂ ವಿನೇಯಜನಮುಖತಿಲಕಂ ॥ ೧

ವ॥ ಆಗಳಾಧರಾಮರಮುಖ್ಯಂ ಧರಾಪಾಳಕಚೂಡಾಮಣಿಗಿಂತೆಂದಂ:—

ಪ್ರಜ್ಞಾರ್ಗಗಮಮಂ ಲೋ
ಕಜ್ಞರ್ಗಱಿವನಿತನುಸಿರ್ವುದೆಗ್ಗೆನೆ ನಿಮಗಾಂ ।
ತ್ರಿಜ್ಞಾನಧರರ್ಗೆ ಕತೆವೇ
ಳ್ವಜ್ಞತೆ ಸೂರ್ಯಂಗೆ ಸೊಡರನಿಡುವಂತೆ [1] ವಲಂ ॥ ೨

ವ॥ ಆದೊಡಂ

ಸಂಧಾನಿತಗುರುಭಾಷಾ
ಸಿಂಧುಸುಧಾಪಾನ [2] ಸಮ್ಮದದೆ ಮತ್ತಮನೋ ।
ಬಂಧುಜನವ್ಯಾಮೋಹನಿ
ಬಂಧನಮನುವಿಸೆ ನೃಪೇಂದ್ರ ಬಿನ್ನವಿಸಿದಪೆಂ ॥ ೩

ವ॥ ಎಂದು ಬಿನ್ನವಿಸೆ ಸಿಂಹಸೇನಮಹಾರಾಜ [3] ನೊಳಾಭಿಮುಖ್ಯತೆಯಂ ಪಡೆದು ಪೇೞಲುದ್ಯುಕ್ತನಾದನದೆಂತೆಂದೊಡೆ:—

ಅದು ಜಂಬೂದ್ವೀಪಮಂಭೋಧಿಯ ಪೊಱತಟದೊಳ್ ಧಾತಕೀಷಂಡಮಿರ್ದ
ಪ್ಪುದು ಕಾಳೋದಾಬ್ಧಿ ತನ್ನಂ ಬಳಸಿ ಪಡುವಲುಂ ಮೂಡಲುಂ ಮಂದರಂ ಮ।

1 ಕ. ವೊಲಂ. 2 ಗ. ಸಮ್ಮದೊಳ್. ಕ. ಸಮ್ಮದದೊಳ್.
3 ಕ. ನೊಳಭಿಷೇಕಮುಖ್ಯಂ.

ತ್ತದಱೊಳ್‌ನಿಂದಿರ್ಪುವಾವುಂದರವೆರಡಱೊಳ್ಬೆಂದ್ರೀದಿಶಾಮಂದರಕ್ಕಿ
ರ್ಪುದುದೀಚೀಭಾಗಮುಖ್ಯಂ ಬಹುಜನಪದಸಂಸಖ್ಯಮೈರಾವತಾಖ್ಯಂ ॥ ೪

ವಿಜಯಾರ್ಧಾಚಲಕಕ್ಷವರ್ಷ [1] ವರವಂಶವ್ಯಂಸಕುಂಭಸ್ಥಳಂ
ಗಜದಂತಾಯತದಂತದಂಡಯುಗಳಂ ನಾನಾನದೀಪೂರದಾ ।
ನಜಲಂ ದೇಶವಿಶಿಷ್ಟಪುಷ್ಪಪೃಥುಲಾಂಗಂ ತೋಱೆ ಬೇಱೊಂದು ದಿ
ಗ್ಗಜಮೈರಾವತಮುಂಟು ಜಂಭರಿಪುಗೆಂಬಂತಿರ್ಪುದೈರಾವತಂ ॥ ೫

ಅದಱೊಳ್ ಮೆಱೆವಾರ್ಯಾಖಂ
ಡದ ಮಧ್ಯದೊಳಖಿಲಸುಖದ ಕಣಿ ಚಾಗದ ಭೋ ।
ಗದ ನೆಲೆ ಪೆಂಪಿನ ಸೊಂಪಿನ
ಸದನಂ ಮೆಱೆದತ್ತು [2] ಕೋಸಲಂ ಪೇಶಲದೊಳ್ ॥ ೬

ತೆಮರೆಲ್ಲಂ ಜೈನರಾಜಾಯತನಮೆ ಕುಟಿಯೆಲ್ಲಂ ನವಾಂಭೋಜಿನೀಷಂ
ಡಮೆ ಪೌರೋದ್ಯಾನಮೆಲ್ಲಂ ಸುರಕುಜಮೆ ತಱಿಂಬೆಲ್ಲಮುತ್ಕೀರ್ಣಕೇದಾ ।
ರಮೆ ಕಾಡೆಲ್ಲಂ ಮದೇಭಾಕರಮೆ ಹನುದರೆಲ್ಲಂ ಕನಚ್ಛೋಚಮೋಚಾ
ಘಮೆ ಬೆಟ್ಟೆಲ್ಲಂ ಮಣಿಪ್ರಾಕಟಖನಿಯೆ ಗಡಾದೇಶಮಾಶ್ಚರ್ಯದೇಶಂ ॥ ೭

ಅಲರ್ಗಣೆ ಪುಷ್ಪವಾಟಿಕುಲದೊಳ್ ಒಳೆದಪ್ಪುವು ಮೀನಕೇತುಗಳ್
ಜಲರುಹಷಂಡದೊಳ್ ಮೆಱೆವುತಿರ್ದಪುವಿಕ್ಷುವಣಂಗಳಲ್ಲಿ [3] ಬಿ ।
ಲ್ಲೊಲೆಗೆವರುತ್ತುಮಿರ್ದಪುದು ಕಾದಪೆನೆಂದು ವಸಂತನೆತ್ತಲುಂ
ತೊಲಗದೆ ನಿಂದನಂಗಭವನಾಜ್ಞೆಯೊಳಾವಿಷಯಾಂತರಾಳದೊಳ್ ॥ ೮

ಇಲ್ಲ ಮರಾಳಮಿಲ್ಲದ ಕೊಳಂ ಕೊಳನಿಲ್ಲದ [4] ಪಾಣಿ ಪಾಡು ಪಾ
ಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂವಲರ್ದ ಪೂ ।
ವಿಲ್ಲದ ಮಲ್ಲಿಕಾಲತಿಕೆ ಮಲ್ಲಿಗೆಯಿಲ್ಲದ ಮಾವು ಬಂದ ಮಾ
ವಿಲ್ಲದ ನಂದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಣಂ ॥ ೯

---

1 ಕ. ವರವಂಶಂ ವ್ಯಂಶ. ಗ. ವಂಶದ್ವ್ಯಂಶ. 2 ಕ. ಕೌಂಶಲಂ.
3 ಕ. ಬಿಲ್ಲೊಲೆದೆ, 4 ಗ. ಪಾಣಿಪಾಣಿಪಾಡು.

ತೆನೆ ಪಾಲ್ದೇಱಿದ ಶಾಲಿಗಂಪುಗಡಲೊಳ್ ಮುಪ್ಪಾಡಿಮುಪ್ಪಾಡಿ ಕಾಂ
ಗಿನ ಪೊಂಬಾಳೆಯ ನಟ್ಟಿಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ ಮಾ ।
ವಿನರಲ್ಗೊಂಚಲ ತಳ್ತೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪ
ದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಳೆಗುಂ ಕಾಸಾರತೀರಂಗಳೊಳ್ ॥ ೧೦

ವ॥ ಅಂತು ಸಕಲಜನಮನೋನಯನಾನಂದಕರಮಾದ ನಗರಗ್ರಾಮ ಸೀಮಾಪ್ರತಿಬದ್ಧಮಪ್ಪ ನಂದನವನಪ್ರದೇಶಂಗಳಲ್ಲಿ

ಎಳಲತೆ ಪೆಕ್ಕಣಕ್ಕೆ ತಳಿರಂ ತೆಗೆದುಟ್ಟುಳಡಕ್ಕೆ ನಟ್ಟುವಂ
ಮಳಯಸಮೀರಣಂ ಪನಸರಂಗಳೊಳಿಂತಿವೆ ಬಣ್ಣಿಬಂದ ಮ ।
ದ್ದಳೆ ಮಧುದೂತಿ ನಾಗಲತೆ ಮಲ್ಲಿಗೆ ಮಾಲತಿ ಒಸ್ನಿಮೆಂದು ಸೂ
ಟ್ಟಳನವೊಲೆತ್ತಲುಂ ಕರೆಗುಮಾಬನದೊಳ್ ಕಿಸುಗಣ್ಣ ಕೋಕಿಲಂ ॥ ೧೧

ವ॥ ಮತ್ತಮಾಜನಪದಂ ಜನಾರ್ದನನಂತೆ ವನಮಾಲಾವಿಲಂಬಿತಮಾಗಿಯುಂ ನಿರಂತರಮಧುಮದೋದ್ಧತವೃತ್ತಮುಂ। ಚಂದ್ರನಂತೆ ಸಕಲಸಸ್ಯಸಂಪತ್ಕರಮಾಗಿಯುಂ ಅಪಗತದೋಷಾನಿವೇಶಮುಂ। ಇಂದ್ರನಂತಿರಧಿಗತಸುಧರ್ಮಾಮಾಗಿಯುಂ ಕುಲಗೋತ್ರಾನುಬಂಧಸಮೃದ್ಧಮುಂ। ವಿಯತ್ತಳದಂತೆ ನಾನಾಗ್ರಹಾರಶೋಭಿತಮಾಗಿಯುಂ ಅತಿವಿಪ್ರಕರಪ್ರವರ್ತನಮುಂ। ಮಾರ್ತಂಡನಂತನಂತಗೋಮಂಡಲಮಂಡಿತಮಾಗಿಯುಮನಸ್ತಮಿತಪ್ರಭಾವಮುಂ । ಸಮುದ್ರದಂತೆ ರಾಜಪ್ರಸಾದಪ್ರವರ್ಧಿತಮಾಗಿಯುಂ ಅನ್ಯವಾಹಿನೀಸಂಭೇದರಹಿತಮುಂ। ಸ್ವರ್ಗಲೋಕದಂತೆ ಸಂಭೃತಾಪ್ಸರಸರೋವರವಿಳಾಸಮಾಗಿಯುಂ ಪೂರ್ವದೇವಾಯತನಸಮಾಕುಳಮುಂ। ಭಾರತದಂತೆ ಧರ್ಮಜಾತಾರ್ಜುನಯಶಃಪೂರ್ಣಮಾಗಿಯುಂ ದೂರೀಕೃತಭೀಮದುಶ್ಶಾಸನವಿರೋಧಮುಂ। ರಾಮಾಯಣದಂತೆ ಸೀತಾನುಕೂಲಫಲಭೋಗಭೂಮಿಯಾಗಿಯುಂ ವರ್ಧಿತದಶಾನನಶ್ರೀವಿಡಂಬಮುಮೆನಿಸಿ ಪುತ್ತಮವಿರುದ್ಧವರ್ಣನಾಳಂಕಾರಮಾದುವಲ್ಲಿ

ಪುರಮುರ್ವೀಮಣಿನೂಪುರಂ ಜನಪದಶ್ರೀವಕ್ತ್ರಬಿಂಬಕ್ಷಪಾ
ಕರನಂತಿರ್ಪುದು ಲಕ್ಷ್ಮಪಕ್ಷ್ಮಪಟಲಭ್ರೂವಲ್ಲರೀಕುಂತಳೋ ।
ತ್ಕರಶೋಭಾವಹಸೋಮಸೂರ್ಯಸರಣೀವೇಲ್ಲಗ್ನಮಾಲಾಪುರಂ
ದರನೀಲೋತ್ಪಲರಮ್ಯಹರ್ಮ್ಯಧವಳಾಗಾರಾಂಶು ರಾರಾಜಿಕುಂ ॥ ೧೨

ಉರಗ ನರ ಖಚರ ಕಿನ್ನರ
ಸುರವರ ಪುರನಿಕರ ಶೋಭೆಗಂ ಭುವನಶುಭೇ ।
ತರತತಿಗಮರಿಷ್ಟಮನಾ
ಚರಿಪುದರಿನರಿಷ್ಟವೆಸರಿನೆಸೆವುದು ನಗರಂ ॥ ೧೩

ಜಿನಚೈತ್ಯಾರಾಜಿರಾಜಲ್ಲಯಮುಖವಿಭವದ್ವೀಚಿಕಾಬಾಹುಶಾಖಾ
ಭಿನಯೋದ್ಯತ್ಪ್ರಾರಲಕ್ಷ್ಮೀರಮಣಿಯ ಕಟಿಸೂತ್ರಂ ವಿಚಿತ್ರಾಂಬರಂ ತಾ ।
ನೆನೆ ರತ್ನಾಟ್ಟಾಳ [1] ಶಾಖಾವಳಿ ಮೆಱೆವ ಮದಿಲ್ ಸಾರಸಾಂಭೋಜಿನೀಜೀ
ವನನೀಲೀವರ್ಣಸಾಮ್ಯಂಮೆಱೆವ ಪರಿಖೆ ಲೋಕಾವಲೋಕಾಭಿರಾಮಂ ॥ ೧೪

ಪುರಲಕ್ಷ್ಮೀಹರಿತೋತ್ತರಂಗರುಚಿರೋದ್ಯಾನಂಗಳೊಳ್ ಕೂಡುವೋ
ಪರ ಕಂಠಧ್ವನಿಗಳ್ ಶ್ರವಸ್ಸುಭಗಮಾಗೆಯ್ತಂದು ತತ್ತತ್ಪರೀ ।
ಸರವೆಲ್ಲದ್ಗರುಡೀಶ್ರಮಾನುಗತಿವೇಗಂ ಲಾಗದೊಳ್ ತಪ್ಪೆ ತ
ದ್ಗುರುಹಸ್ತಶ್ರಮದಂಡಚಂಡಹತಿಯಂತಕ್ಕುಂ ಕುಮಾರರ್ಕಳೊಳ್ ॥ ೧೫

ಸುಟಿವ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯು
ಗ್ಗಟಿಯ ಮದಾಂಬುಕರ್ದಮದೊಳರ್ದು ಬನಂಗಳೊಳಿಂಬುವೆತ್ತ ತ ।
ಣ್ಬುಟಿಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂ
ಪುಟಿಯು [2] ನಲರ್ಚ ತೀಡುವುದು ತತ್ಪುರಬಾಹಿರಮಂದಮಾರುತಂ ॥ ೧೬

ನಯನೋನ್ಮಾದಮನೀಯೆ ನುಣ್ಚರಿಜುಗಳ್ ಕಣ್ಬೇಟದಿಂ ದ್ವಾರಶಾ
ಖೆಯ ಕಾಳಾಗರುಧೂಪಧೂಮವಿಸರದ್ಭೃಂಗೀನಿಸ್ಪೃಷ್ಟಾರ್ಥದೂ ।
ತಿಯರಿಂ ಸೃಷ್ಟಿಸುತಿರ್ಪುದಾಪುರದ ಸೂತ್ರಕ್ಷೇತ್ರದೊಳ್ ಕೇರಿಕೇ
ರಿಯ ಸೌಧೋತ್ತರಭೂಮಿಕಾಪ್ರಕರಬಿಭ್ರತ್ಪುತ್ರಿಕಾವಿಭ್ರಮಂ ॥ ೧೭

ತರುಣಿಯುರಂಗಕಾಂತಿಗಳ ಕೂಡೆ ಕಡಲ್ ಪರಿದಲ್ಕಿ ಸೂಸುವಾ
ಭರಣಮರೀಚಿಕಾಲಹರಿಗಂ ಮೃಗನಾಭಿಲತಾಂತಚಂದನಾ ।
ಗರುಘನಸಾರಸೌರಭತರಂಗಿಣಿಗಂ ಪೊಳೆದರ್ದಿದಂತೆವೊಲ್
ಪರಿವುದು ಹಾರಿಗೊಂಡ ಧವಳಾರದ ಕೇರಿಯ ಬೀದಿಬೀದಿಗಳ್ ॥ ೧೮

---

1 ಕ. ಶಾಲಾ. 2 ಕ. ನೆಲರ್ಚ.

ಆಪುರಮನಾಳ್ವನುದ್ಗತ
ಗೋಪುರಮಂ ವಿಜಿತಶಕ್ರಧನಪತಿವರುಣ ।
ತ್ರೈಪುರಮಂ ಧರಣೀಮಣಿ
ನೂಪುರಮಂ ಧೃತಘನೋರಥಂ ಪದ್ಮರಥಂ ॥ ೧೯

ಧರೆಯಂ ದಕ್ಷಿಣಬಾಹುಮೂಲಮೃಗನಾಭೀಕರ್ದಮಶ್ರೀಸಹೋ
ದರಿಯಂ ಮಾಡಿದನಗ್ರನೇಮಿಕತಚೂರ್ಣೀಭೂತವೀರಾರಿಭೂ ।
ವರನುದ್ಗತ್ರಯಪಾದಮಾರ್ಗಜಲಮಾರ್ಗಾಸೇತುದಂಡಪ್ರಚಂ
ಡರಥಂ ಪದ್ಮರಥಂ ಯಶಸ್ಥಗಿತದಿಗ್ವಾರಾಶಿಪಾರಾಪಥಂ ॥ ೨೦

ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ ಲೌಕಿಕಪ್ರವ
ರ್ತನೆಗಳ ವಾರ್ತಿಕಂ ರಿಪುಷಡನ್ವಯರೋದದ ಟಿಪ್ಪಣಂ ಧರಾ ।
ವರಗುಣದೊಂದು ಟೀಕು ಪರಮಾರ್ಥವಿವೇಕದ ಭಾಗ್ಯಮೆಂದೊಡಾ
ಜನಪತಿರತ್ನಶೇಖರನ ರಾಜಗುಣಂ ಬುಧಸೇವ್ಯಮನ್ನಿರೇ ॥ ೨೧

ಧನದಾರಾಪ್ಲವಮಂ ವಿರೋಧಿನೃಪಕೋಟಾಕೂಪದಿಂ ಮಂತ್ರಯಂ
ತ್ರನಿಬದ್ಧಪ್ರಭುಶಕ್ತಿಸಂಭೃತಘಟೀಸಂದೋಹದಿಂ ತೋಡಿತೋ ।
ಡಿ [1] ನಮತ್ಪಾರ್ಥಿವಮೌಳಿಭೃತ್ಯಸುಹೃದಾಪ್ತಾನೇಕಸತ್ಪಾತ್ರನಂ
ದನಮಂ ವರ್ಧಿಸುತಿರ್ಕುಮಾನೃಪನ ಬಾಹಾಸಾಹಸೌದ್ಯಾನಿಕಂ ॥ ೨೨

ಹಾರದ ಕಟ್ಟಳೆ ವಿಜಯಯು
ಶೋರಮಣಿಯುರಾಗಿ ನೆಲಸೆ ನೃಪನುದ್ಧರಿಸಲ್ ।
ವೀರದ ವಿತರಣದ ಮಹಾ
ಭಾರತುಳಾದಂಡಮಾಯ್ತು ಬಾಹಾದಂಡಂ ॥ ೨೩

ಕಾಮನ ಭುಜಬಲಲಕ್ಷ್ಮಿಯೊ
ಕಾಮನ ಭುಜವಿಜಯಲಕ್ಷ್ಮಿಯೋ ಪೇಟೆನೆ ಲ ।
ಕ್ಷ್ಮೀಮತಿಯೆಂಬಳ್ ಕುಲಮಹಿ
ಷೀಮಂಡನಮಾದಳಾಧರಾಧೀಶ್ವರನಾ ॥ ೨೪

1 ಕ. ನಮತ್ಪಾರ್ಥಿವಮಂ ವಿರೋಧಿ.

ತರಳಾಪಾಂಗೆಯ ರೂಪವಿಭ್ರಮವಿಲಾಸಾಶ್ಚರ್ಯಮಂ ನೋಡಿ ತ
ದ್ವಿರಹಾವಸ್ಥೆಯೊಳಂಗಜಂ ಕರಗಿದಂ ದೋಷಾಕರಂ ಕಂದಿದಂ ।
ಮರವಟ್ಟಂ ಮಧುವಿಂತನಂಗತೆ ಕಳಂಕಿತ್ವಂ ವನಾಸಕ್ತಿ ನಿ
ರ್ನರವಾಯ್ತೇಕೆನೆ ತಲ್ಲತಾಂಗಿ ತಳೆದಳ್ ಸೌಶೀಲ್ಯಸೌಭಾಗ್ಯಮಂ ॥ ೨೫

ತರುಣಮೃಗೀವಿಲೋಚನೆ ಮರಾಳಮದಾಲಸಯಾನೆ ಕೇಕಿಭಾ
ಸುರಕಚಭಾರೆ ಕೋಕಯುಗಪೀನಪಯೋಧರೆಯಾಕೆ ದೀವಮಾ ।
ಗಿರೆ ನೃಪನಂತರಂಗವನದೊಳ್ ಸಲೆ ಗೋರಿಗೊಳಿರ್ಪನುಲ್ಲಸ
ತ್ಕರಣಗಣಂಗಳಂ ಕುಸುಮಸಾಯಕನೆಂಬ ವಿನೋದಿಲುಬ್ಧಕಂ ॥ ೨೬

ತರುಣಾರ್ಕಂ ನೆಲಸಿರ್ದ ಪೂರ್ವಗಿರಿನಾಥಂ ಪೋತಶೀತಪ್ರಭಾ
ಕರನೊಪ್ಪಿರ್ದಮೃತಾಬ್ಧಿ ದಾರಕನಮೇರುಪ್ರೀತಿ ಚೆಲ್ವಾದ ಚೈ ।
ತ್ರರಥಂ ತಾನೆನೆ ಸೂನು ಮೇಘರಥನಿಂ ತಳ್ವಿದ ನುಣ್ಪಿಂಗೆ ಪ
ದ್ಮರಥಂ ತುಂಗಭುಜಂ ಗಭೀರವಿಭವಂ ಸಂಸಾರಸಾರೋದಯಂ ॥ ೨೭

ಸರಸಿಜರತ್ನರಾಗರುಚಿಯಂ ದಿಗಧೀಶಕಿರೀಟಕೋಟಿಯೊಳ್
ವಿರಚಿಸೆ ತನ್ನ ತೇಜದೆಸಕಂ ದೆಸೆವೆಣ್ಗಳ ತುಂಗಪೀನಪೀ ।
ವರಕುಚದೊಳ್ ತಳತ್ತಳಿಪ ಮುತ್ತಿನ ಹಾರಮನಿಕ್ಕಿ ಕೀರ್ತಿಮಂ
ಜರಿ ನೆಗಟ್ದಿಂತು ಪದ್ಮರಥನಾಳ್ದನಿಳಾತಳರಾಜ್ಯಲೀಲೆಯಂ ॥ ೨೮

ಇರೆ ಪರಿಷನ್ಮಂಡಲದೊಳ್
ಹರಿಪೀಠೇ ಘಟಿತ ಸಿಂಹಕಟಿತಟನರಸಂ ।
ಪರಿವೃತಪರಿಮಿತಪರಿಜನ
ಪರಿಚಿತಪರಿಹಾಸಸರಸಗೋಷ್ಠಿನಿವಿಷ್ಟಂ ॥ ೨೯

ಇದು ತಾಂ ಸ್ವರ್ಗಾಪವರ್ಗಪ್ರಮದೆಯ [1] ಬಟಿ ಸಂಸಾರಸಮ್ಮೋಹವಿಚ್ಛೇ
ದದ ದೂತಂ ವೃತ್ತರತ್ನತ್ರಯಕರಯುಗಸಂಧಾನಸಂದಾಯಕಂ ದಾ ।
ನದಯೋದ್ಯಾನಪ್ರತಾನಪ್ರಬಳನವನಪಾಲಂ ದಲೀಬಂದನೆಂಬಂ
ದದಿನೊರ್ವಂ ದಿವ್ಯಯೋಗೀಶ್ವರಸಮುದಯಸಂವೇದಕಂ ಬಂದನಾಗಳ್ ॥ ೩೦

---

1 ಕ. ಬಳ.

ವ॥ ದೌವಾರಿಕನಿವೇದಿತನಿಜಗಮನನೆಯ್ದೆವಂದು ಕರಕಮಳಕುಟ್ಮಳಘಟಿತನಿಟಿಳಾರ್ಘಮೃಗಾಂಕನಖಿಳಮಂಗಳಾಶೀಸ್ತರಂಗಿತಾನನಕುಶೇಶಯನನತಿದೂರದೊಳ್ನಿಂದು ದೇವಾ ಬಿನ್ನಪಮೆಂದು ನಮ್ಮ ವಸಂತಸುಭಗಮೆಂಬ ನಂದನದ ಪರಿಸರಾಗಣ್ಯಪುಣ್ಯಾರಣ್ಯಮಂ ಸನಾಥೀಭೂತಂಮಾಳ್ಪ ಭೂತಗಿರಿಯ ಭುವನಶಿಖರಜಿನಾಲಯದ ಘರಿಸೂತ್ರಸೂತ್ರಿತ ಚೈತ್ರಾನಂದನ ಮದೀಯನಂದನವನಕ್ಕೆ

ಬನಮೆ ಬನಕ್ಕೆ ಬಾವರಿಗೆಬಂದವೊಲಾದುದು ತಂಡತಂಡದಿಂ
ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮಸೀದಳಕುಂಡಿಕಾಳಿ ತ ।
ಜ್ಜಿನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿ ಕಟ್ಟಿದ
ತ್ತೆನಿಸಿದುದಿಂದು ಸಾಧುಜನಸಂಗಸಮಾಗಮನಪ್ರಪಂಚದೊಳ್ ॥ ೩೧

ಅಮೃತಕರನುದಯದೊಳ್ ಬಳೆ
ದಮೃತಾರ್ಣವಲಹರಿಯಿಂದೆ ವೇಳಾವನಮಾ ।
ಳೆ ಮುಳುಂಕಿದಂತೆ ಬನಮಾ
ಸಮುದಾಯದ ಶಾಂತರಸದೆ ಮುಳುಕಿದುದರಸಾ ॥ ೩೨

ವ॥ ಎಂದು ಬಿನ್ನವಿಸಲೊಡಂ ಆಸನದಿನೆದ್ದು ತದ್ದಿಶಾಭಿಮುಖಕ್ಕೆ ಜಯಜಯನಿನಾದಮುಖರಿತಮುಖನಾಗಿ ಮೂಮೆ ಪೊಡೆಮಟ್ಟು

ಮುಂದೆ ನೆರೆವಮೃತಲಕ್ಷ್ಮೀ
ಸುಂದರಿಗನುರಾಗದಿಂದೆ ಲಂಚಮನೀವಂ ।
ತಂದಂಗಚಿತ್ತಮಿತ್ತಂ
ಬಂದ ಮುನೀಶ್ವರರನಖಿಪಿದಾತಂಗಾತಂ ॥ ೩೩

ವರಕಾಂತಾಕರಪದ್ಮಪತ್ರಧೃತ [1] ರತ್ನಾಮತ್ರಪೂಜಾಪರೀ
ಕರನಾಘೂರ್ಣಿತಗೀತವಾದ್ಯಪಟಹಪ್ರಧ್ವಾನನಾದಾತ್ಮಿಕಾಂ ।
ಬರನಾಪದ್ಮರಥಂ ಬಟಿಕ್ಕೆ ತಳರ್ದಂ ಲಕ್ಷ್ಮೀಮತೀದೇವಿ ಮೇ
ಘರಥಂ ಮಂತ್ರಿಮಹತ್ತರರ್ ಮಕುಟಬದ್ಧರ್ ಕೂಡೆ ಬರ್ಪನ್ನೆಗಂ ॥ ೩೪

---

1 ಕ. ರಾದೆಂಮತ್ರ.

ವ॥ ಅಂತು ಸಭಾ[1] ಸದನದಿಂ ತಳರ್ದು ವೇದಿಕೋಪಾಂತಮತ್ತವಾರಣಕ್ಕೆ ವಾರಣಸಾದಾನಾಧಿಪತಿ ಸಾರ್ಚಿದ ಮತ್ತವಾಗಣದ ಪೂರ್ವಾಸನಮನಳಂಕರಿಸಿ

ಯತಯಾತಪ್ರೌಢಿಯಿಂ ಮಿಂಚಿನ ಮೊಗವಡಮಂ ಬೀಸೆ ಕೂರಂಕುಶಂ ಪ್ರೇ
ರಿತಮತ್ತೇಭಕ್ಕೆ ನಾನಾಮಣಿಖಚಿತಕಿರೀಟಪ್ರಭಾಪುಂಜಮುದ್ಯೋ ।
ತಿತಶುಭ್ರೈಕಾತಪತ್ರಕ್ಕೆಸಗೆ ಸುರಧನುರ್ಝಲ್ಲರೀಪಟ್ಟಮಂ ವಿ
ಶ್ರುತಪುಣ್ಯಂ ಪುಣ್ಯಪುಂಜಾಕರಮೆನಿಸಿದ ಭೂತಾದ್ರಿಯಂ ಮುಟ್ಟಿವಂದಂ ॥ ೩೫

ವ॥ ಅಂತು ಬಂದು ತದ್ವನೋಪಾಂತದೊಳವಕೀರ್ಣಪಟ್ಟವರ್ಧನಗಜೇಂದ್ರಸಪರ್ಯಾಶ್ಚರ್ಯಪರ್ಯಾಯಧಾರಿಣೀವಾರನಾರೀ ಸಹಸ್ರಪರೀತನಾತಪೋವನವೀಧಿಯೊಳ್ ನಡೆತರ್ಪಾಗಳ್

ಪುರುಡಿಸೆ ಪೋರದೆ ಪೆಣ್ಗಾ
ತುರಿಸದೆ ಪಿಶಿತಕ್ಕೆ ಪರಿದು ಕೊಲ್ಲದೆ ಚೇತಃ ।
ಪರಿಣಮನಸುಖದೆ ಸುಟಿವುವು
ಕರಿಕೇಸರಿ ಯೆರಳೆಪುಲ್ಲೆ ಮರೆಸಾರಂಗಂ ॥ ೩೬

ಕರಿಣಿ ಕರಾಂಗುಳಿಯಿಂ ಕೇ
ಸರಿಯ ಜರತ್ಕೇಸರಂಗಳಂ ತೊಡೆದುದು ಕೇ ॥
ಸರಿಣಿ ಮೊಲೆಯೂಡುತಿರ್ದುದು
ಕರೇಣುಪೋತಕ್ಕಮಾತ್ಮಸಂಜಾತಕ್ಕಂ ॥ ೩೭

ಪರಮತಪೋನಿಧಿಗಳ್ ಸಂ
ಚರಿಸುವ ಬಟ್ಟೆಯನಗಲ್ದು ನಟ್ಟವಿಸಿಲ್ ಕಾ ।
ಯ್ದುರಗಂ ಪುಡಿಯೊಳ್ ಪೊರಟು
ತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿದುದು ನೆಟಿಲಂ ॥ ೩೮

ಅವನತಕರ್ಣೆಯುನ್ನಮಿತವಕ್ತ್ರೆ ಸಮುದ್ಗತರೋಮಹರ್ಷೆಯು
ದ್ವಿವಳಿತಪುಚ್ಛೆ ಕುಟ್ಮಳಿತಲೋಚನೆ ಜೋಲ್ದು ಮಲಂಗಿ ಮೆಯ್ಯನೊ ।

---

1 ಗ. ವಚನ.

ಡ್ವಿಪಿನಮತೀಕ್ಷೆಗೂಡಿ ನಖರಾಂಕುರದಿಂ ಶ್ಲಥಕಂಟಕಾಂಡಕಂ
ಡುವನಪವರ್ತಿಸಿತ್ತು ಪುಲಿ ಪುಲ್ಲೆಗದೊಂದು ಲತಾವಿತಾನದೊಳ್ ॥ ೩೯

ವ॥ ಅದಲ್ಲದೆಯುಂ

ಎಳವಸಲೆಯ ಮೇಲೆ ಮರ
ಲ್ದೆಳವಿಸಿಲಂ ಕಾಯುತಿರ್ಪ ಫಣಿಗಳ ಫಣಮಂ ।
ಡಳಮಂ ಮಲಂಗಿ ಮೆಲ್ಪಂ
ತಳೆದುವು ಸುಖಮಗ್ನನಯನಮುಕುಳಂ ನಕುಳಂ ॥ ೪೦

ನೋಡುವ ಕಣ್ಮಲರ್ಗಮೃತಮ
ನೂಡುವ ಮುನಿವದನಶಾಂತಿರಸಪರಿಣತೆಯುಂ ।
ನೋಡಿ ಸುಖಜಲಧಿಯೊಳಗೋ
ಲಾಡಿದ ತೆಱನಾದುದಾನೃಪಾಲನಹೃದಯಂ ॥ ೪೧

ವ॥ ತದನಂತರಂ

ಮಂದರಮಂ ಬಲಗೊಳ್ವ ಪು
ರಂದರನವೊಲಷ್ಟಮಂಗಳಾನ್ವಿತಮರ್ಹ ।
ನ್ಮಂದಿರಮನಿಳಾಪತಿ ಬಲ
ವಂದೊಳಗಂ ಪೊಕ್ಕು ನೆಗಳೆ ಗೀತಾತೋದ್ಯಂ ॥ ೪೨

ಜಳದಿಂ ಚಂದನದಿಂ ತಂ
ಡುಳದಿಂ ಪೂಮಾಲೆಯಿಂದೆ ಚರುವಿಂ ದೀಪಾ ।
ವಳಿಯಿಂ ಧೂಪದಿನೊಪ್ಪುವ
ಫಳದಿಂ ತ್ರೈಳೋಕ್ಯನಾಥನಂ ಪೂಜಿಸಿದಂ ॥ ೪೩

ವ॥ ಅಂತು ನಿವೇದಿತಪೂಜಾವಿಧಾನನಾಗಿ

ಜಿನಪತಿ ದೇವದೇವ ನಿಜಸಂಸ್ತವನಾರ್ಚಿತ ಚಿಂತನೈಕಭಾ
ವನೆ ಖಳಕರ್ಮಕಂಚುಕಗಳಂ ಪೆಱಪಿಂಗಿಸಿ ತೋಱಲಿರ್ದ ಸೋ ।

ವನಮಿದಿರ್ವಂದು ನಿನ್ನ ಪದಪದ್ಧತಿಗಾಣಿಸಿತಂಜೆನಂಜೆನಿ
ನ್ನೆನಗರಿದಿಲ್ಲದೊಂದೆರಡುಮೂಱುಭವಂ ಪ್ರತಿಪರ್ವಲಂಘನಂ ॥ ೪೪

ವ॥ ಎಂದು ಸಾಷ್ಟಾಂಗಪ್ರಣಮನಪೂರ್ವದಿಂ ಅಭಿಷ್ಟುತಿಗೆಯ್ದು ಸಿದ್ಧಶೇಷಾಕ್ಷತಸುಗಂಧಿಗಂಧಜಲಪವಿತ್ರೀಭೂತಚೇತಸನಾಥೀಭೂತಜಿನಾಲಯದಿಂ ಪೊಱಮಟ್ಟು ಗುರುಚರಣಭಕ್ತಿಭಾಮಿನೀನಿರ್ದಿಷ್ಟವಿಶಿಷ್ಟಮಾರ್ಗನಾಸನ್ಮಾರ್ಗಭೂಷಣಂ ಸ್ವಯಂಪ್ರಭಪ್ರಚಲನನಳಿನೋಪಾಂತಪ್ರದೇಶಮನೆಯ್ದೆವರ್ಪಾಗಳ್

ಕಾರುಣ್ಯದ ಕಣಿಯೆನಿಪ ತ
ಪೋರಮಣರ ನಟ್ಟನಡುವೆ ಭಟ್ಟಾರಕನಾ ।
ಚಾರದ ಶೀಲಗುಣಂಗಳ
ಚಾರಿತ್ರದ ನಡುವಣಾತ್ಮನಿರ್ಪಂತಿರ್ದಂ ॥ ೪೫

ಬಹುಶಾಖದಶೋಕಾನೋ
ಕಹಮೆಸೆದುದು ಮುನಿಯ ಪೆಱಗೆ ನೆೞಲಾಗೆ ಮನ ।
ಸ್ಪೃಹೆಯಿಂದಷ್ಟಮಹಾಪ್ರಾ
ತಿಹಾರ್ಯಶರನೆರೆಯಲೆಂದು ದೂದಟ್ಟಿದವೊಲ್ ॥ ೪೬

ಮಾನಸಮೆನಿಸಿದ ಶುದ್ಧ
ಧ್ಯಾನಂ ಪ್ರತ್ಯಕ್ಷಮಾಗಿ ತಾನಲ್ಲಿ ಸುಖಾ ।
ಸೀನತೆವಡೆದವೊಲಿರ್ದಂ
ಮೌನಸುಧಾಸೂತಿ ಮಣಿಶಿಲಾಪಟ್ಟಕದೊಳ್ ॥ ೪೭

ಪುಲ್ಲಶರನಂಜಿ ಕರ್ಬಿನ
ಬಿಲ್ಲಂ ತಲೆಚಮರಿವೆರಸು ಬಿಸುಟಂತೆ ತಪೋ ।
ವಲ್ಲಭನ ಕೆಲದ ವೇತ್ರಲ
ತೋಲ್ಲಸಿತಕಳಾಪಗುಚ್ಛಮೆಸೆದುದು ಶುಚ್ಛಂ ॥ ೪೮

ಖಂಡಿಸಿದಂ ಮುನಿ ಸುಮನಃ
ಕಾಂಡನನೆಂದಳ್ಕಿ ಮಱೆಗೆವಂದುದು ಹಿಮರು ।

ಗ್ಮಂಡಳಮೆನೆ ಶಶಿಕಾಂತಕ
ಮಂಡುಲು ಪೊಳೆದತ್ತು ಚಳನನಳಿನಾಂತಿಕದೊಳ್ ‖ ೪೯

ಪ್ರೀಣನವಾದುದು ಮುನಿಗೀ
ರ್ವಾಣಮುಖಾಂಬುಜಮನಡರ್ದಿರಲ್ ಶ್ರೈಶವದೊಳ್ ।
ವಾಣೀವಧು ನಿಱಿಸಿದ ನಿ
ಶ್ರೇಣಿಯವೊಲ್ ಶ್ರುತದ ಠಪಣಿಕೋಲವಿಳಾಸಂ ‖ ೫೦

ವ‖ ಅಂತುಮಲ್ಲದೆ

ನನೆಯಂಬಂ ಬಿಸುಟಿಕ್ಷುಚಾಪಲತೆಯಂ ಬಾಪ್ಜೊಂಪದೊಳ್ಸಿಕ್ಕಿ ಕೇ
ತನಮಂ ಪಿಂಗೊಳದೊಳ್ ಬೆಲಂಗಿ ಮುನಿಪಾದೋಪಾಂತದೊಳ್ ಸಾಧುವೇ।
ಷನಿಷಣ್ಣಂ ರತಿಯಂ ಮರಳ್ಚಿ ಕಳೆದಂ ದೌಶ್ಚಿಂತ್ಯಪಾಶ್ಚಾತ್ಯಯಾ
ಯಿನಿಯಂ ಕಿಂಚಿದಪಾಂಗಸಂಸ್ಫುರಿತಸಂಜ್ಞಾಲೋಕದಿಂ ಮನ್ಮಥಂ ‖ ೫೧

ವ‖ ಅಂತು ಸಕಲಜನಮನೋನಯನಕ್ಕೈರವಾಕಾರಮುಂ ಸ್ವಯಂಪ್ರಕಾಶ ಪ್ರಭಾಪಟಲಮೆಸಟ್ಮಸಗಿಸೆ ನಿಜಂ ಸ್ವಯಂ [1] ಪ್ರಭಾಖ್ಯಾನಮನನಕ್ಷರಮಱಿಪುವಂ ತುಮಿರ್ದ ಮಹಾನುಭಾವನಂ ಸಂಘುಟಿತಕರಪಲ್ಲವನುಮವನತಶಿರಸ್ಸರೋಜ ನುಮಾಕುಂಚಿತತನುಲತಾವಿಳಾಸನುಮಾಗುತ್ತುಮೆಯ್ದೆವಂದು

ಚರಣಾಭ್ಯರ್ಚನವಂದನಾನವಧಿಪೂರ್ವಂ ಮೊಳ್ಗಿದುರ್ವೀತಳೇ
ಶ್ವರವಕ್ತ್ರೇಂದುವಿನೊಳ್ ನಮೋಸ್ತುಪದದಂತಜ್ಯೋತ್ಸ್ನೆ ಕೈಗಣ್ಮೆ ಶಾಂ ।
ತರಸಾಪೂರ್ಣಮುನೀಂದ್ರಸಾಂದ್ರಸಮುದಾಯಶ್ಲೇಷಪೀಯೂಷಸಾ
ಗರದೊಳ್ ತಳ್ತುದು ಧರ್ಮವೃದ್ಧಿರವಕಲ್ಲೋಲಾವಳೀಘೂರ್ಣನಂ ‖ ೫೨

ವ‖ ಅಂತು ಪರಸಿದ ಪರಕೆಗಳನಾಭವ್ಯರತ್ನಾಕರಂ ದಿವ್ಯಾಶೇಷಸ್ರಕ್ಸಮನ್ವಿತಂ ಕೈಕೊಂಡು ಸಮುಚಿತಾಸನದೊಳಿರ್ದನಂತರಮಿಂತೆಂದಂ

ಇದಿರ್ವಂದುದು ನಿಶ್ರೇಯಸ
ಪದವೀಫಲಭರನಮೇರುನಂದನವಾನಿಂ ।

---

1 ಕ ಪ್ರಭಾಯಾಖ್ಯಾನಮನಕ್ಷರ.

ದಿದಱೊಳ್ ತಣ್ಣನೆ ತಣಿದಂ
ದದಿನಾದೆನಘಾರಿ ನಿನ್ನ ಬರೆ ಕಂಡುದಱಿಂ ॥ ೫೩

ವ॥ ಎಂಬ ನಿರವಧಿ [1] ಪ್ರೇಯಪ್ರೀತಿವಚನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಱುಂಕಿ ಬಱಿಯಂ ಧರ್ಮಶ್ರವಣಪ್ರಶಂಸೋತ್ಕಂಠನಾದ ನೃಪಕಂಠೀರವಂಗೆ

ಮನದೊಳಗಣ ಕತ್ತಲೆಯಂ
ಮುನಿನಾಥನ ದಂತಕಾಂತಿಕೌಮುದಿ ಬೆಂಕೊ ।
ಳ್ವಿನಮಿಂತೆಂಡಂ ಮೃದುಮಧು
ರನಿಸರ್ಗಗಭೀರ [2] ದಿವ್ಯನವ್ಯೋಕ್ತಿಗಳಂ ॥ ೫೪

ನಿಮಗೇನಶ್ರುತಮೇಂ ಸಸಂಶಯಮೆಲೇ ಭವ್ಯೋತ್ತಮಾ ಶ್ರೀಮದಾ
ಗಮಸಂವಾದಿತಜೀವತತ್ವಸಹಿತಾಸ್ತಿದ್ರವ್ಯತತ್ವಾಪದಾ ।
ರ್ಥಮೆನಿಪ್ಪಿಂತಿವಱೊಳ್ ಸಮಂತು ತಿಳಿವಂತೆಮ್ಮಿಂದಮುಂತಾದೊಡ
ಕ್ಕೆ ಮಹೀಕಾಂತ ಮದೀರಿತೋಕ್ತಿ ಗುರುಶಿಷ್ಯತ್ವಕ್ಕಭಿವ್ಯಂಜನಂ ॥ ೫೫

ವ॥ ಎಂದು ಬಱಿಯಮಾಪ್ತಾಗಮಪ್ರಮಾಣಮಪ್ಪ ಗೃಹಸ್ಥಯತಿಮಾರ್ಗಸೂಚನಾತಾತ್ಪರ್ಯಮನಾಪದ್ಮರಥಮಹಾರಾಜನಂ ಸ್ವಯಂಪ್ರಭಮುನೀಶ್ವರರ್ ಕಿಱಿದುದಱೊಳೆ ತಿಳಿವಂತಿರಿಂತೆಂದು ಬೆಸಸಿದರ್

ಪದಿನೆಂಟು ದೋಷದಿಂ ಪಿಂ
ಗಿದನಂತಚತುಷ್ಟಯಾತ್ಮಕಂ ತಾನಾಪ್ತಂ ।
ವಿದಿತಾಗಮವಾದೇವನ
ವದನಸುಧಾಸೂತಿಕೌಮುದೀವಾಕ್ಪ್ರಸರಂ ॥ ೫೬

ಪರಮಾಗಮದೊಳ್ ಸಾಗಾ
ರರ ನೆಲೆ ಪನ್ನೊಂದು ಪನ್ನೆರಡು ಪದನಗಾ ।
ರರ ನೆಗಟ್ದ ಗುಣಸ್ಥಾನಂ
ಪರಿಕಿಪೊಡೇಟಲ್ತೆ ದೇಶವಿರತನಿನವಱೊಳ್ । ೫೭

1 ಕ. ಪ್ರಿಯಪ್ರಿಯ. 2 ಗ. ಧೀರದಿವ್ಯೋ.

ಮೂಱುಂ ಮೂಢತೆಯುಂ ನೆಗ
ೞ್ದಾಱುಮನಾಯತನ ಸೇವೆಯುಂ ಮದವೆಂಟುಂ ।
ತೋಱುವ ಶಂಕೆಗಳೆಂಟುಂ
ಪಾಱಿದ ದರ್ಶನಿಕರಮಲದರ್ಶನಶುದ್ಧರ್ ॥ ೫೮

ಅಕಲಂಕವ್ರತಮುಳ್ಳೊಡೇನರಿದ ಸಮ್ಯಗ್ದರ್ಶನಂ ತನ್ನೊಳು
ಳ್ಳ ಕೃತಾರ್ಥಂ ನರಕಂಬುಗಂ ತಿರಿಕನಾಗಂ ನಾರಿಯಾಗಂ ನಪುಂ ।
ಸಕನಾಗಂ ಕುಲಹೀನನಾಗನೆಡೆಯಿಂದಲ್ಪಾಯುವಾಗಂ ದರಿ
ದ್ರಕನಾಗಂ ವಿಕಲಾಂಗನಾಗನಿದು ಸಿದ್ಧಂ ನಂಬು ಭೂವಲ್ಲಭಾ ॥ ೫೯

ವ್ರತಿಕಂ ಪಂಚಾಣುವ್ರತ
ತತಿ ಕೊಲೆ ಹುಸಿ ಕಳವು ಹಾದರಂ ತೀರದುದ ।
ಕ್ಕತಿಮೋಹಂ ಪಿಂಗೆ ಗುಣ
ವ್ರತಶಿಕ್ಷಾವ್ರತಮನೇೞುಮಂ ತಳೆದಾತಂ ॥ ೬೦

ಇನಿತು ಗುಣಂಗಳುಮಂ ದ
ರ್ಶನಶುದ್ಧಿಯನಾಂತು ಮೂಱು ಪೊತ್ತಿನ ದೇವಾ ।
ರ್ಚನಮುಂ ಷಟ್ಕರ್ಮಮುಮು
ಳ್ಳನವದ್ಯಂ ಶ್ರಾವಕರ್ಗಳೊಳ್ ಸಾಮಯಿಕಂ ॥ ೬೧

ವ॥ ಇವು ಮೊದಲಾದ ಗುಣಂಗಳಿಂ, ಪ್ರೋಷದಸಚ್ಚಿತ್ತರಾತ್ರಿಭುಕ್ತ ಬ್ರಹ್ಮಚಾರಿಆರಂಭಪರಿಗ್ರಹ ಅನುಮಾನೋದ್ದಿಷ್ಟದೇಶವಿರತನೆಂಬಪನ್ನೊಂದು ನೆಲೆಯ ಶ್ರಾವಕಂಗಂ ಅತನಿಂದಮತ್ತ ಮಹಾವ್ರತಧಾರಿಯಾದ ಮುನಿ ಪದಿನಾಱನೆಯ ಗುಣಸ್ಥಾನಕ್ಕಂ ಪ್ರಮತ್ತನಾದಿಯಾಗಪ್ರಮತ್ತನಪೂರ್ವಕರಣನನಿವೃತ್ತಕರಣಂ ಸೂಕ್ಷ್ಮಸಾಂಪರಾಯಿಕಕ್ಷಪಕನುಪಶಾಂತಕಷಾಯವೀತರಾಗಚ್ಛದ್ಮಸ್ಥಂ ಕ್ಷೀಣಕಷಾಯಸಂಯತನೆಂಬ ಪನ್ನೆರಡನೆಯ ಗುಣಸ್ಥಾನವರ್ತಿಯಪ್ಪ [1] ಮುನಿಷಂಗಂ ಸಕಲದುರಿತತಿಮಿರಪಟಲಮಂ ನಿರ್ಮೂಲಿಸುವ ಸಹಸ್ರಕರಪ್ರಭಾವಕರಮಾವುದೆಂದೊಡೆ

1 ಕ. ಮುನಿಪುಂಗವಂ.

ಸಾರಂ ಸಾಗಾರತೆಗಣ
ಗಾರತೆಗಾಧಾರಮೆನಿಪ ರತ್ನತ್ರಯಮು ।
ರ್ವಿರಮಣ ಬೋಧಿದರ್ಶನ
ಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ ॥ ೬೨

ವ॥ ಅಂತುಮಲ್ಲದೆ ಸಯೋಗಕೇವಳಿಯಯೋಗಕೇವಳಿಯೆಂಬ ಪದಿಮೂಱು ಪದಿನಾಲ್ಕನೆಯ ಗುಣಸ್ಥಾನವರ್ತಿಯಪ್ಪ ಭಗವದರ್ಹತ್ಪರಮೇಶ್ವರರ್ಗಂ ರತ್ನತ್ರಯಪ್ರಭಾವಮೆ ಕೈವಲ್ಯಸುಖಸ್ವರೂಪಸಾರಾಂಶಂಗಳದುಕಾರಣದಿಂ

ಧರ್ಮಂ ಧಾರ್ಮಿಕನಿಂದೆ ನಿಲ್ವುದದಱಿಂದಂ ಧಾರ್ಮಿಕಾಗ್ರೇಸರಂ
ಧರ್ಮಂ ನೀಂ ನೃಪ ಬೋಧದರ್ಶನಚರಿತ್ರಾನರ್ಘ್ಯರತ್ನಾಳಿಗಾ ।
ಶರ್ಮಂಮಾಡುವುದಂತರಂಗಬಹಿರಂಗ ಶ್ರೀಯನೆಂದಾಮುನೀಂ
ದ್ರರ್ಮಿಥ್ಯಾಮಲಮಂ ಕಟಲ್ಚಿ ಕಳೆದರ್ ವಾಕ್ಚಂದ್ರಿಕಾಪೂರದಿಂ ॥ ೬೩

ವ॥ ಅಂತಾನರೇಂದ್ರಂ ಮುನೀಂದ್ರಕಾರುಣ್ಯಜಲಧಾರಾಸಾರಧರ್ಮಾಮೃತಾಂಬುಪಾನಪ್ರೀತ ಚೇತಶ್ಚಾತಕನಾಗಿ

ತೀರ್ದುದು ಹೃದಯಕಲಂಕಂ
ಸಾರ್ದುದು ಪುಣ್ಯಾನುಬಂಧಮಕ್ಷಯಸುಖಮಂ ।
ಪೊರ್ದಲ್ಕೆಪಡೆದೆನೆನಗೆ ಪು
ನರ್ದರ್ಶನಮಕ್ಕೆ ನಾಥ ತಡೆಯದೆ ನಿಮ್ಮೊಳ್ ॥ ೬೪

ವ॥ ಸಮುದಾಯಕೀಸಭೆಯಂ ಬಲಗೊಂಡು ಮುಕ್ತಿಕಚಸ್ರಜಮಂ[1] ಕೊಳ್ವಂತೆ ಸಿದ್ಧಶೇಷೆಯಂ ಕೈಕೊಂಡು ಮುನೀಂದ್ರವೃಂದಾರಕಪಾದಾರವಿಂದಮಂ ಬೀಳ್ಕೊಂಡು ತದಾಶ್ರಮೋದ್ಯಾನಮಂ ಪೊಱಮಟ್ಟು

ಏಱಿದ ವಾರಣೇಂದ್ರಮದದುರ್ದಿನದಿಂದಮೆ ಕೂಡೆ ಕರ್ದಮಂ
ದೋಱಿ ಸಿತಾತಪತ್ರಚಯದಿಂ ಗಗನಸ್ಥಲ ಕೂಡೆ ಚಂದ್ರಮಂ ।
ದೋಱಿ ವಿಲಾಸಿನೀನಯನಕೈರವದಿಂ ದೆಸೆ ಕೂಡೆ ಪೂಗೊಳಂ
ದೋಱಿ ವಿಲಾಸದೊಳ್ ಪೊರೆಪುದೋಱಿದುದಾಗಮನಂ ನೃಪೇಂದ್ರನಾ ॥ ೬೫

1 ಕ. ತಾಳ್ವಂತೆ.

ವ॥ ಅಂತು ಬಂದರಮನೆಯಂ ಪೊಕ್ಕು ಸೈನ್ಯಾಮಾತ್ಯರಾಜನ್ಯಕಮಂ ಕಳಿಪಿ ಕರುಮಾಡದ ಮುಂದಣ ಭದ್ರಶಾಲಾವೇದಿಕೋಪಾತ್ತಮತ್ತವಾರಣೋಪಾಂತದೊಳ್ ಪಸರಿಸಿದ [1] ಮಸುಳಗೆಯ ಮೇಲೆ ತಾಂಬೂಲಕರಂಕವಾಹಿನೀದತ್ತವೇದಿಕಾಗ್ರಸಂಧಾನಿತಕೋಮಲಾಂಗುಳೀಕೋರಕಾಗ್ರಂ ಪರಿಮಿತಮಿದಿರ್ಗಳ್

ಗುರುವಕ್ತ್ರೇಂದುಕುಮುದ್ವತೀಸದುಪದೇಶಪ್ರಸ್ಥಿತೋರ್ವೀಶರಾ
ಗರಸಂ ತನ್ನನೆ ಪತ್ತಿದಂತೆ ನಿಜಬಿಂಬಂ ಚೆಂಬುಗೆಂಪೇಱೆ ತ ।
ತ್ಪರಿಹಾರಕ್ಕೆ ಮುಟುಂಕಲೆಂದಪರಪಾಥೋನಾಥನಂ ಪೊರ್ದುವಂ
ತಿರೆ ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರಪ್ರಾಂತಮಂ ॥ ೬೬

ಇನನುಟಿದಪರದಿಶಾಕಾ
ಮಿನಿಯೊಳ್ ಕೂಡಿದೊಡೆ ನೋಡಲಾಱದೆ ಪೂರ್ವಾಂ ।
ಗನೆ ಮುಚ್ಚಿದಕ್ಷಿಪಕ್ಷ್ಮದ
ತನಿಗರ್ಪೆನಿಸಿದುದು ಕೊನರ್ವ ಕತ್ತಲೆ ನಭದೊಳ್ ॥ ೬೭

ವ॥ ಆ ಸಮಯದೊಳ್

ಇದು ವಿದ್ಯುಲ್ಲತೆಯಲ್ಲದಾದೊಡೆ ನಿರಭ್ರವ್ಯೋಮದಿಂದೆಂತು ಮೂ
ಡಿದುದಿಂದೂದಯಮಲ್ಲದಾದೊಡೆ ನಭೋಮಧ್ಯಸ್ಥಲಕ್ಕೆಂತು ಬಂ ।
ದುದು ಸೂರ್ಯಾತಪಮಲ್ಲದಾದೊಡಿನನಿಂದಂ ಪಿಂತೆ ತಾನೆಂತು ನಿಂ
ದುದೆ [2] [ನಲುಳ್ಕೊ] ಗೆತಂದು ಪೋಲ್ತುದು ವಿಯತ್ಸೀಮಂತಸಿಂದೂರಮಂ ॥ ೬೮

ವ॥ ಆಗಳದನುದ್ಗ್ರೀವೋತ್ತಾಲಮುಖಸರಸಿರುಹನುಮುನ್ನಮಿತಭ್ರೂಲತಾಬಂಧತರಂಗಿತನಿಟಿಲಪಟ್ಟನುಮುತ್ತರ್ಜಿನೀದಂಡಪ್ರಸಾರಿತನೇತ್ರಾಂಚಲಪತಾಕನುಮಾಗಿ ನೋಡುತ್ತುಮಿರೆ ಯಿರೆ

ಚಿರಮಲ್ತೆನ್ನಯ ತೇಜಮುಂ ಕಡೆಯೊಳೀಪಾಂಗೆಂಬುದಂ ಸಾಱುವಂ
ತಿರೆ ಗುರ್ಬೋಧಜನಂ ತರಂಗತಿಮಿರಕ್ಕುದ್ಯೋತಿಯಂ ತೋಱುವಂ ।

1 ಗ. ಮಸುಳಿ. 2 ಕ. ನಲ್ ಸಾಲ್ತೋಗೆ ತಂದು. ಗ. ನಲ್ ಸಾಲ್ತೊಗೆದೊಂದು.

ತಿರೆ ಸಂಸಾರಸುಖಾನುಯೋಗಶತಪೂರಿತಾರ್ಣಪುಂಜಕ್ಕೆ ದ
ಳುರಿ ಬಿಟ್ಟಂತಿರೆ ಬಿರ್ದು ತಂದುದೆರ್ದೆಗುಲ್ಕಾಪಾತಮಾತಂಕನುಂ ‖ ೬೯

ವ‖ ಅದಂ ಕಂಡು ಶರೀರಾದಿಸಮಸ್ತವಸ್ತುಗಳೊಳಸ್ಥಿರತ್ವಮನೆ ಮನದೆಗೊಂಡು ನಿರ್ವೇಗಪರನಾಗಿ ತನ್ನೊಳಿಂತೆಂದಂ

ಎನ್ನದೊಡಲೆನ್ನದೊಡವೆಯಿ
ದೆನ್ನದು ಸಂಪತ್ತಿಯೆಂದು ಮಱುಗದೆ ಹೆಱಕೆಂ ।
ದೆನ್ನದೊಡಲೆನ್ನದೊಡವೆ ಯಿ
ದೆನ್ನದು ಸಂಪತ್ತಿಯೆಂದೊಡಾತನೆ ಚದುರಂ ‖ ೭೦

ವ‖ ಅದಲ್ಲದೆಯುಂ ಜವನ ಜತ್ತಕುಱುಮಂ ಪೇಳ್ವೊಡೆ

ತೃಣಮುಂ ತೆನೆವೋದ ಬೞಿ
ಕ್ಕೊಣಗುವುದದಱಿಂದೆ ನರರ ಬಾೞ್ ಲಘುಕಾಲಂ ।
ಹಣಿದದ ಪೊಯಿಲ್ಗೆ ಮೊದಲ್ನಡು
ಕಣಿಯೆನ್ನದಿದೆಳವೆ ಜವ್ವನಂ ಮುಪ್ಪೆನ್ನಂ ‖ ೭೧

ನೆರಪಿದ ಪುಣ್ಯಸಂಚಯಮವಗಣ್ಯತರಂ ನೆಲೆ ನಿಳ್ಕಬಾರದಂ
ಬರತಲಮಧ್ಯವಜ್ರಮಯಮಂಡಪಮೊಪ್ಪುವ ಗಾಡಿ ಶೈಶವಂ ।
ಜರೆ ರುಜೆ ಕಂಟಕಂ ತುಡುಕಲಣ್ಮದ ದಿವ್ಯಶರೀರಮುಂ ನರಂ
ಕರಗಿ ಕಟಲ್ಚಿಪರ್ ದಿವದಿನೆಂದೊಡೆ ಮರ್ತ್ಯರ ಬಾಳ್ಕೆ ನಿಟ್ಟಿಯೇ ‖ ೭೨

ಪಾತಾಳಸ್ಥಳದೊಳ್ ವಿಲೋಚನಭವಾದ್ಯರ್[1] ಭವದ್ಯಭಾವನ
ಜ್ಯೋತಿರ್ಲೋಕದೊಳರ್ಕಮುಖ್ಯರಮರರ್ ಶಕ್ರಾದಿಗಳ್ ಕಲ್ಪಸಂ ।
ಭೂತರ್ ತೊಟ್ಟನೆ ಬಿಟ್ಟಪರ್ ಜವನ ಜಾಲಕ್ಕೆಂದೊಡಿಂ ಮರ್ತ್ಯನೇ
ಮಾತಲ್ಪಾಂಗನನಲ್ಪರಾಗನನನಲ್ಪಾಯುಷ್ಯನೇನಾದಪಂ ‖ ೭೩

ಇದು ದುರ್ಬೋಧಮೆನಿಪ್ಪುದಕ್ಕೆ ಕತೆ ಕಬ್ಬಂ ಹೇತು ದೃಷ್ಟಾಂತಮುಂ
ಬುದದೇಂ ತೋಱದೆ ಕಾಣರೇ ತಿಳಿಯರೇ ಸಂಸಾರಮೇಂ ನೀರ ಬು ।

---

1 ಗ. ಭಾವನಾಜ್ಯೋತಿಶ.

ದ್ಬುದಮೇಂ ಜವ್ವನಮೇಂ ತರಂಗಲತೆಯೇಂ ಸಂಪತ್ತಿಯೇಂ ವಾರಿವಾ
ಹದ ಸೊಂಪೇನಿದನಿತ್ಯಮೆಂದು ಕೆಲರೇತಕ್ಕೋದಲುಂ ಪಾಡಲುಂ ॥ ೭೪

ಇದನಾಂ ಮೆಚ್ಚೆನೆ ಬಾಲ್ಯಯೌವನಜರಾಮೃತ್ಯುಕ್ರಮಂ ವ್ಯಕ್ತಮಾ
ಗದೊಡಂ ಸಾಲ್ವುದಿದಕ್ಕೆ ಮೊತ್ತಮೊದಲೊಳ್ ತಾಯೆಂಜಲೊಳ್ ಬಿದ್ದ ಗ ।
ರ್ಭದ ಮಾಂಸಾಂತ್ರಮನೊಟ್ಟಿಕೊಂಡು ಕೊಳೆಯೊಳ್ ತೇಂಕಾಡಿ ವಿಣ್ಮೂತ್ರದೊಳ್
ಪುದಿದೇತಕ್ಕೆ ಬಟಿಕ್ಕೆ ಬೀೞ್ವರದಱಿಂ ಮರ್ತ್ಯಂ ಜುಗುಪ್ಸಂ ಕರಂ ॥ ೭೫

ವ॥ ಅದಲ್ಲದೆಯುಂ

ಮೊದಲೊಳ್ ಪುಟ್ಟುವ ನೋವು ಸಾಪಿನ ಸಮಾನಂ ಬಾಲ್ಯದೊಳ್ ಬಟ್ಟ ಬಾ
ಟದರಿಷ್ಟಂ ನವಯೌವನಂ ಮುದಮುಖಂ ಸರ್ವಪ್ರಮಾದಕ್ಕೆ ತಾಂ ।
ಸದನಂ ಬೂದಿಯಬೊಟ್ಟು ಬೀದಿಯ ಸೊಡರ್ ಮುಪ್ಪಿನ್ನೆಗಂ ಬಟ್ಟನಂ
ಬಿಡೆ ದಲ್ ಚಿತ್ರಮನಿತ್ಯನಾಟಕದ ಜೋಹಂ ತೀರ್ದುದಿಂ ಸಾಲದೇ ॥ ೭೬

ಕರವಾಲಂ ಪಿಡಿದೆತ್ತಲಶ್ವಗಜಮಂ ಮಾಪ್ಪಾಡಿಗೊತ್ತಲ್ ಮನೋ
ಹರಿಯರ್ ಬಂದೊಡಲಂಪು ಪೊಂಪುಳಿಸೆ ಮೈವೆತ್ತಲ್ತನೂಭೋಗಮಾ ।
ಸ್ಫುರಿತೋರುದ್ವಯವೇಗಮೂರ್ಛಿತಭುಜೋದ್ಯೋಗಂ ಸಡಿಲ್ತಂದಮು
ತ್ತರಸೆಂಬಂ ವಿರಸಂ ಗಡಂ ಸುಡುಸುಡಾ ಚಿಃ ಪೆಂಡಿರಂ ಮುಪ್ಪಿನೊಳ್ ॥ ೭೭

ನೆಟಲಂ ನೋಡಿದ ರೂಪಿನ
ಪೊಟಪದು ಕನ್ನಡಿಯನೊರ್ಮೆ ನೋಡಿದೊಡಿರದೊ ।
ಡ್ಡಟಿವುದು ನರೆತೆರೆಯಿಂ ಮು
ತ್ತಟಿಪರ್ ನೋಡುವರದೆಂತೊ ಪೆಂಡಿರ ಮೊಗಮಂ ॥ ೭೮

ವೀರರಸಂ ಮೊನೆಯೊಳ್ ಶೃಂ
ಗಾರರಸಂ ಮನೆಯೊಳಳಿವಿಗಟಿದಿರೆ ಜಸಮಂ ।
ತಾರದೊಡೆ ಪೊಲ್ತುದು ಯಶೋ
ಭಾರದೆ ತಲೆ ಬಿರಿಯೆ ಬಿಗಿದ ಕಟ್ಟಂ ಪಟ್ಟಂ ॥ ೭೯

ಅಱಿಪಿನ ಮೋಹದಿಂ ತೊಡರ್ದು ಬಟ್ಟಿಪೆನೆಂದೊಡೆ ರಾಜ್ಯಲಕ್ಷ್ಮಿ ಮು
ನ್ನುಱಿಯದದೇಕೆನಲ್ ನೆಲಸದಾಯು ಕರಂ ಚಲವೀಚಿಯಂತೆ ಯೋ ।
ಕುಱಿದಪೆನೆಂಬ ಜೋಡೆ [1] ಯುನೆ ಮುನ್ನುಱಿದಿರ್ಪ ವಿವೇಕಿಯಂತೆ ತಾ
ನುಱಿದೊಡಟಲ್ ಕಟಲ್ಬದು ಸುಖಂ ತವದೊಪ್ಪುವುದಾತ್ಮಗೌರವಂ ॥ ೮೦

ವ॥ ಎಂದು ಪರಿಭಾವಿಸಿ ಸಕಲಸಾಮ್ರಾಜ್ಯರಾಜ್ಯಸುಖಾನುಭೋಗಪರಾಙ್ಮುಖನುಂ ಪ್ರವ್ರಜ್ಯರಾಜ್ಯಲಕ್ಷ್ಮೀಸಂಭೋಗಸುಖೋನ್ಮುಖನುಂ, ಸಾಂಧ್ಯಸಮಯ ಸಮುಚಿತನಿತ್ಯನಿಯಮವ್ಯಾಪಾರನುಂ, ಅರ್ಹತ್ಪರಮೇಶ್ವರಮುಖಾರವಿಂದಾವಳೋಕನುಂ, ದಿವ್ಯಗಂಧೋದಕಸೇಕಸಂತರ್ಪಿತಾಂ [2] ತರಂಗನುಮಾಗಿ

ಕಡೆಯೊಳ್ ತಾಗೆ ಪರಪ್ರವಾಸಗೃಹಶಯ್ಯೋದ್ದೇಶದೊಳ್ ಪಾಂಥನೊಂ
ದೆಡೆಗೆಯ್ದಂತಿರುಳಿರ್ದು ಸಜ್ಜೆವನೆಯೊಳ್ ಶುದ್ಧಾಂತಕಾಂತಾಜನ ।
ಕ್ಕೆಡೆಯುಂ ಮಾಡದವೋಲ್ ಕಡಂಗಿ ಬರೆ ನಿದ್ರಾಕಾಂತೆ ಕಣ್ಗೆಯ್ದು ಪೊ
ತ್ತಡೆ ಭೂಕಾಂತನುಪಾತ್ತನಿತ್ಯನಿಯಮವ್ಯಾಪಾರಪಾರಾಗಮಂ ॥ ೮೧

ವ॥ ಸಭಾಭವನಮಣಿವಿಷ್ಟರಾಧಿಷ್ಠಿತನಿಷ್ಟಬಂಧುಸನಾಭಿಜನಮಂತ್ರಿಮಹತ್ತರಮಕುಟಬದ್ಧಪ್ರಸಿದ್ಧಪರಿಜನಮಂ ಬರಿಸಿ ನಿಜಮನೋಗತೋದ್ಯೋಗಮನವರ್ಗೊಡಂಬಡೆ ತಿಳಿಪಿ ಬಱಿಯಮಾರಾಜಾಧಿರಾಜಂ ಯುವರಾಜನಂ

ಬರವೇೞಲೊಡಂ ವಿನಯಮೆ
ಪರಿಜಂ ಪಡೆದಂತು ಬಂದು ತನಯಂ ಭೂಭೃ ।
ಚ್ಚರಣಾಂಬುಜನಖತಾರಾ
ಪರಿರಂಭಮನಾತ್ಮನಿಟಿಲವಿಧುಗೆಸಗಿಸಿದಂ ॥ ೮೨

ವ॥ ಅಂತು ವಿನಯವಿನಮಿತೋತ್ತಮಾಂಗನುಮಾಗಿ ಪಾದಪೀಠೋಪಾಂತಮಣಿಕುಟ್ಟಿಮದೊಳ್ ಪಾರ್ಶ್ವವರ್ತಿರಾಜವಲ್ಲಭಪ್ರಸ್ತಾರಿತಪ್ರಚ್ಛದಾಂಚಲಮನಗಲೆನೂಂಕಿ ಕುಳ್ಳಿರ್ದನಂ

ಪರಿದ ಕುರುಳ್ಗಳೊಳ್ ತಳೆದ ಕಸ್ತೂರಿಗಾಡುವ ಚಂಚರೀಕಮೋ
ಸರಿಸೆ ನಖಾಗ್ರದಿಂ ಸಮಱಿ ತಿರ್ದಿ ನವೋತ್ಪಲಕರ್ಣಪೂರಮಂ ।

1 ಕ. ಗ. ಯೆತ. 2 ಕ. ತಃಕರಣುಮಾಗಿ.

ಜರಿ ನಮಿತಾಸ್ಯದೊಳ್ ಜಗುಟೆ ಮೆಲ್ಲನಮರ್ಚಿ ನಿಜಾಂಕಪಾರ್ಶ್ವದೊಳ್
ಬರೆತೆಗೆದಪ್ಪಿ ಕುಳ್ಳಿರಿಸಿ ದೇವನಿದಂ ನುಡಿದಂ ಕುಮಾರನೊಳ್ ॥ ೮೩

ಕ್ಷಿತಿಸಂವಾಹಿ ಸಹಾಯಿ ಜನ್ಮಸುಖದುಃಖಾಪಾತ [1] ಸನ್ನಾದಿ ಸ
ದ್ಗತಿಸಂದಾಯಕನೆಂದು ತಂದೆ ಪಡೆವಂ ಸತ್ಪುತ್ರನಂ ಸಾರಸಂ ।
ಸ್ಮೃತಿಸಮ್ಮೋಹನಪಾತ್ರನಂ ಸುತನ ನಿನ್ನಂ ಪೆತ್ತು ಮಾಂ ಕರ್ಮಸಂ
ತತಿಯಂ ತೂಳ್ದದೊಡಿಂದು ಲೋಕಪಿತೃಸಾಮಾನ್ಯತ್ವಮಂ ತಾಳ್ದೆನೇ ॥ ೮೪

ಅದಱಿಂದಂ ಪ್ರವ್ರಜ್ಯಾ
ಸುದತಿಗೆ ಕೈಗೊಟ್ಟ ತೋಳ್ಗೆ ಭೂಮಿಯ ಭರಮು ।
ಪ್ಪುದಸಹ್ಯಮನಾಗಿಸದ
ಪ್ಪುದಿದಂ ನೀಂ ತಳೆದು ಮಗನೆ ಸಲಿಸೆನ್ನೊಲವಂ ॥ ೮೫

ವ॥ ಎಂದು ಬೆಸಸಿದ ಪರಮಲಕ್ಷ್ಮೀಸ್ಪೃಹನನಿಸ್ಪೃಹೋದೀರ್ಣಮಂ ಕೇಳ್ದು ಘನರಥಂ ಘನರವಮಂ ಕೇಳ್ದ ಕಳಹಂಸಕಳಭದಂತೆ ತಳವೆಳಗಾಗಿ

ತೀವಿದ ಕಣ್ಣ ನೀರ್ ಮಿಡಿದು ಪಾಯ್ವೆವರ್ದೆ ಹಿಗ್ಗಿದ ಗಗ್ಗರಿಕ್ಕೆ ಸಂ
ಭಾವನೆಯಂ ಕಟಲ್ಚಿ ದೆಸೆಗೆಟ್ಟಱಿವಂ ಮಱೆದೊಂದು ಮಾತುಮಂ ।
ದೇವನೊಳಿಂತುಟೆನ್ನದೆ ಕುಮಾರಕನಿರ್ದನದಕ್ಕೆ ಪಂದೆಯುಂ
ಪಾವಡರ್ದಂತೆ ಪೊಯ್ವಡೆದನಂತೆ ಮುಟುಂಗಿದನಂತೆ ಚಿಂತೆಯೊಳ್ ॥ ೮೬

ವ॥ ಅಂತಿರ್ದ ಮಗನ ಮೊಗಮಂ ನೋಡಿ

ಭ್ರಾಂತರವೊಲ್ ಮರುಗುವರೇ
ಚಿಂತಿಸುವರೆ ಪರಮಸೌಖ್ಯಲಾಭೋ [2] ದಯದೊಳ್ ।
ಸಂತಸಮಂ ತಳೆಯದೆ ನೀ
ನಿಂತಟಲಲ್ ಕಲ್ತೆ ಮಗನೆ ಪರಮಾಗಮಮಂ ॥ ೮೭

ವ॥ ಎಂದು ಶಾಂತೋಪಲಾಲನೆಗಳಿಂ ಸಂತರ್ಜಿಸಲೊಡಮೆಂತಾನುಮು ಪಶಿತಾಂತರಂಗನುಮಾಗಿ ಕುಮಾರನಿಂತೆಂದಂ

---

1 ಕ. ಸಂಗಾದಿ. 2 ಕ. ದ್ಯಮ.

ಗತಿಗೆ ನಿಮಿತ್ತಂ ಪಡೆವರ್
ಸುತರಂ ಗಡ ಪೊಱಗೆ ಪೆಱಗೆ ನಿಲ್ಲನವಶ್ಯಂ ।
ಪಿತರಾಚಾರಂ ದೇವರ
ಗತಿಯಲ್ತೆನಗಿಲ್ಲ ಬೇಱೆ ಗತಿಯುಂ ಮತಿಯುಂ ॥ ೮೮

ವ॥ ಎಂಬುದುಂ ನೃಪೇಂದ್ರನಿಂತೆಂದಂ

ಪೊತ್ತ ಪೊಱೆ ತಿಣ್ಣಮಾದೊಡೆ
ಮತ್ತೆ ಕೆಲರ್ ಕಂಡು ಕರುಣಿಪರ್ ಪಿತೃಭವದೊಳ್ ।
ಪೆತ್ತ ಮಗಂ ಸಮ್ಮನಿಸಿ ಕೊ
ಳುತ್ತಿರೆ ಪೊಸತಲ್ತೆ ತಂದೆಮಕ್ಕಳ ಮೋಹಂ ॥ ೮೯

ವ॥ ಎಂಬುದುಂ ಮೇಘರಥಂ ಪದ್ಮರಥರಾಜಗಿಂತೆಂದಂ

ಈನೆಲದ ಬಿಣ್ಪು ದೇವರ
ಪೀನಭುಜಾಸಹ್ಯಮೆಂದು ಬೆಸಸುವೊಡೆನಗಿಂ ।
ತಾನಾಗನಾಂತ ಪೊಱೆಯಂ
ಭೂನಾಗಂ ಪೊತ್ತು ದೇವ ನಿತ್ತರಿಸುವುದೇ ॥ ೯೦

ವ॥ ಎಂಬುದುಮರಸನಿಂತೆಂದಂ

ಕವಚಹರಂಗೆ ನೀತಿಮುಕರಂದಮುಖಾಂಬುರುಹಂಗೆ ಮದ್ವಚ
ಶ್ರವಣವತಂಸಕಂಗೆ ನಿನಗಂ ಧರೆ ತಿಣ್ಣಮೆ ಕಂದ ಚಾಪಸಂ ।
ಭವಕಿಣಕಂಟಕಾಳಿಮಭುಜಾಭುಜಗಂ ಮಣಿಮಾಡ ತಾನೆ ತಾ
ಳ್ದುವುದೆಮಗುತ್ತರಂಗುಡದೊಡಂಬಡು ಸಾಲ್ವುದು ನೀಂ ಮದಿಷ್ಟಮಂ ॥ ೯೧

ವ॥ ಎಂದು ಮಱುಮಾತಿಂಗೆಡೆಗುಡದೆ ನುಡಿದೊಡಂಬಡಿಸಿ ಬೞಿಕ್ಕೆ ಪರಮಪ್ರವಚನತತ್ತ್ವಯಾರ್ಥದೊಳ್ ಸಂಶಯರಹಿತರುಮನ್ವಯಾಗತಪೌರೋಹಿತ್ಯಪದವೀಸಮಾಹಿತರುಮಪ್ಪ ಹಿರಿಯರಂ ಬರಿಸಲೊಡಮವರ್ ವಿದಿತವೃತ್ತಾಂತರಾಗಿ ಕುಲಸ್ವಾಮಿಯ ಮನೋಗತಾರಂಭಕ್ಕನುಗತಮಾಗೆ

ಪರಮಾರ್ಹಂತ್ಯಮನೀವ ಮಂಗಳಮಹಾಶ್ರೀವಲ್ಲಭೋದ್ವಾಹಮೇಂ
ನರಕೀಟಕ್ಕಭಿಗಮ್ಯಮೇ ಸುಕೃತಿಗಳ್ಗಾರೂಢರತ್ನತ್ರಯ ।
ರ್ಗರಿಷಡ್ವರ್ಗಜಯರ್ಗೆ ನಿಮ್ಮ ದೊರೆಯರ್ಗಕ್ಕುಂ ಕ್ಷಮಾಪಾಲಶೇ
ಖರ ತತ್ಪೂರಮಗಾರ್ತ[1] ನಾಭಿಮತವೆಂದರ್ಬಂಧುಸಾವಸ್ಥಿಕರ್ ॥ ೬೨

ವ॥ ಅಂತು ಬಿನ್ನವಿಸಿದ ಪುರೋಧಸಪುರಸ್ಸರಂ ಪ್ರತಿಪ್ರಧಾನತಾಂಬೂಲಪುರಸ್ಸರಂ ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನಂಮಾಡಿಮೆಂದು ಕಳುಪಿದಾಗಳ್

ಪರಮನ ಪರಿನಿಷ್ಕ್ರಮಣಾಂ
ತರದೊಳ್ ಬಿನ್ನವಿಸಿ ಪೋಪ ಲೋಕಾಂತಿಕದೇ ।
ವರವೊಲ್ ಪೊಕ್ಕರ್ ವಸುಧಾ
ಪರಕಲ್ಪವಿಮಾನಮೆನಿಪ ನೃಪಮಂಡಲಮಂ ॥ ೬೩

ಕನಕಮಣಿರಚಿತಮಂಟಪ
ವಿನಿಹಿತ ಕಲ್ಯಾಣವಸ್ತುವಿಸ್ತಾರಮಗು ।
ರ್ವನಿಸಿದುದು ಗೃಹಮಹತ್ತರ
ಜನಕೃತ್ಯವ್ಯಂತರಾತಿಶಯಮೆಂಬಿನೆಗಂ ॥ ೬೪

ಗುಡಿ ಸುಪ್ರತಿಷ್ಠಕಂ ಕ
ನ್ನಡಿ ಕಳಶಂ ಚಾಮರಾಳಿ ಭೃಂಗಾರಂ ಬೆ ।
ಳ್ಗೊಡೆ ತಾಳವೃಂತವೊಪ್ಪಂ
ಬಡೆದುವು ವೇದಿಕೆಯೊಳಷ್ಟಮಂಗಳನಿಕರಂ ॥ ೬೫

ವ॥ ಅನಂತರಂ ಪದ್ಮರಥಪೃಥ್ವೀನಾಥಂ ಆಸ್ಥಾನಮಂಡಪದಿನೇೞಲೊಡನೇೞ್ವ ಮಕುಟಬದ್ಧಪ್ರಚಂಡಮಂಡಳಿಕರ ವಲಯದ ಕರ್ಣಾಭರಣದ ಕೇಯೂರದ ರತ್ನಹಾರದ ಝಳಪಟ್ಟಿಗೆಯ ತೊಡರ ಕಡಗದ ಬೆಡಂಗುವೆಸದಿನಡಿಗಡಿಗೆ ನೆಲನನುಗ್ಗಡಿಸುವಂತಿರುಣ್ಮಿ ಪೊಣ್ಮುವ ಝಣಝಣತ್ಕಾರದೊಳವಾಱುಣಝುಣ

1 ಕ. ಸಾಭಿಮತ ಬಂದುಸಾವಸ್ತಿಕರ್.

ತ್ಕಾರದೊಡನೆ ಗಡಣಿಸಿ ನುಡಿವಂತೆ ಕರ್ಣಸುಭಗಮಾದ ಪುಣ್ಯಗಣ್ಯಪುಣ್ಯಾಕಾರಧಾರಿಣೀವರಕಾಂತಾಕದಂಬತನುಲತಾಪರಿಮಳದೊಳ್ ಪರಿಮಳಿಯಾಡುವ ಮಱಿದುಂಬಿಗಳ ಪಂಚಮದ ನುಣ್ಚರಕ್ಕೆ ಬಿಣ್ಪಾಣಿಕೆವಡೆದ ನೂಪುರಕಲಾಪತುಲಾಕೋಟಿಮಂಜರಿಕಾಪುಂಜಶಿಂಜಾನದೊಳಮಾಶಿಂಜಾನಕ್ಕೆ ರಂಜನೆವಡೆವ ಮಂತ್ರಗೀತಪ್ರಸಿದ್ಧಸ್ವಯಂಭುಗಳಿಂ ಜಿನಮಹಿಮಾತಿಶಯದತಿಗಳೆಡೆಯೆಡೆಯೊಳೆಡೆವಿಡದೊಂದಿ ಪೊಗಟ್ಟ್ವ ಪುಣ್ಯಪಾಠಕರ ಗದ್ಯಪದ್ಯಗಮಕನಿರ್ದಿಷ್ಟವಿಶಿಷ್ಟಪಠನಪ್ರಪಂಚದೊಳಮಾಪಠನಪ್ರಪಂಚಮಂ ಚೆಲ್ವಿಡಿದು ಜಡಿವ ಪಡಿಯಱರ ಕಳಕಳಮನೆಟಕುಳಿಗೊಂಡು ದಿಶಾತಲೋದರಿಯರ ಶಾತೋದರಿಯರಂಗದೊಳ್ ಪ್ರತಿ [1] ಧವಳಚ್ಛಲದಿಂ ಪ್ರಸವಪ್ರಸಂಗಮನಂಗೀಕರಿಸುವ ಮಂಗಳಾಚರಣಾತೂರ್ಯ್ಯಧ್ವಾನಶಂಖದುಂದುಭಿಗಭೀರಭೇರೀಭೂರಿಘೋಷಣದೊಳಮಳುಂಬಮಾದ ಸಂಭ್ರಮಂ ಮೆಱೆಯೆ ಕುಮಾರಶೇಖರಕರತಲಾಂಗುಲಿಕೋರಕವಿಲಗ್ನಮಾಮಹಸ್ತಾಂಗುಲಿಜಾಲಕವಿಲಾಸಂ ವಿಲಾಸಕ್ಕಾವಾಸಮಾದ ಮಂಗಲಾವಾಸಮಂ ಪುಗುತಂದು ಮೌಹೂರ್ತಿಕಸಮವರ್ತಿತಶುಭಮುಹೂರ್ತೋದಯದೊಳ್

ಪುರುನಾಥಂ ಭರತೇಶ್ವರಂಗೆ ಮದೆಪಿಂದಂ ಪಟ್ಟಮಂ ಕಟ್ಟುವಂ
ತಿರೆ ಪಟ್ಟದ್ವಿಪವಾಜಿರಾಜರಥರತ್ನೈಕಾತಪತ್ರಾಂಕಚಾ ।
ಮರಸಿಂಹಾಸನಶಂಖಖಡ್ಗಫಲಕಾದಿಕ್ಷಾತ್ರಪರ್ಯಾಯತೂ
ರ್ಯರವಾಘೂರ್ಣಿತಕಾಯಮಾನಮಣಿವೇದೀಮಂಡಪಸ್ಥಾನದೊಳ್ ॥ ೯೬

ನದನದ್ಯಚ್ಛನವೋದಭಾರಪರಿಪೂರ್ಜ್ಯೋತ್ಕುಂಭದಿಂ ತಾನೆ ಮಾ
ಡಿದ ರಾಜ್ಯಾಭಿಷವಂ ನಿಜೋದ್ಯಮಲತಾಂಭಸ್ಸೇಕದಂತಾಗೆ ಕ ।
ಟ್ಟಿದನಾಮ್ನಾಯಲತಾಂತಮಾಲಿಕೆಯನಾಚಾರಾಂಬುವಂ ಸೇತುಗ
ಟ್ಟಿದನಾಮೇಘರಥಂಗೆ ಪದ್ಮರಥರಾಜಂ ಪಟ್ಟಮಂ ಕಟ್ಟಿದಂ ॥ ೯೭

ಪರಿವಾರಕ್ಕುಸಿರ್ದಂ ಪ್ರಧಾನಪುರುಷರ್ಗಪ್ಪೈಸಿದಂ ಮಂತ್ರಿಮು
ಖ್ಯರ ಕೆಯ್ಯಂ ಪಿಡಿದಿತ್ತನಾತ್ಮಸುತನಂ ತದ್ವರ್ಗರಂ ರಕ್ಷಿಪಂ ।
ತಿರೆ ಸನ್ಮಾನಿಸುವಂತಿರಿಂದು ನುಡಿಗೊಳ್ವಂತಂತಿರಂದೋಳಿಯಿಂ
ದಿರಿದಂ ನಂದನನಂ ಬಟಿಕ್ಕೆ ತಳರ್ದಂ ಭೂಪಾಲಕಂಠೀರವಂ ॥ ೯೮

---

1 ಕ. ರವ.

ವ॥ ಆ ಸಮಯದಲ್ಲಿ

ಮೞೆ ಕಂಬನಿಯಿಂ ದನಿಯಿಂ
ಮೊೞಗೆಱಗಿದ ಮಕುಟದಿಂದೆ ಮಿಂಚೊಗೆಯೆ ಪೊದ ।
ೞ್ದೞಲಿಂದಂ ಮುನ್ನಡಿಯೊಳ್
ಮೞೆಗಾಲಮನಂದು ಸೂನು ತಂದೆಗೆ ತಂದಂ ॥ ೯೯

ಮನದೊಳಗಂಧಕಾರದ ಕಡಲ್ ಕವಿತರ್ಪುದು ನಿನ್ನ ವಕ್ತ್ರಚಂ
ದ್ರನ ಬೆಳಗೊಮ್ಮೆ ತೋಱದೊಡೆ ವಲ್ಲಭ ನೀಂ ಬಿಸುಟಿಂತು ಪೋಗೆ ಜೀ ।
ವನಮೆಮಗೆಂತು ನಾಥ ಬರವೇಡೆನಲಾಗದೆ [1] ದೇವ ಸತ್ತ್ರಪೋ
ವನತರುಷಂಡಮೆಮ್ಮನೊಳಕೊಳ್ಳದೆ ಪೇೞ್ ಭುವನೈಕಭೂಷಣಾ ॥ ೧೦೦

ಅರಿನೃಪರಂತು ತಮ್ಮ ತಲೆಯುಂ ತಲೆವಿಕ್ಕರೆ ಪಾಳೆಯಕ್ಕೆ ಬಂ
ದರಸಿಯರ್ಗಿಂತು ತಮ್ಮ ಶಯನೀಯವನೀಯರೆ ಮುಚ್ಚಳಿಕ್ಕೆ ಪೋ
ದರಮನೆಗಿಂದು ಪೇೞರೆ ಮಹತ್ತರರಂ ನೃಪಸಿಂಹ ನೀಂ ತಪ
ಸ್ತರುಣಿಗೆ ಕೂರ್ತುದಂ ನುಡಿವೊಡೀಯರೆ ಹೇಱಿಗರ್ಗಂಗಚಿತ್ತಮಂ ॥ ೧೦೧

ಲಳಿತವಿಲಾಸಲಾಸ್ಯರಸಮಿನ್ನೆಮಗೇಕೆಲೆ ದೇವ ವಲ್ಲಕೀ
ಕಳರವದಿಂಪನಾರ್ಪೆಸರಿಡಲ್ಕಱಿವರ್ ನೃಪನೀಱ ಗೀತಮಂ ।
ಜುಳನಿನದಕ್ಕೆ ಮೆಚ್ಚಱಿದು ಮೆಚ್ಚಿಪರಾರಧಿನಾಥ ನೀಂ ತಪ
ಕ್ಕೆಳಸಿ ಒೞಕ್ಕೆ ಪೋದ ಬೞಕಾವೆಮಗೇಕೆ ನೃಪಾಲಮನ್ಮಥಾ ॥ ೧೦೨

ವ॥ ಎಂದು ಪಲುಂಬಿ ಪಂಬಲಿಸುವ ಪೆಂಡವಾಸದ ತಂಡಮಂ ಕಂಡು

ವಸುಧಾಧೀಶನ ತೇಜವಲ್ಲವೆ ಕುಮಾರಂ ನಿಮ್ಮನಾರಯ್ದು ರ
ಕ್ಷಿಸಲೀಮಂಗಲಯಾತ್ರೆಯೊಳ್ ದ್ರುತವಿಡಲ್ ಬಾಯ್ವಿಟ್ಟೞಲ್ಕಾಗ ಸೈ ॥
ರಿಸಿಮಿಂ ಸ್ವಾಮಿಯ ಚಿತ್ತಮಂ ಕದಡದತ್ತಲ್ಸಾರಿಮೆಂದೊತ್ತಿ ಬ
ಗ್ಗಿಸಿದರ್ ಮಂತ್ರಿಮಹತ್ತರರ್ ನೃಪವಧೂವಾರಾಂಗನಾವರ್ಗಮಂ ॥ ೧೦೩

---

[1] ಗ. ನಾಥ.

ವ॥ ತದನಂತರಂ

ಕರಿರಿಪುಪೀಠಮೆಂಬ ಪೆಸರ್ವಾರೆಣೆಯುಂ ಕೆಲಕೊತ್ತಿ ಬಂಧುಮಿ
ತ್ರರುಗಳ ಗರ್ಜನೋಕ್ತಿಗೊಳಸಾರದೆ [1] ಮುಂಗಡೆಯೊಳ್ ಪೊರಟ್ಟಿ ಪೆಂ।
ಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ ಸಂತತಂ ವನಾಂ
ತರಮುನೆ ಗೊತ್ತುಮಾಡಿ ಭರದಿಂ ತಳರ್ದತ್ತಧಿರಾಜಕುಂಜರಂ ॥ ೧೦೪

ಅನುರಾಗಚ್ಛವಿಯಿಂ ಪನದ್ಯುಮಣಿಯುಂ ಬೆಂಕೊಳ್ವ ವಕ್ತ್ರಂ ವಿಲೇ
ಪನಮುಕ್ತಾರುಚಿಯಿಂ ವಿಲೋಚನಚಕೋರೀಚಂದ್ರಿಕಾಪಾನ ಭಾ।
ಜನಮಾದಾಕೃತಿಯೊಪ್ಪೆ ಮಂಡಪದಿನಂದೇಳ್ತಂದು ರಾಜಾಧಿರಾ
ಜನನೊಲ್ದೇಱಿದನಾನ್ನೃಪಾಲತಿಲಕಂ ಸಾಹಿತ್ಯರತ್ನಾಕರಂ ॥ ೧೦೫

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸ
ನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳ
ಲೋಚನ ಜನಾರ್ದನದೇವ ವಿರಚಿತಮಪ್ಪ
ಅನಂತನಾಥಪುರಾಣದೊಳ್
ಪದ್ಮರಥರಾಜ್ಯವೈರಾಗ್ಯವರ್ಣನಂ
ತೃತೀಯಾಶ್ವಾಸಂ.

---

1 ಕ. ಮುನ್ನಡಿ.

# ಚತುರ್ಥಾಶ್ವಾಸಂ

ಶ್ರೀದಯಿತೆಯ ಸೂೞೊಳ್ ತಣಿ
ದಾದರದಿಂ ಕರೆದ ಪರಮಸುಖಲಕ್ಷ್ಮೀಪ್ರಾ ।
ಸಾದಮನೇಱಿದವೊಲ್ ಸ
ಮ್ಮೋದಮನಾಂತಂ ವಿನೇಯಜನಮುಖತಿಲಕಂ ॥ ೧

ವ॥ ಅಂತೇಱಿದ ರತ್ನಶಿಬಿಕಾಪುರಭಾಗದೊಳ್ ಪರಿನಿಷ್ಕ್ರಮಣಮಾಧವಾಗಮನಸುಮನೋಮಂಜರಿತಲತಾಪ್ರತಾನದಂತೆ ಕೈಗೆಯ್ದು ವಿಲಾಸಮೆಸೆಯೆ ಸುಧಾತಲಪಾರಿಜಾತಕನ ಮುಂದೆ ಬಂದು

ಎರಡೊಡಲೊಂದೆ ಜೀವಮೆನೆ ಸಂಸೃತಿಸೌಖ್ಯಮನೂಡಿದ್ದೈ ದಿಟಂ
ನೆರೆದರ ನೀತಿಯಲ್ತೆ ಸುರಲೋಕಸುಖಂ ಬೞಿಕಿಂತಿಳೇಶ ಪಿಂ ।
ತಿರಿಸುವೆ ಮೆಯ್ಯ ಪಿಂತೆ ನೆೞಲಿರ್ಪುದೆ ಬಾರದೆ ಮಾಣೆವೆಂದು ಪೂ
ಣ್ದರಸಿಯರೇಱಿದರ್ ನೃಪನ ಕೂಡೆ ಪಲರ್ ಪಿರಿಯಂದಣಂಗಳಂ ॥ ೨

ವ॥ ಮತ್ತಂ

ಶಿಬಿಕಾಂದೋಳವರೂಥದಂತಿಹಯಮುಂ ನೇಪಥ್ಯರತ್ನಾವಳೀ
ಶಬಲಚ್ಛಾಯೆ ಮುಸುಂಕೆ ಚಾಮರಸಿತಚ್ಛತ್ರಾದಿ ರೋಧೋಲತಾ ।
ಸ್ತಬಕಸ್ತೋಮಮನುಂಟುಮಾಡೆ ಸಹದೀಕ್ಷೋದ್ಯುಕ್ತರಯ್ನೂರ್ವರೇ
ಱಿ ಬರುತ್ತಿರ್ದರಿಳಾಧಿಪರ್ ಮಕುಟಬದ್ಧರ್ ಭೂಪನಿರ್ವಕ್ಕದೊಳ್ ॥ ೩

ಅವರ ವಿಲಾಸಿನೀಜನದ ರಾಣಿಯವಾಸದ ಪುತ್ರಮಿತ್ರಬಾಂ
ಧವರ ವಿಯೋಗಸಂಕಟಮನೇವೆಸಗೊಂಡಪೆನೆಂದು ನಿಂದು ಮ ।

ತ್ತವರ ಪರಪ್ರಬೋಧಿಸುವ ಕೈಲೆಡೆಮಾಡುವ ಕಣ್ಣನೀರನೊ
ತ್ತುವ ನಿಲವೇಟ್ಟೊಡಂಬಡಿಸುವಚ್ಚಿಗಮಚ್ಚರಿಯಾದು [1] ದುರ್ವಿಸಲ್ ‖ ೪

ವ‖ ಎಂದು ಬಿನ್ನವಿಸುತ್ತಿರ್ದ [2] ಇಷ್ಟಶರ್ಮರಂ ವಿಕೃತವಿನಯನಾಗಳ್ ಕೆಲದೊಳಂ ಕೇಳುತ್ತುಮಿರ್ದಶಿಷ್ಟಧೂರ್ತಂ ಚಾರುವಚನಚಾತುರ್ಯದಿಂ ನಿರವಿಸಿ

ಮಗನಂ ರಾಣಿಯ ವಾಸಮಂ ಪರವಧೂಸಂದೋಹಮಂ ಗೋತ್ರಬಂ
ಧುಗಳಂ ಶೋಕದೊಳಟ್ಟಿ ಮಚ್ಚಿಸಿದ ರಾಜ್ಯಶ್ರೀಯುಮಂ ಬಿಟ್ಟು ದೀ ।
ಕ್ಷೆಗೆವೋಪಂ ಗಡ ಚೆಲ್ವನಾಯ್ತುರಸವಾಡೇನಾದೊಡೇಂ ರಾಜ್ಯದಿಂ
ದಗಲೆಂ ಸತ್ತೊಡಮೆಂದು ತಾಂ ನಗಿಸಿದಂ [3] ಮಾಧನ್ಯನುರ್ವೀಶನಂ ‖ ೫

ವ‖ ಅಗಳ್ ಸಂತರ್ಜಿತೋಭಯಪಾಣಿಪಲ್ಲವಂ ಭೂವಲ್ಲಭಂ ವಿದೂಷಕನನಿಂತೆಂದಂ :—

ಪುಲ್ಲಿಂ ಕಷ್ಟಂ ರಾಜ್ಯಂ
ವಲ್ಲಭೆಯೆನ್ನದೊಡೆ ನೋಂತ ಬಡವಟ್ಟೊಡಲಂ ।
ಸಲ್ಲೇಖನದಿಂದಿಟಿಪಿದು
ದಲ್ಲದದೇಂ ದೇವನಾಗಲೆನಗಂ ನಿನಗಂ ‖ ೬

ವ‖ ಎಂದು ಪುನಃಕಥನಸಂಧಾನಭರಹೂಂಕೃತಾನನನಾದಿಳಾಧಿಪತಿಗಾಭೂದೇವಂ ಬಟಿಕ್ಕವಾರಾಜರಾಜಂ ರಾಜಭವನಮಂ ಪೊಱಮಟ್ಟು ರಾಜಮಾರ್ಗದಿಂ ಬಂದು ಪುರಬಹಿರ್ಭಾಗದ ನಂದನವನದೊಳ್ ನಿರೂಢರೂಢಾಂದೋಳನಾಗಿ ಸಕಲರಾಜಲೋಕಮಂ ಬೀೞ್ಕೊಳಿಸಿ ಮೇಘರಥಕುಮಾರನನೆಂತಾನುಂ ಸಂತಮಿಟ್ಟಿರಿಸಿ ಪಾದಮಾರ್ಗದಿಂ ಸ್ವಯಂಪ್ರಭಪ್ರಭುವಿನ ಆಶ್ರಮಾರಣ್ಯಪುಣ್ಯಾರಣ್ಯಮಂ ಪುಗುತಂದು ತನ್ಮುನೀಂದ್ರವೃಂದಾರಕನ ಸಮುದಾಯುಸಹಸ್ರಮಂ ತ್ರಿಃಪ್ರದಕ್ಷಿಣಂಗೆಯ್ದು

ಗುರುಪದ [4] ಸರಸಿರುಹದೊಳಾ
ನರನಾಥನ ವಿನತಮಕುಟಮಣಿಘೃಣಿಗಳಿನೊ ।

---

1 ಕ. ಗ. ದಿರ್ವಸಲ್. 2 ಕ. ಇಷ್ಮಕರ್ಮರಂ. 3 ಕ. ಮಾದನ್ಯ.
4 ಕ. ಸರಸೀಜ.

ಯ್ಯರಮಾದುದಾಯ್ತು ಕಟ್ಟಿದ
ಕರಂಬವಾಸಿಗದ ಕುಸುಮವಿಸರದ ಪಸರಂ ॥ ೭

ವ॥ ಅನಂತರಂ ಸಾಧುಸಭಾಸದಪರಿಷದ್ವಲಯದೊಳ್ ಮುನಿನಾಯಕ ಪ್ರಸಾದಾಸಾದಿತಾತ್ಮನಾಗಿ

ಒದವಿರೆ ಶಾಂತರಸಂ ಚಿ
ತ್ತದರುಚಿ ಜವನಿಕೆವೊಲೆಸೆಯೆ ನಟನೆಯ ನೇಪ ।
ಥ್ಯದ ದೇವನೃಪತಿ ಬಹುರೂ
ಪದ ಜೋಹಮನಿಟಿಪಿದಂ ಭವಪ್ರಕರಣದೊಳ್ ॥ ೮

ನಿಲೆ ಮುಖಪದ್ಮದೊಳ್ ಪರಮಪಂಚಪದಂ ಕಮಲಾಸನಕ್ಕೆ ಮ್ಯೆ
ಸಲೆ ಬಹಿರಂತರಂಗದ ಪರಿಗ್ರಹಶಾಖೆಯಿವೆಂದು ಕುಂತಳಾ ।
ವಲಿಯನಿಟಿಂಪಿದಂ ವಿಮಲಶುದ್ಧತಪಃಫಲಸೌಖ್ಯಯೋಗದೊಳ್
ತಲೆನಪಿರಲ್ತೆ ಮುಟ್ಟುಪಡಮೆಂಬವೊಲೂರ್ಜಿತಪುಣ್ಯಸಂಚಯಂ ॥ ೯

ವ॥ ಅಂತು ಪರಮಗುರುಪಾದಪದ್ಮೋಪಾಂತದೊಳ್ ಸಹದೀಕ್ಷಾಲಕ್ಷಿತ ಪಂಚಶತಪ್ರಸಿದ್ಧಮಕುಟಬದ್ಧನುಂ ನಿರ್ವೃತಿನಿಯಮಿತಕತಿಪಯಾವರೋಧಕಾಂತಾಕದಂಬನುಮಾಗಿ

ಪೊರೆಯದು ಹಿಂಸೆ ಪೊರ್ದದನೃತಂ ನಸು ಸೋಂಕದು ಚೌರ್ಯವಂಗನಾ
ಸುರತದ ವಾರ್ತೆ ಗೆಂಟೆರಡುಮಿಲ್ಲ ಪರಿಗ್ರಹಭಾರಮೆಂಬಿನಂ ।
ವೊರೆಕೊಳೆ ಜಾತರೂಪವಿಧಿ ಪಂಚಮಹಾವ್ರತಧಾರಿಯಾದನು
ದ್ಧರಿಸಿದನಿರ್ಪತೆಂಟೆನಿಪ ಮೂಲಗುಣಂಗಳುಮಂ ಮುನೀಶ್ವರಂ ॥ ೧೦

ಸುದೃಢಾಭ್ಯಾಸಮತಿಪ್ರಕಾಶಲಘುವಾತಾಧಾರದಿಂ ನಿತ್ಯಸೌ
ಖ್ಯದಶಾಲಕ್ಷ್ಮಿಯ ಚಿತ್ತಮಂ ಪಡೆದ ಮೂಱುಂ ರತ್ನಮಂ ಕೆಯ್ಗೆವೊ ।
ಡಿದನುಂ ದಾಂಟಿದನುಂ ಮುನೀಂದ್ರವಣಿಜಂ ನಿರ್ವಿಘ್ನದಿಂ ದ್ವಾದಶಾಂ
ಗದ ಚಾತುರ್ದಶಪೂರ್ವದಿಗ್ಧಲಹರೀಸಿದ್ಧಾಂತವಾರಾಶಿಯಂ ॥ ೧೧

ನಡೆನುಡಿಭಕ್ತಿ ವಸ್ತುಗಳ ಕೊಳ್ವಿಡುವಂಜಿಕೆ ಕಾಯಶುದ್ಧಿ ಮಾ
ಱ್ಪುಡುಮೆನಿಸಿರ್ಪ ಪಂಚಸಮಿತಿಸ್ಥಿತಿಯಂ [1] ತಳೆದಂ ಬಟಿಕ್ಕೆ ನೇ ।
ರ್ಪಡಿಸಿದನಂಗದೊಳ್ ವಚನದೊಳ್ ಮನದೊಳ್ ಪರಪೀಡೆ ಪೊರ್ದದೊ
ಳ್ಪಡರ್ವಿನೆಗಂ ತ್ರಿಗುಪ್ತಿಗಳುಮಂ ಜಿನಶಾಸನರತ್ನದೀಪಕಂ ॥ ೧೨

ಪದಿನೆಂಟು ಸಾಸಿರಂ ಶೀ
ಲದೊಳೆಸೆದೆಂಬತ್ತುನಾಲ್ಕು ಲಕ್ಕೆಗುಣಂಗಳ್ ।
ಪುದಿದು ಕಟಿದಂ ಪ್ರಮಾದಂ
ಪದಿನೈದುಮನೆಯ್ದೆ ಯೋಗಿಜನಮುಖತಿಲಕಂ ॥ ೧೩

ವ॥ ಅಂತು ಶೀಲಗುಣಂಗಳ ನಿಳಯನಾಗಿ [2] ಸಂಚಳನಚತುಷ್ಕಮುಂ ನವ ನೋಕಷಾಯಮುಂ ಮಂದಮಂದಪವನಾಂದೋಳಿತ ಸ್ವಚ್ಛಜಲಶೈವಲಪಟಳದಂ ತಿರೊಯ್ಯನೋಸರಿಸಲೊಡಗೆ ಶುದ್ಧಾತ್ಮಭಾವನಾಬಲದಿಂ ಸಮಸ್ತಗುಣಸ್ಥಾನ ದೊಳ್ ನಿಂದಪ್ರಮತ್ತಸಂಯತನಾದನಂತುಮಲ್ಲದೆಯುಂ

ಕ್ಷಮೆಯಿಂ ಮಾರ್ದವದಿಂ ಋಜುಪ್ರಕೃತಿಯಿಂ ಸತ್ಯೋಕ್ತಿಯಿಂ ಶೌಚದಿಂ
ಯಮದಿಂದಂ ತಪದಿಂದೆ ದಾನರುಚಿಯಿಂ ನಿಷ್ಕಿಂಚನಬ್ರಹ್ಮಚ ।
[3] ರ್ಯಮಹಾಮಾರ್ಗದಿನಿಂತು ಕೂಡೆ ದಶಧರ್ಮಂಗಳ್ ಭವಾರಣ್ಯಸಂ
ಕ್ರಮಣಕ್ಕಾಗಿಸಿದಂ ತಪೋಧನಲಸತ್ಪಾಥೇಯಮಂ ತಾಪಸಂ ॥ ೧೪

ವ॥ ಅದಲ್ಲದೆಯುಂ

ಅವಿಚಲಧೈರ್ಯದಿ [4] ನಾಚಾ
ಮ್ಲವರ್ಧನಂ ನೆಗಟ್ದ ಸಿಂಹನಿಷ್ಕ್ರೀಡಿತಮೆಂ ।
ಬಿವು ಮೊದಲಾಗಿರ್ದ ಮಹೋ
ಪವಾಸಮಂ ಮೊದಲ ತಪದೊಳಾಂತಂ ಮುನಿಪಂ ॥ ೧೫

(ಪಿರಿಯಕ್ಕರಂ)

ನೆಗಟ್ದ ಸಾಕಾರದನಶನಮೊಂದು ತುತ್ತಿಂದಮೊಂ [ದೂನ] ಮುಳುಳ್ಳಪ್ಪಿನಂ
ತೆಗೆದುಕೊಳ್ವವಮೌದರ್ಯಂ ಚಿಹ್ನಂಕುಡಡ ದುಂ ನಿಲ್ಲದವೃತ್ತಿಪರಿಸಂಖ್ಯಾನಂ ।

---

1 ಕ. ತಳೆಯಂ. 2 ಗ. ಸಂಜ್ವಳನ. 3 ಕ. ರ್ಯೆ. 4 ಗ. ನಾಂಚಾಂ.

ಸೊಗಯಿಪ ರಸವರ್ಗಂ ಮಾಣ್ಬ ರಸಪರಿತ್ಯಾಗಮಂಗನೆ ಷಂಡ ಪಶು ಮಾನಸಂ
ಮೃಗಮಿಲ್ಲದಲಿರ್ಪ ನುತವಿವಿಕ್ತಾಸನಮೆಂಬಯುದ್ಧಂತಪಮನಾ ಮುನಿ ತಾಳ್ದಿದಂ ॥

ಆಱಿಸಲಂಗದ ಮಲಮಂ
ಪಾಱಿಸಲಿಂದ್ರಿಯದ ದರ್ಪಮಂ ಮಾರ್ಗದ ಮೈ ।
ದೋಱಿಸಲಾಱನೆಯ ತಪ
ಕ್ಕೇಱಿದನಾತಪದ ಪೆಸರೆ ಕಾಯಕ್ಲೇಶಂ ॥ ೧೭

ಹೃದಯದ ಕಾಂತಿಯಿಂ ಮರುಮರೀಚಿಕೆ ತೀರತರಂಗಿಣೀತರಂ
ಗದ ದೊರೆಯಾಗೆ ದಳ್ಳುರಿವೊಲೇೞ್ವ ಬಿಸಿಲ್ ಹಿಮಪುಂಜಮಂ ಮುಸುಂ ।
ಕಿದ ತೆಱನಾಗೆ ತನ್ಮನಿಗೆ ಕಲ್ಮಿಲೆಯಲ್ಲಿದು ಬೆಳ್ಳಮಾಸಮೆಂ
ಬುದನೆಸಗಿತ್ತು ಬೇಸಗೆಯ ಬೆಟ್ಟದ ಕಲ್ನಿಲೆಸಿಂದ ಗೌರವಂ ॥ ೧೮

ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮೞೆ ಕೂಡೆ ಲಚ್ಚಣಂ
ಬರೆದವೊಲುಳ್ಕಿ ಪೆರ್ಮೞೆಯ ರಾಶಿಗೆ ಮಿಂಚಿನ ಬಳ್ಳಿ ಭೂತಲಂ ।
ಬಿರಿಯೆ ಸಿಡಿಲ್ ಸಿಡಿಲ್ದೆಱಗೆ ಕಲ್ಲಬಳಾರನವೊಲ್ ತಪೋಧನಂ
ಮರಮೊದಲಿರ್ದನೆನ್ನದೊಡಲೆನ್ನದೊಡಂಬಡೆ ಮೇಘಕಾಲದೊಳ್ ॥ ೧೯

ವೀರತಪಸ್ವಿ ನಿಂದನಿರುಳುಂ ಪಗಲುಂ ಹಿಮಪುಂಜಮಂಗದೊಳ್
ಬೂರಮನೊಟ್ಟಿದಂತಲೆಯೆ ತಣ್ಣೆಲರ್ಗೇೞ್ವ ತರಂಗಶೀಕರಾ ।
ಸಾರದ ಮಂಜು ಸುತ್ತಿಱಿದು ಕುತ್ತಿಱಿಯುತ್ತಿರೆ ಮಾಗೆಯೊಳ್ ನದೀ
ತೀರಹಿಮೋಪಲೋಪರಿಮದೊಳ್ ಬಗೆಗೊಳ್ಳದೆ ಬೆಳ್ಳ[1] ಮಾಸದೊಳ್ ॥ ೨೦

ವ॥ ಅಂತು ಷಡ್ವಿಧಮಾದ ಬಾಹ್ಯತಪಸ್ತಾಪದಿಂ ಹೃದಯಪಟ್ಟಂ ಪುಟ ವಿಟ್ಟಂತೆ ಕರ್ಮಾವಲೋಹಕಾಳಿಕೆಯಿಂ ಪಿಂಗುವಿನಂ ಪ್ರಮತ್ತಾಪ್ರಮತ್ತಗುಣಸ್ಥಾನವರ್ತಿಯಾಗಲೊಡಂ

ಈ ವಿಧದಿಂ ಪನ್ನೆರಡು ತ[2]
ಪೋವಿಧಿಯಂ ಧೈರ್ಯದಿಂದ ನೆರಪಿ ಸಮತ್ವೀ ।

---

1 ಗ. ಮಾಸಿನೊಳ್.  2 ಗ. ತಮಂ.

ಭಾವದೊಳೆ ಪರೀಷಹಮಂ
ದ್ವಾವಿಂಶತಿಯಂ ಯತೀಶ್ವರಂ ಬೆಂಕೊಂಡಂ ॥ ೨೧

ಪ್ರಾಯಶ್ಚಿತ್ತಂ ವಿನಯಂ
[1] ವೈಯಾಪ್ರತ್ಯಂ ತಪಸ್ವಿಗನುಬದ್ಧಸ್ವಾ ।
ಧ್ಯಾಯಂ ವ್ಯತ್ಸರ್ಗಪ್ರಾ
ಲೇಯಧ್ಯಾನಂ ತಪೋಧನಾಂತರ್ಯತಪಂ ॥ ೨೨

ವ॥ ಅಂತು ವಿಶೋಧಿಪರಿಣಾಮಸಾಮರ್ಥ್ಯದಿನನಿವೃತ್ತಿಪರಿಣಾಮೋಪೇಕ್ಷೆಯನಪ್ಪುಕೆಯ್ದು

ಉಡುಗೆ ಮದಂ ಪಿಡಿಗೆ ಮಲಂ
ಕೆಡೆ ಜಂಘಾಶಕ್ತಿಯೂಥಪತಿ ಕಡುಪಿನ ಸಂ ।
ಗಡಮನುಟಿವಂತೆ ತಪದಿಂ
ಬಡಪಟ್ಟು ಮುಮುಕ್ಷುಗಣದ ಗಣಜಮನುಟಿದಂ ॥ ೨೩

ಕಡುಬಡವಾಗಿ ನೆಕ್ಕೆ ಗೆಡೆ ಮೆಯ್ಯ ಮಲಂ ದಳವೇಱಿ ಮೆತ್ತಿದಂ
ತಡರ್ದಿರೆ ಸಂಯಮೋಪಕರಣಕ್ಕೆಡಗೈ ಬಲಗೈ ಪೆಗಲ್ಗೆ ನೇ ।
ರ್ಪಡೆ ನೊಗದಂತರಂ ನಡೆಯೆ ಕಣ್ಕೆಸಱಿಂ ಕಱುವಿಟ್ಟು ಜಂತ್ರಮಂ
ನಡೆಯಿಸುವಂತೆ ವರ್ತಿಪನರಣ್ಯದೊಳೇಕವಿಹಾರಿ ತಾಪಸಂ ॥ ೨೪

ವ॥ ಅದಲ್ಲದೆಯುಂ

ಪಗಲಿರುಳೆಂಬವೂರಡವಿಯೆಂಬ ಬಿಸಿಲ್ ನೆಟಲೆಂಬ ಮಾನಸರ್
ಮೃಗಗಣಮೆಂಬ ಕಲ್ನೆಲಮಿದೆಂಬಿದು ತಾಂ ಪೆಱರೆಂಬ ಭೇದದೊಳ್ ।
ಬಗೆಗಱಿವಿಲ್ಲ ತನ್ನೊಳಗೆ ತನ್ನನೆ ತಾನಱಿದಿರ್ದನಾತ್ಮನಿ
ಷ್ಠೆಗೆ ಗುಱಿಯಪ್ಪವೋಲ್ [2] ಪ್ರತಿಮೆಯಪ್ರತಿಮಂ ಪ್ರತಿಮಾಂಗಯೋಗದೊಳ್॥

1 ಸಂಸ್ಕೃತ ಜೈನಗ್ರಂಥಗಳಲ್ಲಿ ವೈಯಾವೃತ್ತ್ಯಂ ಎಂದು ಇದೆ.
2 ಗ. ಪ್ರತಿಯನಪ್ರತಿಮಂ.

ನಂದದ ಬಿಸಿಲಿಂ ಬೆಮರೊಗೆ
ತಂದು ತನೂಮಳದ ಕದಡುವೆರಸಿಟಿಯೆ ತಪೋ |
ವೃಂದಾರಕನೊದವಿದ ಕಾ
ಳಿಂದಿಯ ಬರಿವೊನಲನಾಂತ ಗಿರಿಯಂತಿರ್ದಂ || ೨೬

ಗೀಜಗನ ಗೂಡು ಕುಂತಲ
ರಾಜಿಯ ಬಟಿವಿಡಿದು ಕೆನ್ನೆಯಿಂದಿಟಿಯೆ ತಪೋ |
ರಾಜನಪವರ್ಗಲಕ್ಷ್ಮೀಸ
ರೋಜಾತದ ಕನ್ನವುರಮನಿಟ್ಟಂತಿರ್ದಂ || ೨೭

ಪಾಪೊಟಿಲೆಯಿಟ್ಟ ಪುತ್ತಿನ
ಪೊಟಿಲ ಪಾವುರಮನಡರ್ದು ಪೆಗಲಿಂ ಜೋಲ್ದಂ |
ದೇಪೆಂಟಿಟಿತರೆ ಯತಿಪತಿ
ಬೀಟಲ್ವರಿದಿರ್ದ ಕಲ್ಪಕುಜಮಂ ಪೋಲ್ತಂ || ೨೮

ಒರಸಿಕೊಳಲೆಂದು ಪೊರ್ದಿದ
1 ಹರಿಣಂ ಮೇಗಡರ್ದ ಪುತ್ತು ಸಾರ್ದ ಲಂ ಶಾಂ |
ತರಸಪ್ರಭಾವಮೆಸೆದಿರೆ
ಧರೆಯೊಳ್ ಮೂಡಿದ ಸುಧಾಂಶುವಂ ಮುನಿ ಪೋಲ್ತಂ || ೨೯

ವ|| ಅಂತುಪೇಕ್ಷಾಸಂಯಮದೊಳ್ ನೆಗಟ್ತೆವಡೆದುಮಂತರ್ಭಾವಸಾಲಂ ಬಮುಪಾದ ಪರಮಪಾವನಪ್ರತಿಮಾಯೋಗನಿಷ್ಠೆಯೊಳ್

(ಅಕ್ಕರ)

ಪದಿನೆಂಟುಂಭೇದದರ್ದ್ಧಿ ಘೋರಾದಿತಪೋಬುದ್ಧಿಯಣಿಮಾದಿವಿಕ್ರಿಯರ್ದ್ಧಿ
ಪುದಿದಂಗಮಳಮೆ ದಿವ್ಯೌಷಧಮೆನಿಸಿದೌಷಧರ್ದ್ಧಿ ಕೆಯ್ಯೊಳಿಕ್ಕಿದ ನೀರಸಂ |
ಮ್ಮದುರಸಾಯನಮಪ್ಪ ರಸರ್ದ್ಧಿ ಯಳ್ಕದಬಳರ್ದ್ಧಿಯುಂಡುಮಿಕ್ಕನ್ನಮಿದಾರ್
ಸ್ವದಮುಂಟುಕಟಕಕ್ಕಮೆನಿಸುವಕ್ಷೀಣರ್ದ್ಧಿಯಿಂತುಸಪ್ತರ್ದ್ಧಿಯಂಮುನಿತಾಳ್ದಿದಂ

---

1 ಗ, ಹರಿಣಂಗಳ ಮೇಗಡರ್ದ ಪುತ್ತುಂ ಸಾರ್ದ.

ವ॥ ಅಂತು ತಾಳ್ದಿ

ಮಂದರದೊಳ್ ಗೋತ್ರಾಚಲ
ಕಂದರದೊಳ್ ಸಾಗರಾಂತರ್ದ್ವೀಪದೊಳಂ ।
ಬಂದೆಯ್ದಿರ್ಪ್ಪಕೃತ್ರಿಮ
ಮಂದಿರಮಂ ಚಾರಣರ್ದ್ಧಿಯಿಂ [3] ಬಂದಿಸುವಂ ॥ ೩೧

ಸುಮನಸ್ಸದ್ಮಲತಾಂತಕಾಂತಮಣಿಮಾಲಾದೀಪಧೂಪಾರ್ಚನ
ಕ್ರಮದೇವೀಜನಗೀತವಾದ್ಯರಸಲಾಸ್ಯಪ್ರೇಕ್ಷಣಕ್ಷೋಭ್ಯಕೃ ।
ತ್ರಿಮಚೈತ್ಯಾಲಯವಂದನೋತ್ಕಳಿತಚಿತ್ತಂ ಬ್ರಹ್ಮಚರ್ಯಕ್ಕೆ ಭಂ
ಗಮಿಳಾಸ್ಪರ್ಶನಮೆಂಬವೋಲ್ನಡೆವನಂಭೋಧಾಧ್ವದೊಳ್ತಾಪಸಂ ॥ ೩೨

ಒಂದುಟಿದರೆಪಕ್ಷಂ ಮಕ
ರಂದಮಹೀಧರದ ಕಂದರೋಪಲದೊಳ್ತಾಂ ।
ನಿಂದಂ ಸುಟಿಯದೆ ಪಕ್ಷಂ
ಕುಂದಿದ ಕಳಹಂಸನಂತೆ ಮುನಿಕಳಹಂಸಂ ॥ ೩೩

ವ॥ ಅಂತು ಪರಮೋಪೇಕ್ಷಾಪರಿಪಾಳನದ ಸೇದೆಯೊಳ್

ಪ್ರಶಮಿಸಿದ ಮೋಹನೀಯ
ಪ್ರಶಾಂತಿಯಿಂ ಸೂಕ್ಷ್ಮಸಾಂಪರಾಯಕ್ಷಪಕೋ ।
ಪಶಮಕಸಂಯುತನಾದಂ
ದಶಮಗುಣಸ್ಥಾನವರ್ತಿಮುನಿಮುಖತಿಲಕಂ ॥ ೩೪

ತನು ತಾನಧ್ರುವಮಾರುಮಿಲ್ಲ ಶರಣಾನೇಕಾಕಿಯೆಂ ದೇಹಮುಂ
ತನತಲ್ತನ್ಯತರಂ ಭವಂ ತ್ರಿಜಗಮಿಾಯೆಂದಂ ಜುಗುಪ್ಸಾಕರಂ ।
ತನು ಪಾಪಕ್ಕಿದು ಬರ್ಪ ಬಟ್ಟೆ [4] ತಗರ್ವಂ ದಾತಾನಿದೀಪಾಂಗುಗೆ
ಲ್ವ ನಯಂ ಧರ್ಮಮಡರ್ಪು ಬೋಧಿಪಳಮೆಂಬೀರಾಱನುಪ್ರೇಕ್ಷೆಯಂ ॥ ೩೫

1 ಗ. ಕ್ಷುಣವೃದ್ಧಿ. 2 ಗ. ವೀಕ್ಷಣ. ಕ. ವಿಕ್ಷಣ. 3 ಕ. ಬಂಧಿಸುವಂ.
4 ಕ. ತವರ್ಗಂಧಂತಾ.

(ಪಿರಿಯಕ್ಕರ)

ಮುನಿಗೆ ದರ್ಶನಶುದ್ಧಿ ವಿನೇಯಂ ಶೀಲವ್ರತಂ ಜ್ಞಾನೋಪಯೋಗಂ ತನು
ಮನಸ್ತಪನಸಮಾಧಿವೈಯ್ಯಾಪ್ರತ್ಯಮರ್ಹದಾಚಾರ್ಯಬಹುಶ್ರುತೋಪಾಸ ।
ನೆ ನುತಶ್ರುತಭಕ್ತಿಯಾವಶ್ಯಕಕ್ರಿಯೆ ಮಾರ್ಗಪ್ರಭಾವನೆ ವಾತ್ಸಲ್ಯಮಿಂ
ತನುಮಾಯ್ತು ತೀರ್ಥಕೃತನಾಮಕರ್ಮವನೀವಷೋಡಶಭಾವನೆಯೆಭಾವದೊಳ್

ವ॥ ಅಂತು ನೋಂತು

ಪ್ರಾಯೋಪಗಮನವಿಧಿಯಿಂ
ಕಾಯಮನಳವಡಿಸಿ ವಿಮಳಶುದ್ಧಧ್ಯಾನಂ ।
ಧ್ಯೇಯದೊಳಮರೆ ಮುಮುಕ್ಷು
ಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ ॥ ೩೭

ಅಳ್ಕದೆ ಚಿತ್ತದೊಳ್ ಬೆದಱು ಬೆಳ್ಕಱದುಗ್ರತಪೋನುತಾಪದಿಂ
ಬಳ್ಕದೆ [1] ನೋಂಪಿಯಿಂ ಗೊಲಗೆವಂದ ಶರೀರಗುಣಾನುರೋಧದೊಳ್ ।
ತಳ್ಕಱದಿರ್ದು ಜೀವಶರಮಂ ಬಿಡೆ ಧಾರ್ಮಿಕಚಕ್ರವರ್ತಿ ತಾಂ
ಪಿಳ್ಕು ಬಳಿಲ್ದು ಮೇಗೊಗೆದು ತಾಗಿದುದಚ್ಯುತಕಲ್ಪಲಕ್ಷ್ಯಮಂ ॥ ೩೮

ಅಣಿಮಾದಿಮಣಿಗಣಂಗಳ
ಕಣಿ ಸಾಗರಸಂಮಿತಾಯುವಿಂಗಾಗರಮೊಂ ।
ದಣಕದ ರಾಗದ ಭೋಗದ
ತಣಿವಿಂದ್ರತ್ವದ ಮಹತ್ವಮಚ್ಯುತಕಲ್ಪಂ ॥ ೩೯

ಅದಱ ವಿಳಾಸಮಂ ಪೊಗೞಲಾನಱಯೆಂ ಹದಿನಾಱು ಸಗ್ಗದ
ಗ್ಗದ ಸುಖದೊಂದು ತುತ್ತತುದಿ ಸಂವಹಮಿಂದ್ರಸುಖಕ್ಕೆ ಸಿದ್ಧಿ ಸೌ ।
ಖ್ಯದನಿಳಯಕ್ಕೆ ಮೊತ್ತಮೊದಲಚ್ಯುತನಾಮಮಿದಕ್ಕೆ ಸೌಮ್ಯಮೆಂ
ಬುದನೆನೆ ತಾನೆ ನಟ್ಟನಡುಮಾಮದು ಕಲ್ಪಮನಲ್ಪಸೌಖ್ಯದಾ ॥ ೪೦

1 ಕ. ಗ. ನೋಂಪಿಯುಂ.

ವ॥ ಅಂತು ನೆಗಟ್ತೆವಡೆದಚ್ಯುತಕಲ್ಪಲಕ್ಷ್ಮಿಗುತ್ತಂಸಕಲ್ಪಮೆನಿಸಿ

ಮುತ್ತಿನ ಕಂಭದ ವಜ್ರದ
ಭಿತ್ತಿಯ ಶಶಿಕಾಂತದ ಶಿಲೆಯ ನೆಲಗಟ್ಟಿನ ಪು ।
ಷ್ಪೋತ್ತರವಿಮಾನದೊಳಗಿ
ಪ್ಪತ್ತೆರಡಂಬುಧಿಮಿತಾಯು ಸುರವರನೊಗೆದಂ ॥ ೪೧

ನವರತ್ನಾಭರಣಪ್ರಭಾಪಟಳದೊಳ್ನೈರ್ಮಲ್ಯಬೀಜ[1] ನ್ತನು
ಚ್ಛವಿ ಸಂಪೂರ್ಣಸುಧಾಂಶುವಂ ಸುರಧನುಶ್ರೀಯಪ್ಪಿದಂತಾಗೆ ತ ।
ನ್ನ ವಿಮಾನಂ ಶರದಭ್ರವಿಭ್ರಮಮನಾದಂ ಬೀಱೆ ಕೈಕೊಂಡನಾ
ಭುವನಾಗ್ರೇಸರನಚ್ಯುತೇಂದ್ರಪದವೀಸಾಕಲ್ಯಮಾಂಗಲ್ಯಮಂ ॥ ೪೨

ದಿವಿಜಾಧೀಶನಧೀನಮಾಯ್ತು ಸಲೆ ಪೀತಶ್ವೇತಹಾರೀತರ
ತ್ನವಿಮಾನಂ ತ್ರಿಶತೀಶತಾರ್ಧವಿಭವಾದಿಸ್ಯಂದನಾಂಘ್ರೀಯಪುಂ ।
ಗವ[2] ಗಂಧರ್ವನಟೀವರೂಥಿನಿಗಳಿಳೇಶಾಧಿಪರ್ನಾಲ್ವರೊ
ಪ್ಪುವ ವೈಮಾನಿಕದೇವರೊಂದಯುತರೆಣ್ಬರ್ಪಟ್ಟಮಾದೇವಿಯರ್ ॥ ೪೩

(ತ್ರಿಪದಿ)

ಮೂವತ್ತಿರ್ಛಾಸಿರ ಮುಖ್ಯದೇವಿಯರಱುವತ್ತುಂ ।
ಮೂವರ್ದೇವಿಯರೆನಿಪ ಪಸಾಯಿತೆಯರಾ
ದೇವನ ವಿಭವ[3] [ಮಸಾದೃಶ್ಯಂ] ॥ ೪೪

ಅಸುರವರನಿಪ್ಪತ್ತಿ
ಚ್ಛಾಸಿರವರ್ಷಕ್ಕೆ ನೆನೆವ ನುಣಿಸಂ ಬಗಿಸಂ ।
ಮಾಸೂನಮಾಗೆ ನಿಜನಿ
ಶ್ವಾಸದ ಪರಿಮಳದೆ[1] ದಿವಮನಧಿವಾಸಿಸುವಂ ॥ ೪೫

ನೋಟದ ಸೋಲಮಪ್ಪಿನ ಸುಖಂ ರಸಚುಂಬನದಿಂಪು ಸುಯ್ಯಕಂ
ಪಾಟಿಸಲಲ್ಲೆ ಮೆಯ್ಯ ಸಂದಪುವೆ ಮಲರ್ದಾಯ್ದುಮಿಂದ್ರಿಯಂ ।

1 ಕ. ಸ್ಥನು. 2 ಕ. ಗ. ಸಂ. 3 ಕ. ಗ. ಮಸದೃಶಂ. 4 ಗ. ದಿವಸಮ.

[1] ಜೇಟದ ಗೊಂಚಲಂತೆ ಮನಮೆಂಬ ತೊಡಂಬೆಯೊಳೊಪ್ಪೆ ಮೊದಲ್ ಸುಖಾ
ಶ್ಲೋಟಮನೀಯುವೆನ್ನವು ಮನಃಪ್ರವಿಚಾರದ ಕಾಮಕೇಳಿಗಳ್ ೪೬

ತರುಣತೆಯುಂ ವಸಂತಸಮಯುಂ ಕಲಿತೋದ್ಗಮಸೌರಭಂಗಳೊಳ್
ಪೊರೆದಪ್ರೊಲಂಗನಾಸಹಿತಮಾದಿವಿಜಾಧಿಪನಂ ಮನಃಪ್ರವೀ ।
ಚರಣಸುಪೋದಯುಂ ಸಮಸಮುದ್ಭವಸಂಗತಿಯಿಂದಲಂಪಿನ
ಚ್ಚರಿಯನೊಡರ್ಚೆ ಮೂಡಿ ಮುಬುಗಾಡಿಸುಗುಂ ಸತತಾಮೃತಾಬ್ಧಿಯೊಳ್ ॥ ೪೭

ಪಳುಕಿನ ಪಸೆಯೊಳ್ ಕಪ್ಪುರ
ವಳುಕಿನ ಪುತ್ತಳಿಯನಿಟೆಪಿದಂತೆ ಪೊಟಂ ಮೂ ।
ಱಳತೆಯು ತನುರುಚಿ ಕಂಪಿನ
ಪೊಳಪಿನ ಕೌಮುದಿಯನೇಂ ಕಡಲ್ವರಿಯಿಪುದೋ ॥ ೪೮

ಸ್ಫುರಿತವಿಮಾನಭಿತ್ತಿಗಳ ಚಿತ್ರದ ಮೇಲೆ ಸುಧಾರಸಂಗಳಿಂ
ದರೆಬಳಿದಂತೆ ಸುತ್ತಿಱಿದ ನಾಕನಿಕಾಯುಮನಚ್ಚಮುತ್ತಿನೊ ।
ಚ್ಚರದೆ ಮುಸುಂಕುವಂತೆ ಸುರಕಾಮಿನಿಯರ್ಕಳ ಕಣ್ಮಲರ್ಗೆ ಕ
ಪ್ಪುರದ ಶಲಾಕೆಯುಂ ಪಸರಿಪಂತೆಸಗುಂ ಮಿಸುಪಚ್ಯುತೇಂದ್ರನಾ ॥ ೪೯

ಮದನನ ಬಿಲ್ಲ ಜೇವೊಡೆ ವಿಪಂಚಿಯು ಬಂಚದ ನುಣ್ಪು ಕರ್ಣಪೂ
ರದ ಪರಮಾಮೃತಾಂಬುವೆನೆ ನೇವುರದಿಂದುಡೆನೂಲ ತೊಂಗಲಿಂ ।
ಮೃದುರವಮುಣ್ಮೆ ಕೂಡಿ ಸುಟಿವರ್ ಕರುಮಾಡದೊಳಿಂದ್ರಕಾಂತೆಯರ್
ಸದನಮಹತ್ತರಾಮರೆಯರಪ್ಸರೆಯರ್ ಪರಿವಾರದೇವಿಯರ್ ॥ ೫೦

ಸಹಜವಿಭೂಷಣಾಂಬರವಿಲೇಪನಕೇಸರದಾಮಗಂಧಸ
ಸ್ಪೃಹಮಧುಪಾಳಿ ಮಂಡಳಿಸಿ ಸೀಗುರಿಯುಂತಿರೆ ಚಾಮರಂಗಳಿಂ ।
ಬಹುವಿಧಮಿಕ್ಕುವರ್ ದಿವಿಜನೋಲಗದೊಳ್ ತನುಕಾಂತಿ ಕೌಮುದೀ
ಲಹರಿಯ ತುಂತುಱಿಂತೊಗೆಯೆ ಮುದ್ದಿನ ಒರ್ದಿನ ವಾರನಾರಿಯರ್ ॥ ೫೧

ಪಗೆ ಪೆಜತಿಲ್ಲ ಕಂಟಕಸಮಾಕುಲಮಿಲ್ಲ ವಿಭೀತಿಯಿಲ್ಲ ಭೂ
ತಿಗೆ ಕುಱುಪೆಂಬ ಕಿಂಕರರ ತೊಣ್ಮೆಯಿದೆಂಬ ವಿಲಾಸಮೆಂಬ ದೇ ।

1 ಕ. ಜೋಟದ.

ಶ್ಯಗೆ ದಶಲಕ್ಷ ಲೆಕ್ಕದಸಿಖೇಟಕಕೋಟಿಯ ಮಿಂಚು ಬಳ್ಳಿದೀ
ವಿಗೆಯನಲರ್ಚೆ ದೇವಸಭೆಯೊಳ್ ಮೆಱೆವರ್ ದಿವಿಜಾಂಗರಕ್ಷಕರ್ ॥ ೫೨

ಪದಿನಾಱುಂ ಪಟಲಂಗಳಪ್ಪ ದಿವಮಂ ತಟ್ಟುರ್ಚೆಯುಂ ಮಧ್ಯಲೋ
ಕದಿನಿತ್ತಲ್ ಕೆಳಗಯ್ದು ಪೃಥ್ವಿಗವಧಿಜ್ಞಾನಾಕ್ಷಿ ಸಲ್ವಂತೆ ಸ ।
ಲ್ವುದು ತಾಂ ವೈಕ್ರಿಯಿಕಾಂಗವೆಂದೊಡೆಸಕಂಬೆತ್ತಚ್ಯುತೇಂದ್ರಂಗೆ ಮಾ
ಡದುದೇಂ ಕೂಡದುದೇಂ ಒಡಂಬಡದುದೇಂ ನಿಸ್ಸೀಮಸಾಮರ್ಥ್ಯದೊಳ್ ॥೫೩

ಪನಧಿದ್ವೀಪಸುಮೇರುವರ್ಷಧರನಾಗಾವಾಸನಂದೀಶ್ವರಾ
ಪನಿಗಳ್ಗೆಲ್ಲಮಕೃತ್ರಿಮೋತ್ತಮಜಿನಾವಾಸಕ್ಕೆ ಬೆನ್ನಿತ್ತು ವಾ ।
ಹನದೇವರ್ ಗಜವಾಜಿಸೈರಿಭಗವೇಂದ್ರಾಕಾರಮಂ ತಾಳ್ದು ತಿ
ರ್ಪಿನಮೆಯ್ತಂದು ಮಹಾಮಹೋತ್ಸವಮನಾಕಲ್ಪಾಮರಂ ಮಾಡುಪಂ ॥ ೫೪

ಅಮರೇಂದ್ರಾಣಿಯರೊಂದನಂತಮಮರೀಸಂದೋಹಮಂತೊಂದನಂ
ತಮಲಂಪಿಂ ಬರೆ ತೀರ್ಥಕೃತ್ಪದಸಪರ್ಯೋದ್ದೀನಯಾನಂಗಳಿಂ ।
ದಮರೇಂದ್ರಂ ರಸಭಾವಚಿತ್ರಗತಸೂಚೀಯಾನನಾನಾವಿತಾ
ನಮಯಂ ಮಾಳ್ಪನುಪಾತ್ತಸಪ್ತವಿಧಸೇವಾಸ್ತೋಮಮಂ ವ್ಯೋಮಮಂ ॥ ೫೫

ಅಣುತಮನಾಗಿ ಮೇರುಸಮನಾಗಿ ಧರಾಗುರುವಾಗಿ ನೋಳ್ಪಿನಂ
ತೃಣಸಮನಾಗಿ ಲೋಕಸದೃಶಾಯತನಾಗಿ ಸರಾಗನಾಗಿ ವಾ ।
ರಣಪತಿಯಾಗಿ ಮೋಹನತರಾಕೃತಿಯಾಗಿ ಜಿನಾರ್ಚನಕ್ಕೆ ಪೆ
ಕ್ಕಣಮನೊಡರ್ಚೆ ತೋರ್ಪನಣಿಮಾದಿಗುಣಂಗಳನಚ್ಯುತಾಮರಂ ॥ ೫೬

ಅನಿತೊಂದಚ್ಚರಿಯಚ್ಯುತೇಂದ್ರವಿಭವತ್ಸರ್ವಾಂಗಲಕ್ಷ್ಮೀಪ್ರಣೂ
ತನಗರ್ವಕ್ಕೊಗೆದಪ್ಪನೆಂದು ಮುನಿನಾಥರ್ ಪೇಳ್ದರಾಕಲ್ಪಜೇಂ ।
ದ್ರನನಂತಂ ಪರಮಂ ಚತುರ್ದಶಜಿನಂ ತತ್ಪುತ್ರನೆಂದಿಷ್ಟಶ
ರ್ಮನದೇಂ ಪೇಳ್ದನೊ ಸಿಂಹಸೇನನರನಾಥಂಗಂ ಜಯಶ್ಯಾಮೆಗಂ ॥ ೫೭

ವ॥ ಅಂತು ಕೇಳ್ದು ಸಂತೋಷಭಾಷಾಪೀಯೂಷಪೂರದೊಳ್ ಸಭಾಜನ ಪರಿಜನ ಬಂಧುಜನಮನಿತುಂ ತುಱುಂಕಿ ತೇಂಕಾಡುವಿನಮರಸನುಮರಸಿಯುಂ ಪರಿತೋಷದ ಪರಮಕೋಟಿಯನೆಯ್ದಿ

ಸ್ವಾತಿಯೆ ಬರ್ಪವೊಲ್ ಮದನಮಂಜರಿ ಬಂದೊಸೆದಿಷ್ಟಶರ್ಮಜೀ
ಮೂತಮುಖಾಗ್ರದಿಂ ಪ್ರಚುರಚಾರಣಸನ್ಮುನಿಹೈಮಶೈಲಸಂ ।
ಭೂತಕಥಾಂಗಗಾಂಗಜಲವರ್ಷಮನಾಗಿಸೆ ತನ್ನೃಪೇಂದ್ರನು
ದ್ಭೂತಳವಾಯ್ತು ಪಾವನಪದಂ ಪುಳಕೋದ್ಗಮಸಸ್ಯಸಂಪದಂ ॥ ೫೮

ವ॥ ಅನಂತರಂ ವಿಶಿಷ್ಟಶರ್ಮನವನೀವಲ್ಲಭಂಗಿಂತೆಂದಂ :—

ಕೃತಕೃತ್ಯರಾದೆವಾಂ ಮುಂ
ಸುತನಂ ತ್ರೈಲೋಕ್ಯನಾಥನಂ ಪಡೆವೀದಂ ।
ಪತಿಯುಂ ನಿಮ್ಮಂ ನೋಡಿದ
ಕತದಿಂದಿನ್ನೆಮಗೆ ದೇವ ಬೀಡ್ಕೊಡವೇಟ್ಕುಂ ॥ ೫೯

ವ। ಎಂಬುದುಮಾಥರಾಮರಬಿನ್ನಪಮನವಧಾರಿಸಿ

ಸಮನಿಸಿದ ಕಲ್ಪಕುಜದಾ
ರಮೆ ಪಣ್ತಿಬಿಗಿದವೊಲಿತ್ತು ನರನಾಥನ ತೋಳ್ ।
ಸುಮನೋಹಕಮಂಬುದನಾ
ಮಮುಮಂ ದ್ವಿಗುಣಿಸಿದುದಿಷ್ಟಶರ್ಮಂಗಾಗಳ್ ॥ ೬೦

ಒಡೆಯಳ್ ಮನಕ್ಕೆ ವಲ್ಲಭೆ
ಯೊಡೆಯಳ್ ರಾಜ್ಯಕ್ಕೆ ಮದನಮಂಜರಿಯೆನೆ ಮೆ ।
ಲ್ದುಡಿಗೆಗಳಿಂ ವಿಾಸಲ್ಗಳೆ
ದುಡಿಗೆಗಳಿಂದಂ ನನಾಂದ್ರುವಂ ಮನ್ನಿಸಿದಂ ॥ ೬೧

ವ॥ ಅಂತು ಮನ್ನಿಸಿ ಬೀಡ್ಕೊಡಲೊಡವೊಡನೆಟ್ದು ತಳ್ಕೈಸಿಕೊಂಡು ಪೊಡೆವಟ್ಟು ಸಹೋದರೀವಿಯೋಗವಿಹ್ವಳೀಭೂತಚೇತಸೆಯಾಗಿ

ಅವನಮ್ರಾಸ್ಯಾಬ್ಜೆಯುಂ ಪ್ರೋತ್ಕಳಿತಹೃದಯೆಯುಂ ಸಾದ್ರ್ರ ತಕ್ಕೈಸಿ ಪುತ್ರೋ
ತ್ಸವವಾರ್ತಾಕರ್ತೃ ನಿಮ್ಮಗ್ರಜೆ ತಡೆದಪಳೇಂ ಬಂದಪಳ್ ತಂದಪಳ್ ನಿ ।
ಮ್ಮವರಂ ಕಂಡಪ್ಪಿನಂ ಸಂತಸದಿನಮರಿನಿಂ ಪೋಗುಬರ್ಪಂದಮೇಂ ಕೈ
ರವನೇತ್ರೇ ಬೀಡ್ಕೊಡಿನ್ನೆಂದುಸಿರ್ದ ನೆರೆಸಿದಂ ನಲ್ಲಳಂ ಸಿಂಹಸೇನಂ ॥ ೬೨

ಅವರತ್ತಲ್ ಪೋದರಿತ್ತಲ್ ನರಪತಿ ಮುದದಿಂದಿರ್ದನುತ್ತಲ್ ಬಟಿಕ್ಕಾ
ದಿವಿಜಂ ಷಣ್ಮಾಸಮಾಗಾಯುವಜಳಗಳಿದಿಪ್ಪತ್ತೆರಟ್ಟೇರಿವಂದ ।
ಪ್ಪವು ತಾವೇಂ ಬಂದು ಜೃಂಭಾವಳಿ ಮುಖರಸದೊಳ್ ನಿಂದುವಂಗಾಂಶುಗಳ್ಕುಂ
ದುವ ಭೂಷಾರಶ್ಮಿಗಳ್ಕುಂದುವ ಮುಡಿದಲರ್ಗಳ್ ಕಂದುವಂತಲ್ಲಿ ಕಂಡಂ ॥ ೬೩

ಖಳಕಾಳಾಂತಕವಜ್ರಪಾತಮನಮರ್ತ್ಯಾಗ್ರೇಸರಂ ಕಂಡು ಸಂ
ಚಳನಾದಂ ಗಡ ಕೊಂಕಿದಂ ಗಡೆಡೆಯೊಳ್ ತಳ್ಳಂಕಗೊಂಡಂ ಗಡಾ ।
ಕುಳನಾದಂ ಗಡದೊಂದುಮಿಲ್ಲ ಮನಮಂ ಮೋರ್ರೈಸಿ ಕಟ್ಟಾಯದಿಂ
ಕಲಿಯುಂ ಕಟ್ಟಿದರಲ್ಲಿ ಮೂದಲಿಸಿದಂತುತ್ಸಾಹಮಂ ತಾಳ್ದಿದಂ ॥ ೬೪

ವ॥ ಅಂತು ನಿಶ್ಚಲಚಿತ್ತನಾಗಿ

(ಮಾಲಿನಿ)

ಪರಮಜಿನಪದಾಂಭೋಜಾತದೊಳ್ ಭೃಂಗಮಾಲಾ
ಪರಿಕರಮೆನೆ ಕಣ್ಗಳ್ ಪೂಜೆಗಳ್ ಕಲ್ಪಭೂಜಾ ।
ಪರಿಲತೆಯೆನೆ ಕೈಗಳ್ ಶುದ್ಧಚೈತನ್ಯರೂಪಂ
ಗಿರಲೆಡೆಯೆನೆ ಚಿತ್ತಂ ದೇವತಾನಿಷ್ಠನಾದಂ ॥ ೬೫

ಇತ್ತಲ್ ಸಾಕೇತದೊಳಮ
ರೊತ್ತಮನವಧಿಯಿನನಂತನಾಥೋದಯಮಂ ।
ಚಿತ್ತದೊಳಱಿದಱಿದಿಂಗಳ
ನಿತ್ತುಂಟೆನೆ ಪುಣ್ಯಜನವರಂಗಱಿಪಲೊಡಂ ॥ ೬೬

ಅರಮನೆಗಿಂಬುವೆತ್ತ ರಣಮಂಡಲದೊಳ್ ರಸಚಿತ್ರಭಿತ್ತಿಯಂ
ವಿರಚಿಸೆ ನೂತ್ನರತ್ನಶಬಲಚ್ಛವಿ ಕೊಂಡುದು ತಂಡತಂಡದಿಂ ।
ಸರಸಿಜರಾಗರತ್ನದ ಬಿಸಿಲ್ಮಿಡೆ ಮೌಕ್ತಿಕರತ್ನದೊಂದು ಬೆ
ಳ್ಸರಿ ಹರಿನೀಲರತ್ನದ ಕಱಂಗಿದ ತಂದಲಗುಂದಲೆಂಬಿನಂ ॥ ೬೭

ಆರಾಜಗೃಹಾಂಗಣದೊಳ್
ಪೀರೆಯ ಹೂವಿಂದೆ ಸಮೆದ ಪೊಸಪೂವಲಿಯೊಳ್ ।

ಕಾರಿಲ್ಲದೆಯುಂ ಕಱೆದುವು
ನೇರಾಣಿಯ ಹೊನ್ನ ಮೞೆ ಕುಬೇರನ ಬೆಸದಿಂ ॥ ೧೮

ಆಲಿವರಲಿಂದ್ರಗೋಪಂ
ಸಾಲಿಟ್ಟುದಬಿಂದುವೆಂದು ಗೃಹಕೇಕಿಗಳುಂ ।
ಪೀಲಿಗಳನೆತ್ತಿ ಕುಣಿದುವು
ನೀಲದ ಮಾಣಿಕದ ಮುತ್ತಿನಚ್ಚರಿವೞೆಯೊಳ್ ॥ ೧೯

ವ॥ ಅಂತು ಸುರಿವ ಸಾರ್ಧತ್ರಿಕೋಟಿಪರಾರ್ಧ್ಯರತ್ನವರ್ಷಪ್ರಚಾರವಾರನಾರೀವಿಕಾರಪ್ರಪಂಚಮುಮಿತಸ್ತತಃಪ್ರಧಾವತ್ಕಂಜಕುಬ್ಜವಾಮನಸ್ತೋಮಮಣಿಧಾರಾಘಾತಭೀತನಟನಭಾವಮುಂ ಜಂಬೂಫಳದಾಡಿಮಬೀಜಸಂಶಯೋಪಧಾಶ್ರಿತನೀಳಮಾಣಿಕ್ಯಕಾರ್ಕಶ್ಯಭೃಶ್ಯವಂತರ್ವಣಕೀರಶಾರಿಕಾಮರ್ಕಟಸಂಕಟಮುಮಾನನಕುಶೇಶಯಕ್ಕೆ ದರಹಾಸಮಾಲೆಯನೋಲಗಿಸೆ ಪರಿಮಿತ ಪ್ರಸಾದಿತ ಪರಿಜನಪರೀತಂ ತಲ್ಪತಳಾಕಲ್ಪಿತಭೂತಜಯಶ್ಯಾಮಾದೇವೀಸಮೇತಂ ಸಿಂಹಸೇನನಾಸ್ಥಾನಮಂಡಪದೊಳಿರ್ದನಾಪ್ರಸ್ತಾವದೊಳ್

ಎಳಮಿಂಚಿಂ ಕಡೆದಂತೆ ಚಂದ್ರಕಳೆಯಿಂ ಕಣ್ಣಿಟ್ಟರೆಂಬಂತೆ ಕಂ
ಗೊಳಿಪಂಗಚ್ಛವಿ ಕಂಕಣಾಂಗದವತಂಸೋತ್ತಂಸರತ್ನಾಂಶುಮಂ ।
ಡಳಮಂ ಬಣ್ಣವಿಡುತ್ತುಮಿರ್ಪಿನೆಗವೊರ್ವಂ ಬಂದನಾಸ್ಥಾಯಿಕಾ
ವಳಯಂ ಸೂಡಿದ ಪಾರಿಜಾತದಲರ್ಗಂಪಿಂ ತೇಂಕೆ ವೈಮಾನಿಕಂ ॥ ೨೦

ವ॥ ಅಂತು ಬಂದು ಉಚಿತಪ್ರದೇಶದೊಳ್ ನಿಂದು ಕರಕಮಲಮುಕುಳಮಂ ನೊಸಲ್ವೆಱೆಗೆ ತಂದು ದೇವಾ ಬಿನ್ನಪಮೆಂದಿಂತೆಂದಂ

ಅವನೀಪಾಲಕಮೌಲಿಮಂಡನ ಭವತ್ಸರ್ವಾಂಗಮಾಂಗಲ್ಯ ಲ
ಕ್ಷ್ಮೀವಧೂವರ್ಗದೊಳಾಯುಧಂ ನೆಱೆಯೆ ಮುನ್ನಂ ನೋಂತಳಾಪಾಡುವಾ ।
ಡುವ ಕೊಂಕಾಡುವ ಮಾಡುವೊಂದು ದಿವಸಂಗಳ್ಗಟ್ಟಿದಂ ದೇವ ವಾ
ರವಧೂವರ್ಗಮನೀಮಹಾಸತಿಗೆ ಪೌಲೋಮೀಮನೋವಲ್ಲಭಂ ॥ ೨೧

ವ॥ ತದನಂತರಂ

ಭೂಮೀಶ ಸಭೆಯೊಳನಿಮಿಷ
ಕಾಮಿನಿಯರನಿತ್ತ ದೇವ ಚಿತ್ತೈಸೆನುತುಂ ।
ವ್ಯೋಮಾಂತರದೊಳ್ ತೋಱುವ
ವೈಮಾನಿಕನಿಂದ್ರಜಾಲಿಗಂಗೆಣೆಯಾದಂ ॥ ೭೨

ವ॥ ಆಗಳುದ್ಧರಿತಕಂಧರಮುಮುತ್ತಂಭಿತಹಸ್ತಪತಾಕಮುಂ ಪ್ರಾಚೀಮುಖೋನ್ಮುಖಪ್ರಕರಮಾದ ಪರಿಷಜ್ಜನವಿಲೋಚನಮರೀಚಿಪಟಲಮೆ ಸೋಪಾನಮಾರ್ಗಮಾಗೆ

ಸರಸಿಜಷಂಡಮಂ ಕಱೆಯೆ ಪಾದತಳಂಗಳ ಕೆಂಪು ಸೂಸೆ ನೇ
ವುರದುಡೆನೂಲ ರತ್ನರುಚಿ ಶಕ್ರಧನುಸ್ಸುಗಳಂ ಪ್ರಭಾಪಯೋ ।
ಧರಭರವೊಡ್ಡುಮಾಡೆ ಕಲಶಾವಳಿಯುಂ ಬಟಿಕಿಂದುಮಾಲೆಯುಂ
ಪರಪೆ ಮುಖಪ್ರತಾನಮಿಟಿದತ್ತೆಲರ್ವಟ್ಟೆಯಿನಪ್ಸರೋಗಣಂ ॥ ೭೩

ವ॥ ಆನಿತಂಬಿನೀಕದಂಬಮಂ ತೆಂಬೆಲರೆಂಬ [1] ಡವವಳನಂಗಜರಾಜಂಗಾಳ್ದೋಱುವಂತೆ ಬೇಱವೇಱೆ ನಿಲಿಪಂತೆ ರಾಜಾಙ್ಗಣದೊಳೆ ತಿರ್ದಿ ನಿಲಿಸಿ

ದೆಸೆದೆಸೆಯೆನಿತಕ್ಕಂ ದರ
ಹಸಿತಾನನವಳಯದಂತೆ ಸೊಗಯಿಪ ಪದ್ಮಾ ।
ದಿಸರೋವರಂಗಳೊಳ್ ಪಳ
ಯಿಸಿದರಿವರ್ ದೇವ ಪೆಸರೆ ದಿಗ್ದೇವತೆಯರ್ ॥ ೭೪

ವ॥ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಎಂಬಱುವರುಮಂ ಪೂರ್ವದಿಶಾನಾಥಂ ಸರ್ವದಿಶಾರಕ್ಷಣಾರ್ಥಂ ಕಳಿಪಿದನೆಂದು ತೋಱಿ ಪಿಂಗಿಸಿ ಮತ್ತಮಿಂತೆಂದಂ :—

ವಿಚಕಿಲಕುರುವಕವಕುಳ
ಪ್ರಚಯದೆ ಮಂಡವಿಗೆ ಚಂಪೆಯುಂ ನೆಲೆಮಾಡಂ ।

---

[1] ಗ. ಪಡೆವಳಂ.

ರಚಿಯಿಸೆ ನೆಲಸಿದರಿವರಾ
ರುಚಕಾದ್ರಿಯ ಮೂಡಣೆಂಟು ಶಿಖರದ ವನದೊಳ್ ॥ ೭೫

ವ॥ ಜಯೆ, ವಿಜಯೆ, ಜಯಂತಿ, ವೈಜಯಂತಿ, ಅಪರಾಜಿತೆ, ಆನಂದೆ, ನಂದೋತ್ತರೆ ನಂದಿವರ್ಧನೆಯರೆಣ್ಬರುಂ ಕನ್ನೆಯರಿವರಂ ನಿಜಾಂಗನೆಗೆ ಮಂಗಲೋತ್ಸವದೊಳ್ [1] ಶೃಂಗಾರಕಲಶಧಾರಿಣಿಯರಾಗಿ ಬೆಸಸಿದನೆಂದು ಪೆಸರ್ವೆಸರೊಳೆ ತೋಱಿ

ಮತ್ತಂ ರುಚಕದ ದಕ್ಷಿಣ
ಭಿತ್ತಿಯನಧಿಕರಿಸಿ ಮಾಣಿಕೂಟಪ್ರಾಸಾ ।
ದೋತ್ತುಂಗಸದನಮನೆಡ
ಮ್ಮುತ್ತೆಣ್ಬರುಮಿರ್ಪರೆಂಟು ಕೂಟಂಗಳೊಳಂ ॥ ೭೬

ವ॥ ಇವರ ಪೆಸರ್—ಸುಪ್ರಣೀತೆಯುಂ, ಯಶೋಧರೆಯುಂ, ಲಕ್ಷ್ಮೀಮತಿಯುಂ, ಕೀರ್ತಿಮತಿಯುಂ, ವಸುಂಧರೆಯುಂ, ಸುಸ್ಥಿತೆಯುಂ, ಸುಪ್ರಬುದ್ಧೆಯುಂ, ಚಿತ್ರೆಯುಮೆಂಬೀದೇವರ ನಂಬಿಕೆಯ ಸೀಗುರಿಯ, ಸಿರಿಮುಡಿಯ, ಕನ್ನಡಿಯ, ಪಡಿಯಱಿಕೆಯ, ಕೊಡೆಯ, ಡವಕೆಯಡಪದಡಿಯೂಟದ ಪಡಿವೆಸಕ್ಕೆ ಬೆಸಸಿದನದಲ್ಲದೆಯುಂ:—

ಆಗಿರಿವರದಪರದಿಶಾ
ಭಾಗದ ಕುಲಿಶಾತ್ಮಶಿಖರಮೆಂಟುಂ ನಿಜಸ ।
ಧಾಗಾರಮಾಗೆ ನೆಲಸಿದ
ರಾಗಿಣಿಯರನಾಡಿ ಪಾಡಿ ಸಲೆ ಬಗೆಗೊಳಿಸಲ್ ॥ ೭೭

ಮನದೊಲವಿಂ ಬೆಸಸಿದನೀ
ಜನವನಿಳಾದೇವಿ ಪೃಥ್ವಿ ಪದ್ಮಾವತಿ ಕಾಂ ।
ಚನೆ ನವಮಿಕೆ ಸೀತೆ ಸುರಾಂ
ಗನೆ ಚಂದ್ರಾದೇವಿಯೆಂಬರೆಣ್ಬರನಿಂದ್ರಂ ॥ ೭೮

ರಾರಾಜಿಪ ರುಚಕದುದೀ
ಚೀರುಚಿರತರಾಷ್ಟಶಿಖರದೊಳ್ ನೆಲಸಿದರೀ ।

---

1 ಕ. ಭೃಂಗಾರ.

ಸಾರಿಯರೆಣ್ಬರ್ ಶ್ರೀ ಹ್ರೀ
ವಾರುಣಿ ಧೃತಿ ಬುದ್ಧಿ ಪುಂಡರೀಕಿಣಿ ಮತ್ತಂ ॥ ೭೯

ವ॥ ಮಿತ್ರಕೇಶಿಯಲಂಬಾಸೆಯೆಂಬರೀ ನಿತಂಬಿನಿಯರನೀಬಿಂಬಾಧರೆಗೆ ಧವಳಚಮರೀಜಸಮಾಜವೀಜನಂಗಳ್ಗೆ ಯೋಜಿಸಿ ಮತ್ತಮಾಗಿರಿವರದಧಿತ್ಯಕಾಸ್ಥಳದ ನಾಲ್ಕುಂದೆಸೆಯ ನಾಲ್ಕುನಾಲ್ಕಾದ ಪದಿನಾಱುಂ ಕೂಟಂಗಳೊಳಿರ್ಪ ನಿತ್ಯಾವಳೋಕಾಪ್ರಮುಖವೈಜಯಂತೀಪರ್ಯಂತಮಪ್ಪ ಪದಿನಾಱುವರುಮಂ ಉಟಿದ ಕುಲಶಿಖರಶಿಖರಿಯರುಮಪ್ಪ ಲೇಖಾಂಗನೆಯರುಮಂ ಗಲೋದರಪರಿಶೋಧನಪ್ರಮುಖನಿಖಿಲನಿಯೋಗಭೋಗಕ್ಕೆ ಬೆಸಸಿದನೆಂದು ಬಿನ್ನವಿಸಿ ತೋಱಿ ತನ್ನೃಪಾಲಮಿಥುನಪ್ರದತ್ತಪಾರಿತೋಷಕಪರಿತುಷ್ಟಸ್ವಾಂತನಂ ತದ್ವಾಸಕ್ಕೆ ಸಂದನಿತ್ತಂ ವೃಂದಾರಕಸುಂದರೀಸಂದೋಹಕಮುಂದಂದಿನ ತಮ್ಮಸೂಟಱಿದು ಜಗಜ್ಜನನಿಗಿನಿಸುವೆಸಂಗೆಯ್ವ ಸಮಯಂಗಳೊಳಗೆ

ಎಳಲತೆ ಮಾಧವೀಲತೆಯ ಪೂಗುಡಿಯೊಳ್ ಪೆಣೆದಂತೆ ಬಾಳ ಬೆ
ಳ್ವೆಳಗು ಮಲಂಗಿದಂಗರುಚಿ ಕಣ್ಗೆದಱುತ್ತಿರೆ ಚಂದ್ರಮಂಡಲಂ ।
ಗಳನೆಳಮಿಂಚು ತಾಳ್ದಿದವೊಲಡ್ಡಣದೊಡ್ಡಣಮೆಡ್ಡಮಾಗೆ ಕಾ
ವಳವಿಗೆ ಖಡ್ಗಧಾರಿಣಿಯರಾದರನಿಂದೆಗೆ ದೇವಕಾಂತೆಯರ್ ॥ ೮೦

ಪಡಿಯಱವಕ್ಕಿಯ ದನಿಯೊಳ್
ಪಡಿಯಿಡುವರ್ಕವಿಗಳೀ ಜಯಶ್ಯಾಮೆಯ ನು ।
ಣ್ನುಡಿಯನವರ್ಗಿಡು [1] ವ ಸೆಳೆಯೆನೆ
ಪಡಿಯಱಕೆಗೆ ಸುರವಧೂಟಿ ಕಟ್ಟಿಗೆವಿಡಿದಳ್ ॥ ೮೧

ಅತ್ತಲಿರು ಚಂದ್ರರಾಜ ಕು
ಲೋತ್ತಮೆಯೋಲಗಕೆ ಸಮಯಮೆಂಬೆತ್ತಿದಳೊಂ ।
ದೆತ್ತಿದ ಕಟ್ಟಿಗೆಯೆಂದೆನೆ
ಮುತ್ತಿನ ಕೊಡೆವಿಡಿದಳರಸಿಗಮರಿಯದೊರ್ವಳ್ ॥ ೮೨

ತಿಂಗಳ ತಣ್ಗದಿರ್ವೊದಱಿನ
ಪಾಂಗಚ್ಛವಿ ಸೆಣಸೆ ತಂದು ತಲೆವಾಗಿಪವೊಲ್ ।

1 ಗ. ಯೆಂದೆನೆ.

ತುಂಗಘನನಿಬಿಡಕುಚೆಗಮ
ರಾಂಗನೆ ಚಾಮರಮನಿಕ್ಕಿದಳ್ ಪುತ್ತೊರ್ವಳ್ ‖ ೮೩

ದೇವಿ ನಿಜವದನವಿಧುಗೀ
ತಾವರೆ ಸೋಲ್ತತ್ತು ಬಾಯ ತಂಬುಲಮಂ ನೀ ।
ನೀವುದೆನಿಪಂತೆ ಪಚ್ಚೆಯ
ಕಾವಿನ ಮಾಣಿಕದ ಡವಕೆವಿಡಿದಳದೋರ್ವಳ್ ‖ ೮೪

ಕರಗಮನೆತ್ತು ಶೀತಳಿಕೆ ಕಾಲ್ದೊಳೆ ಮಾಲಿನಿ ತಿರ್ದು ಬೋನಮಂ
ತರಳಿಕೆ ಪಾಸು ಗದ್ದಿಗೆಯನುತ್ಪಳಿನೀ ಕೆಲಕೊತ್ತು ಚಿತ್ರಿಕೇ ।
ಪರಿಯಣಮಂ ನೃಪೇಶ್ವರಿಯನಾರೊಗಿಸಲ್ ಕರೆ ಮಂಜುಘೋಷೆಯೆಂ
ದರಸಿಗೆ ಬೋನಮೆತ್ತಲುಲಿದತ್ತಮರೇಂದ್ರಮಹತ್ತರೀಜನಂ ‖ ೮೫

ಕರಿರಿಪುಪೀಠಮಂ ತೊಡೆದು ಪಾಸುವ ಕತ್ತುರಿನೀರಧಾರೆಯಂ
ಪರಸುವ ಮುತ್ತಿನೆಕ್ಕಸರದಿಂ ಕಡೆಯಿಕ್ಕುವ ಪಾರಿಜಾತದೊ ।
ಳ್ಕರಲನುದಿರ್ಚುವಿರ್ತರದ ಗದ್ದಿಗೆಯಿಕ್ಕುವ ಸಂಭ್ರಮಂಗಳಿಂ
ಪರಿಮುಖಿಯಾಡಿದರ್ ಸುದತಿಯೋಲಗಸಾಲೆಯೊಳಿಂದ್ರಕಾಂತೆಯರ್ ‖ ೮೬

ಎಸಗಿದುದು ಸವಿಯ ಸೋನೆಯ
ನಸದಳವೆನಿಸಿದುದು ಮೆಚ್ಚಿನಚ್ಚರಿಯಂ ಬಾ ।
ಜಿಸುವಮರರಮಣಿಯರ್ಕಳ
ತಿಸರಿಯ ಕಿನ್ನರಿವೀಣೆಯ ನವವಿಧದ ರವಂ ‖ ೮೭

ವಳಿಯ ತೆರಳ್ಕೆಯಂ ವಹಣಿವಟ್ಟಿಜೆಯಂ ಪಸರಂಗಳಿಂಪನು
ಜ್ಜ್ವಳಿಸುವ ಡಾಳಮಂ ನಡೆವ ಠಾಯೆಯ ಜಾಯನುಜಾಯಿಯೋಜೆಯಂ ।
ಗಳನಱಿವನ್ನರಾರ್ ಸುಖಸುಧಾರಸದೊಳ್ ಪರಿಷಜ್ಜನಂಗಳಂ
ಮುಳುಗಿಸಿದತ್ತು ಚಾಳಿಸಿದ ರಾಗಮೆ ನಚ್ಚಿನ ಮಂಜುಘೋಷೆಯಾ ‖ ೮೮

ಸಮಶ್ರುತಿಯಾಗೆ ಝುಂಕೃತಿಗೆ ಕಂಕಣಝುಂಕೃತಿ ವಾಮಹಸ್ತ ವಿ
ಭ್ರಮದ ತೆರಳ್ಕೆಗಳ್ ಪೆಗಲ ಸಂಚದೊಳಂಚಿರವಾಗೆ ಕೊಳ್ಕುಬಿಂ ।

ಕಮನೊಳಕೊಂಡು ಮೆಚ್ಚದರ್ಪದರ್ಪಗಳಂತಿರೆ ಪೋಗಿ ಪೊಕ್ಕು ವಾ
ದ್ಯಮನೊಳಕೊಂಡು ಬಾಜಸಿದರಾವುಜಮಂ ದಿವಿಜೇಂದ್ರಕಾಂತೆಯರ್ ॥ ೮೯

ಡಾಳದ ಮೇಲೆ ತೂಕವಣಿ ರೇಖೆಯನಾಳ್ದಿರೆ ಪಾದದೊಳ್ಪಯಂ
ಮೆಳೀಸಿ ಝುಂಕೆ ಬಿಂಕದೊಳೊಡಂಬಡೆ ಮೋಹನಬಾಣಲೀಲೆಯಂ ।
ಬಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ ಸಿಂಹಸೇನಭೂ
ಪಾಳನ ಚಿತ್ತವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ ॥ ೯೦

ಥಿರು ಮಾಧವಿಯೂರ್ವಸಿ ಹೋ
ಯಿರೆ ನಚ್ಚಣಿ ರಂಭೆ ಭಲ ತಿಲೋತ್ತಮೆ ಕಹಳೋ ।
ದರಣಿ ಮಝುವಾಯೆ ಮೇನಕಿ
ಸುರಾಂಗಿಯೆನೆ ಪೊಗಟ್ದಿರಲ್ತೆ ಸುರಭಾರತಿಯರ್ ॥ ೯೧

ಅಮರಿಯರಿಂದ್ರಲೋಕದ ರಸಾಯನವರ್ಗದೆ ಗರ್ಭಶೋಧನ
ಕ್ರಮಮನೊಡರ್ಚೆ ಕಾಂತೆ ಕುಸುಮಾಸ್ತ್ರನ ಸಾಯಕಲಕ್ಷ್ಮಿಯಂತೆ ಲೋ ।
ಕಮನೆರ್ದೆಗೊಳ್ವ ಚಂದ್ರಿಕೆಗೆ ಸೋಮರ್ಮುಡಿ ತೋರ್ಮೊಲೆ ಮೂಡಿದಂತೆ ಮ
ತ್ತಮೃತಜಲಂಗಳಿಂ ತೊಳೆದ ಮುತ್ತಿನ ಪುತ್ತಳಿಯಂತೆ ತೋಱದಳ್ ॥ ೯೨

ವ॥ ಅಂತು ದಿವ್ಯಕಾಂತೆಯರೊಡರ್ಚಿದ ಪವಿತ್ರೀಕರಣಚೈತ್ರಾಗಮಂ ಜಗ
ತ್ತ್ರಿತಯಾಂಬಿಕೆಯ ತನುಲತೆಗೆ ಕುಸುಮೋದ್ಗಮನಸಮಯಮಂ ತರಲೊಡಂ

ಕರಟೋಗ್ರಗ್ರಂಥಿಯಂತೊಂದೆರಡು ಮೊಡವಿಗಳ್ ಮೂಡೆ ಕುಂಭಸ್ಥಳಂ ನಿ
ಬ್ಬರಿಪಂತುದ್ಯತ್ಕುಚಂ ಬಿಂಬಿಣಿಸೆ ಸೊವಡನಾರಯ್ದು ದೋರ್ಮೂಲದೊಳ್ ಕೈ ।
ಕರಣಂ ಕೈಗಣ್ಮೆ [1] ಕಣ್ಣ್ಮಾಣಿಸಿ ಪಿಡೆ ಮಣಿಭೂಷಾಳಿ ವ್ಯೆ ಸೋಂಬೆ ಬಿಂಬಾ
ಧರೆ ಪಿಂಗಲ್ ನಿಂದು ಕಂದರ್ಪನ ಕರು [2] ವಿಡುತರ್ಪಂತೆ ಕಣ್ಗೆಡ್ಡಮಾದಳ್ ॥೯೩

ವ॥ ಆ ಚತುರ್ಥದಿವಸದೊಳ್

ಮೃಗಮದದಣ್ಪು ಪುಷ್ಪಕಮದಾವಳಿ ನೂಪುರಮಾಲೆ ತೀರದಂ
ದುಗೆ ತೆಗೆದಿಟ್ಟ ಕೇಸರಮ ತೂಸಿದ ಸಿಂಧುರವಟ್ಟೆ ಮಸ್ತಕಂ ।

1 ಗ. ಕಣ್ಮಾಣಿಸಿ. 2 ಕ. ವಿಡ.

ನೆಗೆದ ಕುಚಂಗಳಾಗೆ ಕರಿಗಳ್ ಸಿರಿಯುಂ ಮಿಸಿಪಂತೆ ಮಜ್ಜನಂ
ಬುಗಿಸಿದರಾನರೇಂದ್ರನ ಪುನಃಪ್ರಿಯೆಗಿಂದ್ರನ ವಾರನಾರಿಯರ್ ॥ ೯೪

ವ॥ ಅನಂತರಂ ಪರಿಪೂರಿತಮಂಗಲಮಜ್ಜನವಿಧಾನೆಯುಂ । ನೀರಾಜನರಾಜಿತರಾಜೀವರಾಗದೀಪಕಲಾಪಪ್ರತಿಫಳಿತಕೇಸರಕಪೋಳಮುಕುರೆಯುಂ । ಪ್ರತಿಪದಕ್ವಣಿತಮಣಿಮಯಾನುನೂಪುರಪ್ರತಿಧ್ವಾನಾನುಯಾತವಯದಾವಿರಲಮಣಿಕುಟ್ಟಿಮಾಂತರಮಾರ್ಗಭೋಗೆಯುಂ । ತನುಲತಾಪರಿಮಳನಪರಿವಳಿತಮಧುಕರೀಝುಂಕಾರಭಂಗುರಮಂಗಳಗಾಯಿಕಾಕಲಮಧುರನಿನಾದೆಯುಂ । ದೇವದೌವಾರಿಕ ಕಳಕಳಕ್ವಣಿತ ಪ್ರತ್ಯುತ್ತರೋಚ್ಚಳಿತ ಕೇಳೀವನಮಾಲಾಕಲಕಂಠವಿಲಾಪೆಯುಂ । ದಿವಿಜನಿತಂಬಿನೀಭುಜಲತಾಸ್ತಬಕಿತಚಂದ್ರಕಚ್ಛತ್ರವಿಚಿತ್ರಪ್ರತಾಪಕುಂಠಾ [1] ಮಂಡನವಿಚಿತ್ರಮಾಲೆಯುಮಾಗಿ

ಕೊನರುತ್ತಿರ್ಪ ಲಲಾಟಘರ್ಮಜಲಮಂ ತಿರ್ದುತ್ತುಮುದ್ಯತ್ಕುಚಾ
ನನದಿಂ ಜಾಱುವ ಮೇಲುದಂ ನಿಲಿಸುತುಂ ಸಯ್ತೊತ್ತುತುಂ ನುಣ್ಗುರು ।
ಳ್ಮೊನೆಯಂ ವಾಮಕರಾಗ್ರದಿಂ ಸಚಲವೇಣೀಭಾರಮಂ ತಾಳ್ದಿ ಕ
ರ್ಬಿನಬಿಲ್ಲಂ ರತಿ ತಾಳ್ದಿ ಬರ್ಪ ತೆಱದಿಂ ತನ್ವಂಗಿ ಕಣ್ಗೊಪ್ಪಿದಳ್ ॥ ೯೫

ವ॥ ಅಂತು ಮಂಗಲಾಭರಣಮಣಿಮಂಡಪಕ್ಕೆ ಬಂದು

ಅಮೃತಾಬ್ಧಿತರಂಗದ ಮೇ
ಲೆ ಮಲಂಗಿದ ಚಂದ್ರಕಲೆಯ ಕಳಿಕೆಯೊಲಂತಾ ।
ರಮಣಿ ನವಕ್ಷೋಭಚ್ಛ
ನ್ನಮರಾಳಿಕತೂಲತಲ್ಪದೊಳ್ ಕುಳ್ಳಿರ್ದಳ್ ॥ ೯೬

ವ॥ ಆಗಳ್

ಉದಬಿಂದುವ್ರಜಮಂ ತಮಂ ತರಲತಾರಾನೀಕಮಂ ಕಾಱುವಂ
ದದೆ ಸಾಲಿಕ್ಕುವಳಿಂದ್ರವಲ್ಲಭೆಯ ವೇಣೀಭಾರಮಂ ಸಾರ್ಚಿ ಬ ।
ರ್ಚಿದಳಗ್ರಾಂಗುಲಿಮಾಲೆ ಕೂಂದಲನೆ ಬಂದೊರ್ವಳ್ ವಿಲೋಲತ್ತಮಾ
ಲದ ಬಾಳ್ಗೊಂಪನಾಡೆ ಸೋಂಕುವ ಚಳನ್ಮಂದಾನಿಲಶ್ರೀಯವೊಲ್ ॥ ೯೭

1 ಕ. ಮಂಡಪವಿತಾನ.

ಇರದರುಣಾಂಬುಜಂ ಜಗುನೆಯೊಳ್ಪೊನಲೊಳ್ ಕುಣಿವಂತೆ ಕೆಂದಳಂ
ದೊರೆವಡೆದೊಪ್ಪೆ ಪಿಕ್ಕಿ ನಖರಪ್ರಕರಂಗಳ ಕಾಂತಿ ನೀಲನೀ ।
ರರುಹದ ಜೊಂಪದೊಳ್ ಜಗುಳ್ವ ಚಂದ್ರಿಕೆಯಂತಿರೆ ಸಾರ್ಚಿ ಕೇಶಮಂ
ಮುರಿದು ಮುಖೇಂದುವಿಂಗೆ ತಮಮಂ ತಲೆವಾರಿಸುವಂತೆ ತಿರ್ದಿದಳ್ ॥ ೯೮

ಅಲರ್ಗಣೆಯಿಲ್ಲದೆ ಲೋಕಮ
ನೊಲಿಸಿಡಪಂ ನಿನ್ನ ಬಸಿಱೊಳುದಯಿಪ ಮದನಂ ।
ಲಲನೆ ಮುಡಿ ಮಡಗದೆಂಬವೊ
ಲಲರ್ವಾಸಿಗಮಿತ್ತಳಮರಿ ಸಿರಿಮುಡಿಗೊರ್ವಳ್ ॥ ೯೯

ಲಲನೆಯ ಸೋರ್ಮುಡಿಯೊಳ್ ಸುರ
ಲಲನೆ ಕನತ್ಕನಕಕೇತಕೀನವದಳಮಂ ।
ಸಲಿಸುವ ನೆವದಿಂದಂ ಕ
ತ್ತಲೆಗಿತ್ತಳ್ ಚಂದ್ರಕಲೆಯ ಕವಳಮನೊರ್ವಳ್ ॥ ೧೦೦

ಬಂಬಲ್ಗುರುಳಿಂ ತುಂಬಿಯ
ಬಂಬಲಿವೆಂದಱಿಪಲಿದುವೆ ಕುಱುಪೆಂಬವೊಲೇ ।
ನಂಬಿಕೆಯ ಕುರುಳೊಳಮರನಿ
ತಂಬಿನಿ ನಿಱಿಸಿದಳ್ ಚಿನ್ನಪೂಗಳನೊರ್ವಳ್ ॥ ೧೦೧

ತಳತಳಿಪ ಕರ್ಣಪತ್ರಮ
ನಳವಡಿಸಿದಳೊರ್ವಳಮರಿ ಕಾಂತೆಯ ಕಡೆಗಂ ।
ಣ್ಗಳ ಕಾಂತಿಲತೆಗೆ ಸಂದಿಸಿ
ದೆಳವೆಱೆಗಳಿನಾಳವಾಳಮಂ ತಿರ್ದುವವೊಲ್ ॥ ೧೦೨

ಪಳುಕಿನ ಕನ್ನಡಿಯಂ ಪಿಡಿ
ದಳದೊರ್ವಳ್ ದೇವಗಣಿಕೆ ದಯೆಗೆಯ್ವುದು ಕೋ ।
ಮಳೆ ನಿನ್ನ ತೆಳ್ಗದಂಪಿನ
ಪೊಳೆಪನಿದಕ್ಕೆಂದು ತಂದುಕಾಣಿಪ ತೆಱದಿಂ ॥ ೧೦೩

ಕೆಂದಳದ ಕೆಂಪು ಪಳುಕಿನ
ಚಂದನದೊಳ್ ಪೊರೆಯೆ ಘುಸೃಣರಸಮೆಂದೊರ್ವಳ್ ।
ವೃಂದಾರಕಿ ದೇಪಿಗೆ ಹರಿ
ಚಂದನಮಂ ತಂದು ನೀಡಲಣ್ಮದೆ ನಿಂದಳ್ ॥ ೧೦೪

ಪೊಡವಿಯನುರಾಗಮಿದೆ ಕಾ
ಲ್ವಿಡಿದಪ್ಪುದು ವೀತರಾಗನಂ ಪಡೆದೊಡಲಿಂ ।
ಬಿಡದಿರೆಲೆ ದೇವಿಯೆಂಬವೊ
ಲಡಿಯೂಡಿದಳೊರ್ವಳಪುರಿ ಲಾಕ್ಷಾರಸದಿಂ ॥ ೧೦೫

ವ॥ ಅಂತು ಮಂಗಳಮಂಡನವಿಧಾನಮಳಂಕೆವಡೆಯೆ,

ಅರಲ ಸರಲ್ಗಳಂ ತೊಳಪ ಚಂದನದಿಂ ಪೊರೆದಂತೆ ಮೌಕ್ತಿಕಾ
ಭರಣದ ಡಾಳದಿಂ ಪೊಳೆವ [1] ಚಂದ್ರಿಕೆಯಂ ದಳವೇಱಪಂತೆ ಶೇ ।
ಖರನವಮಾಲಿಕಾವಿಸರದಿಂ ಶಶಿಬಿಂಬಕಳಂಕಲೇಖೆಯಂ
ಪರಿಹರಿಪಂತೆ ಬೆಳ್ಪಸದನಂ ಮೆಱೆದತ್ತಮೃತಾಂಶುವಕ್ತ್ರೆಯಾ ॥ ೧೦೬

ಅಲಸಮೃದುಗಮನೆ ಭೂಷಣ
ವಿಲಾಸಮಂಡಪದಿನೆಟ್ಟು ಸಜ್ಜೆಗೆವಂದಳ್ ।
ಪುಲಿನತಳದಿಂದೆ ಮೆಲ್ಲನೆ
ನಲಿನಾವಾಸಕ್ಕೆ ಬರ್ಪ ಕಲಹಂಸಿಯವೊಲ್ ॥ ೧೦೭

ಸುಲಿಪಲ್ಲ ಮಿಂಚು ಕಡೆಗ
ಣ್ಮಲರ ಕಡಲ್ವರಿಪ ಕಾಂತಿ ದುಗುಲದ ಮುಕ್ತಾ ।
ಫಲದ ಮಲಯರುಹದೊಪ್ಪಮ
ನಲರ್ಗಣೆಗಳಿನೊಪ್ಪಸಲಗೆಯಿಡೆ ನಡೆತಂದಳ್ ॥ ೧೦೮

ವ॥ ಅಂತು ಬಂದು

ಮದನನ ಜೈತ್ರಶಾಲೆಯೆನೆ ಶಾಲೆ ಬೆಡಂಗಪಡರ್ದಿಂದುಕಾಂತಸ
ದ್ಮದೊಳತಿಸಾಂದ್ರಚಂದ್ರಿಕೆಯ ಸೋದರಮಾದ ಮರಾಳತೂಲತ ।

---

1 ಕ. ಯಿಂದವಳೇ.

ಳ್ಪದೊಳನುರಾಗದಿಂ ತಳೆದರುಜ್ಜ್ವಳಶಾರದನೀರದಾವಳೀ
ಸದನದೊಳಿರ್ದ ರೋಹಿಣಿಯ ಚಂದ್ರಮನೊಪ್ಪಮನಾಪುನಃಪ್ರಿಯರ್ ॥ ೧೦೯

ವ॥ ಅಂತು ಸೂಳ್ಗೆವಂದು ಮನೋನಯನವಲ್ಲಭನ ತೋಳ್ಗೆವಂದು ಸಮಸುಪ್ತಿಸುಖದಿನಪಗಾಢತ್ರಿಯಾಮಾಯಾಮತ್ರಯತ್ರಿಪಥಗೆಯಾಗಿ ವಿರಾಮಾರಾಮದೊಳ್

ಉತ್ತಮದೇವಿ ನೀನೆ ಮೊಲೆವೊತ್ತರೊಳೆಂದು ಜಗತ್ರಯಕ್ಕೆ ಬೊ
ಟ್ಟೆತ್ತಿದ ಮಾಳ್ಕೆಯಿಂದೆ ಗುಡಿಗಟ್ಟಿ ವಿನೇಯಕರಾವಲಂಬನಂ ।
ಪೆತ್ತಪೆಯೆಂಬವೊಲ್ ಬಲದ ಕೊಂಬಿನೊಳೊಯ್ಯನೆ ಪೇಱ ಕೈಯನು
ನ್ಮತ್ತಗಜೇಂದ್ರಮಿರ್ದೊಡೆ ಗಜೇಂದ್ರಮದಾಲಸಯಾನೆ ನೋಡಿದಳ್ ॥ ೧೧೦

[1] ಇಣಿಗಿಡಿದಿಣಿಯಂ ಕೊಳ್ಕಣಿ
ನಣಿದು ನೆಲಂ ಬಿರಿಯೆ ಕೆಲೆದು ಮಲೆದೊಲೆದಿದಿರೊಳ್ ।
ಮಣಿಕದ ನಸೆಗಸವಸದಿಂ
ದಣಿಯುರಮಾಡುವ ಗವೇಂದ್ರನಂ ಸತಿ ಕಂಡಳ್ ॥ ೧೧೧

ಸಮಬುಜುವಾಗಿ ಕುಕ್ಕುರಿಸಿ ವಾಲದೆ ಬೆಂಬಿಡಿದಡ್ಡವಿಟ್ಟು ಮುಂ
ದಮರ್ದಿರೆ ಗಂಧಸಿಂಧುರಭಿದುಗ್ರಸನೋತ್ಕಟಸೃಕ್ವಸಿಕ್ತಕ ।
ರ್ದಮಿತಮದಭ್ರಮದ್ಭ್ರಮರಮಾಳಿಗೆ ವಕ್ತ್ರ [ಮನ] ಗ್ರಪಾದದಿಂ
ಸಮಱಿಕೊಳುತ್ತುಮಿರ್ದ ಮೃಗವಲ್ಲಭನಂ ಮೃಗನೇತ್ರೆ ನೋಡಿದಳ್ ॥ ೧೧೨

ಪೊಳೆವಮರ್ದಂ ಕಾಂಚನಯುಗ
ಕಳಶಕ್ಕಂ ಜವಳಿವೆಱೆಯೆ ಕಱೆವಂತೆರಡುಂ ।
ಬಿಳಿಯಾನೆ ಮಿಸಿಸೆ ಮೊಗಮು
ಜ್ಜಳಿಸುವ ಮೊಲೆ ಮಲೆವ ಲಕ್ಷ್ಮಿಯಂ ಸತಿ ಕಂಡಳ್ ॥ ೧೧೩

ಸೌರಭಮಂ ದಳಂಗೊಳಿಸೆ ಬಣ್ಣದೆ ನುಣ್ಣಿಸೆ ರಾತ್ರಿಮಾಳಿಕಾ
ಕಾರೆ ತೊಡರ್ಚೆ ನಾರುಗಿದ ತಿಂಗಳ ತಣ್ಗದಿರಂ ನಮೇರುಮಂ ।
ದಾರದರಲ್ಗಳಂ ತನಗೆ [2] ನೀಡಿದರೆಂದೊಲವಿಂದೆ ನೋಡಿದಳ್
ವಾರಿಜವಕ್ತ್ರೆ ಕೈರವವಿಲೋಚನೆ ಮಾಲೆಯುನಂದು ಲೀಲೆಯಿಂ ॥ ೧೧೪

---

1 ಕ. ಇಣಿನಿಡಿ. 2 ಕ. ನೀಡಿದಳೆಂ.

ಗಗನಮಣಿಮುಕುರದೊಳ್ ನಿಜ
ಮೃಗಲೋಚನದುರುಳಿಗುರುಳ ಕುಡುವುರ್ವಿನ ಕ ।
ರ್ಪುಗಳ ಕಱೆಯೆಂಬಿನಂ ನಗೆ
ಮೊಗದ ನೆಟಿಲ್ಗೆತ್ತು ನೋಡಿದಳ್ ಚಂದ್ರಮನಂ ॥ ೧೧೫

ಕುವಲಯ ವೈರಿ ಪಂಕರುಹಮಿತ್ರನ ಶೇಷರಸಾಪಹರ್ತೃವೆಂ
ದವನಿಜನಂ ಪಿಸುಣ್ಗಿಡೆದೆಲೇ ಜಗದಂಬಿಕೆ ಬೇಱುಮಾಡಿದರ್ ।
ಭವದಧಿನಾಥತೇಜಮುಮನೆನ್ನುಮನಿಂ ಕೆಳೆಮಾಡ್ಪುದೆಂದು ಪೊ
ರ್ದುವ ತೆಱದಿಂದೆ ಮೂಡುವೆಳನೇಸಱನಂಬುಜನೇತ್ರೆ ನೋಡಿದಳ್ ॥ ೧೧೬

ಇನಿಯನ ಕಡುಗಾಡಿ ಮನೋ
ಜನ ಬೆನ್ನಟ್ಟಿದೊಡೆ ಬಿಸುಟ ಪಱಿಯಿಗೆಯೆನೆ ತೋ ।
ಳ್ಪೊನಲೊಳಗೆ ಪೊಳೆವ ಮಿಾಂಬೊಣ
ರನಲಂಪಿಂ ಮಿಾನಲೋಲಲೋಚನೆ ಕಂಡಳ್ ॥ ೧೧೭

ಗಳದ ಸಿತಾಕ್ಷತಾವಲಿಯೊ ಮೌಕ್ತಿಕಹಾರಮೊ ಸಂದಿಸಿಟ್ಟ ಕೆಂ
ದಳಿರ್ಗಳೊ ಚೂಚುಕಚ್ಛವಿಯೊ ಪೊಂಗಳಶಂಗಳೊ ತನ್ನುರೋರುಹಂ ।
ಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳು
ಜ್ಜ್ವಳಕಳಶಂಗಳಂ ಘನರಸಾಕಳಿತಂಗಳನುನ್ನತಂಗಳಂ ॥ ೧೧೮

ಪರಿಮಳಮಿಳದಧಿಮಾಲಾ
ಚರಣಾಹತಶಿಥಿಲಶಿಥಿಲದರದಳಸಂಧಿ ।
ಸ್ಫುರಿತಮಕರಂದಸುಂದರ
ದರಿತಸರೋವರಜವನಮನಂಗನೆ ಕಂಡಳ್ ॥ ೧೧೯

ಮೊರೆವ ರವಂಗಳಿಂ ಪರಸುವಂತೆ ಪಯಃಕಣಕಾಂತಿಯಿಂ ನಿರಂ
ತರಮೆಳಮುತ್ತಿನಕ್ಷತೆಗಳಿಂ ತಳಿವಂತೆ ತರಂಗಬಾಹುವ ।
ಲ್ಲರಿಗಳನಪ್ಪುವಂತೆಸೆವ ಪಾಲ್ಗಡಲಂ ನಡೆನೋಡಿದಳ್ ತಳೋ
ದರಿ ವದನೇಂದುಮಂಡಲದ ಕೌಮುದಿಯಂ ಕರೆಗಣ್ಮಿದಂತುಟಂ ॥ ೧೨೦

ತನುಮಧ್ಯೆ ಕೇಸರಚ್ಛವಿ
ವನಜಾನನೆ ಪೃಥುನಿತಂಬೆ ಕಂಡಳ್ ನೃಪನಿಂ ।
ಹನ ಸಿಂಹಸಿಂಹಸೇನಾ
ವನಿಪನ ಸರ್ವಾಂಗಲಕ್ಷ್ಮಿ ಸಿಂಹಾಸನಮಂ ॥ ೧೨೧

ಮಾನಿನಿ ನೋಡಿದಳ್ ಸುರವಿಮಾನಮನುದ್ಧತಕೇತುಮಂಜರೀ
ಚೀನಮನಬ್ಜರಾಗಮಣಿಪುಂಜವಿತಾನಮನಿಂದ್ರನೀಲಸೋ ।
ಪಾನಮನಾತ್ತಚಿತ್ರರಸಲಾಸ್ಯವಿತಾನಮನಾಪ್ತತಾಟಲೋ
ದ್ಯಾನಮನಾಸಿತತ್ರಿದಶದಂಪತಿಭೂಷಣಭಾಸಮಾನಸಂ ॥ ೧೨೨

ಭವನಾಮರದಂಪತಿಗಳ
ನವರತ್ನಾಭರಣಕಿರಣದಿಂ ಸುರಚಾಪ ।
ಚ್ಛವಿಯನಗೆವೊಯ್ದು ಪಡಲಿಗೆ
ಯವೋಲೊಪ್ಪುವ ಭೋಗಿಭವನಮಂ ವಧು ಕಂಡಳ್ ॥ ೧೨೩

ಕಂಜದಳಾಕ್ಷಿ ಕಾರಿರುಳನಾರವೊಯಂ ಬಿಸಿಲಂ ಸುಧಾಂಶುವಂ
ಸಂಜೆಯುನಾಯ್ದು ಕೊಯ್ದುರುಳಿಮಾಡಿ ರಸಂಬಿಡೆ ರಂಗರಕ್ತಿಯಿಂ ।
ರಂಜಿಸಿದಂತೆ ತೋಱೆ ಶಬಲಚ್ಛವಿ ಕಾಮನ ಬಿಲ್ಲ ಬೀಜಮಂ
ಪುಂಜಿಸಿದಂತಿರಿರ್ದ ನವರತ್ನದ ರಾಶಿಯನೊಲ್ದು ನೋಡಿದಳ್ ॥ ೧೨೪

ಒಗೆದಳುರ್ದು ಮಿಳಿರ್ದ ಬಲದೊಳ್
ಪೊಗೆಯದೆ ಕಿಡಿಸೂಸದಸುಗೆಯೊಳದಳಿರ್ಗಳನಾ ।
ಯ್ದುಗೆವೊಯ್ದಂತಿರೆ ನಾಲಗೆ
ಸೊಗಯಿಸುವುರಿಮಾಲೆಯುಂ ತಲೋದರಿ ಕಂಡಳ್ ॥ ೧೨೫

ವ॥ ಅಂತುಮಲ್ಲದೆಯುಂ

ದರದಳಿತಕೇತಕೀಕುಸು
ಮರಜಂಗಳೊಳಾಱೆ ಕೂಡಿ ಪೊರೆದಸಿತೇಂದಿ ।
ವರಮಂಬುಜದೊಳ್ ಪುಗುವಂ
ತಿರೆ ಮೊಗದೊಳ್ ಪುಗುವ ಬಿಳಿಯ ಕರಿಯಂ ಕಂಡಳ್ ॥ ೧೨೬

ವ॥ ಅಂತು ತನ್ನ ಕಂಡ ಕನಸುಗಳಂ ಮನಸಂದು ಮಿಸುಕುವ ಮನಮು ನನುಭವಿಸಿ

ಸುರಸುದತೀಕದಂಬಕದ ಗಾಂದರದಿಂ ದನಿಯೊಳ್ ದರಸ್ಮಿತಾಂ
ಬುರುಹಮನೊತ್ತಿ ಚುಂಬಿಸುವ ತುಂಬಿಯ ಗಾವರಮಂ ಪೊಣರ್ಚಿ ನ ।
ಲ್ಲರ ಬಿಗಿದಿರ್ದ ಪಕ್ಷ್ಮಪರಿರಂಭಮನೊಯ್ಯನೆ ಬಿರ್ಚಿ ಕಣ್ಗೆ ಕ
ಪ್ಪುರದ ಶಲಾಕೆಯಂ ಸಲಿಸುತೆಚ್ಚರಿಸಲ್ ಮೃಗಶೀತಮಾರುತಂ ॥ ೧೨೭

ವ॥ ಆಪ್ರಭಾತೋದ್ಯೋತನದೊಳ್ ನಲ್ಲನ ತೋಳ ತಲ್ಪದಿಂ ಮೆಲ್ಲನುಪ್ಪವಡಿಸಿ ನಿತ್ಯನಿಯಮಮಂಗಳಾಭರಣಪರಿಪೂರಿತಾಂತರಂಗೆಯಾಗಿ ನಿಂದು ಚಿತ್ತವಲ್ಲಭಂಗೆ ತನ್ನ ಕಂಡ ಕನಸುಗಳಂ ಪೇೞೆ ಕೇಳ್ದು ಬೋಧತ್ರಯಾಧಾರನಾಸ್ವಪ್ನಮೆಂಬ ಸ್ವಪ್ನಮಹೀರುಹಫಲಂಗಳನನುಕ್ರಮದಿನಾಕೆಗಿಂತೆಂದು ವಿರಚಿಸಿದಂ :—

ಪರಿಭೃತವಂಶನೂರ್ಜಿತನುದಾತ್ತಮನಂ ಕಮಲಾಪ್ರಿಯಂ ನೃಶೇ
ಖರನತಿಶಾಂತನಭ್ಯುದಯಮೂರ್ತಿ ಸುನೇತ್ರನುಪೇತಮಂಗಲಂ ।
ಸರಸಗುಣಂ ಗಭೀರನವನೀಶ್ವರನಾನತವಜ್ರಿ ಭೋಗಿ ಭಾ
ಸ್ಕರನಘದಾಹಕಂ ನಮಗೆ ನಂದನನಾದಪನಂಬುಜಾನನೇ ॥ ೧೨೮

ವ॥ ನಿನ್ನ ನಗೆಮೊಗಮೆಂಬ ಸೆಜ್ಜರಮನರ್ಜುನಗಜಂ ಪೊಕ್ಕುದೆ ಪರಮಪುರುಷನವತಾರಮೆಂದ ನಿಜವಲ್ಲಭನ ವಚನಾಮೃತವರ್ಷರಸಪ್ರವಾಹಮಂ ನೆಲೆವೆರ್ಚಿಸುವಿನಂ ಉತ್ತರೋತ್ತರಮಾದ ಶುಭಮುಹೂರ್ತದೊಳ್

ದಿವದಿಂ ಕಾರ್ಮಣತ್ರೈಜಸಾವಯವನಾಕಲ್ಪಾಮರಂ ಪೂಜನೋ
ತ್ಸವಸೌಧರ್ಮಕೃತೋಪಹಾರಸುಮನಸ್ಸಾರಭ್ಯದೇಶೀಯನಾ ।
ಯುವತೀಪ್ರೋಜ್ಜ್ವಲಗರ್ಭದೊಳ್ ನೆಲಸಿದಂ ಬಂದಚ್ಯುಱಿಂದೇೞ್ಗೆವಾ
ಡವದೊಳ್ ಕಾರ್ತಿಕದೊಳ್ ಪ್ರಶಾಂತಿಮದೊಳಂತಾರೇವತೀತಾರೆಯೊಳ್ ॥ ೧೨೯

ಪಳುಕಿನ ಸಾಲಭಂಜಿಕೆಯ ಮಧ್ಯದೊಳಿಂದುಕಲಾಂಕುರಂ ತೆಱಂ
ಬೊಳೆದವೊಲಾವ ಬೇವಸಮುಮಾವ ವಿಕಾರಮುಮಾವ ಚಿಹ್ನಮುಂ ।

ಬಳೆಯದೆ ತಾನೆ ಒಂದು ಬೆಳೆದತ್ತಮೃತಾಬ್ಧಿತರಂಗಲಕ್ಷ್ಮಿಯೊಳ್
ಬಳೆವ ಮಣಿಪ್ರಭಾಪಟಲದಂತೆ ಲತಾಂಗಿಯ ಗರ್ಭವಿಭ್ರಮಂ ॥ ೧೩೦

ಪಿಂಗದು ವಳಿಗಳ ದೇಸಿ ಕ
ಱಂಗದು ಮೆಣ್ಬಾಸೆ ಮೊಲೆಯ ಮೊಗಮೆಳಗರ್ಪಂ ।
ತಾಂಗದು ತೆಳ್ವಸಿಱನಿಸಂ
ಪೊಂಗದು ನಿಪ್ಪೊಸತು ಸತಿಯ ಗರ್ಭವಿಲಾಸಂ ॥ ೧೩೧

ಸುದತಿಯ ಗರ್ಭಗೌರವಮನೇವೆಸಗೊರ್ಂಡಪೆ ಚಾರಣರ್ ವಿದೇ
ಹದ ಮುನಿಪುಂಗವರ್ ತಮಗೆ ತತ್ವಪದಾರ್ಥದೊಳೊಂದು ಸಂದಯಂ ।
ಪುದಿದಿರೆ ಬಂದು ತಾಯನೊಲವಿಂ ಬಲವಂದೊಡೆ ಸುಪ್ರತೀತಮ
ಪ್ಪುದು ಗಡ ಗರ್ಭದರ್ಭಕನ ನಿರ್ಭರಬೋಧಮಹಾಪ್ರಭಾವದಿಂ ॥ ೧೩೨

ವ॥ ಅಂತುಮಲ್ಲದೆಯುಂ

ಅಮರೇಂದ್ರತ್ವಮನಂದೆ ಪೆತ್ತ ತೆಱದಿಂ ಕಾಯಪ್ರವೀಚಾರಮಾ
ರ್ಗಮನಿಚ್ಛೈಸದೆ ಸಿಂಹಸೇನರಮಣಂ ನೇತ್ರಪ್ರವೀಚಾರಭಾ ।
ವಮನಸ್ಪರ್ಶಸುಖಪ್ರವೀಚರಣಮುಂ ಚಿತ್ತಪ್ರವೀಚಾರಭೋ
ಗಮುಮಂ ಮಾಳ್ಪನುಪಾವಲಂಬಿತಜಯಶ್ಯಾಮಾಸ್ಮಿತಾಸ್ಯಾಂಬುಜಂ ॥ ೧೩೩

ದಿವದಿಂ ಸಲ್ವಮೃತಾನ್ನಪಾನವಸನಾಲೇಪಸ್ರಜಂ ದೇವವಾ
ರವಧೂವರ್ಗದ ಮೆಚ್ಚಿ ಮೆಚ್ಚಿ ಬೆಸಕೆಯ್ವುಟ್ಟುಂಬೆಸಂ ನೆಟ್ಟನಾ ।
ತ್ಮವರಂ ಮನ್ನಿಸಿ ಮಾಳ್ಪಲಂಪು ಮುದಮುಂ ತಂದೀಯೆ ತನ್ವಂಗಿಯೊಳ್
ನವಮಾಸಂ ನವಮಾಸರಕ್ಕೆ ದೊರೆಯಾಯ್ತುತ್ಸವೋತ್ಸಾಹದಿಂ ॥ ೧೩೪

ವ॥ ಅಂತು ಪರಿಪೂರ್ಣಮಾಸರವಸಂತೋತ್ಸವಪ್ರಸವಾನುರಾಗಮಾಗ
ಲೊಡಂ

ಒಂಭತ್ತು ಸಾಗರೋಪಮ
ದಿಂ ಬಟಿಕೆ ತೃತೀಯಪಾದಪಲ್ಯೋಪಮುಮಾ ।

ಯೆನ್ತುಂಭತ್ತು ಧರ್ಮಸಂತತಿ
ಬೆಂಬಟಿದಪ್ಪಿದುದು ವಿಮಲತೀರ್ಥಾಧಿಪನಾ ॥ ೧೩೫

ವ॥ ಅಂತು ಧರ್ಮವ್ಯುತ್ಸೇಧವಾದ ಕಾಲದೊಳ್

ಶಶಿಸೂರ್ಯಾದಿನವಗ್ರಹಂಗಳಿರೆ ತಂತಮ್ಮುಚ್ಚದೊಳ್ ಶುದ್ಧಲ
ಗ್ನಶುಭಶ್ರೀಗಗನಾಂತರಾಲತಲಮಂ ನಿಷ್ಕಲ್ಮಷಂ ಮಾಡೆ ಕೂ ।
ಡೆ ಶಿವಾಖ್ಯಾನವಿಶಿಷ್ಟಯೋಗಮೆಸೆದಿರ್ದಾಷಾಢಕೃಷ್ಣತ್ರಯೋ
ದಶಿಯೊಳ್ ರೇವತಿಯೊಳ್ ಜಗತ್ತ್ರಿತಯಲಕ್ಷ್ಮೀವಲ್ಲಭಂ ಪುಟ್ಟಿದಂ ॥ ೧೩೬

ಉದಯಾದ್ರೀಂದ್ರದ ರತ್ನಮೇಖಲೆಗೆ ಸೂರ್ಯಂ ಕ್ಷೀರವಾರಾನ್ನಿಧಾ
ನದ ವೇಳಾರಮೆಗೋಷಧೀಶನುದಯಂಗೆಯ್ವಂತೆ ಭವ್ಯಾಬ್ಧಿನೀ ।
ಹೃದಯೆಂದೀವರಬಂಧು ಶಂಕರನ ಶುದ್ಧಾಂತಾಂಗನಾಗಂಗೆಗೇ
ನುದಯಂಗೈದನೊ ಕಾಶ್ಯಪೋದ್ಭವಕರಂ ಸಾಹಿತ್ಯರತ್ನಾಕರಂ ॥ ೧೩೭

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತ
ಮಪ್ಪ ಅನಂತನಾಥಪುರಾಣದೊಳ್ ತೀರ್ಥಕರಕುಮಾರೋ
ದಯೋತ್ಸವ ವರ್ಣನಂ ಚತುರ್ಥಾಶ್ವಾಸಂ

---



## ಪಂಚಮಾಶ್ವಾಸಂ

ಶ್ರೀವನಿತೆಗೆ ಸೊಂಪು ವಚ
ಶ್ರೀವನಿತೆಗೆ ಪೆಂಪು ಕೀರ್ತಿವನಿತೆಗೆ ಸೊಬಗು ।
ದ್ಭಾವಿಸುವಿನವೊಗೆದನಿಳಾ
ಪಾವನಚರಿತಂ ವಿನೇಯಜನಮುಖತಿಲಕಂ ॥ ೧

ತ್ರಿದಶಕರಕೋಣಹತಿಯಿ
ಲ್ಲದೆಯುಂ ಮೊಳಗಿದುವು ದುಂದುಭಿಧ್ವನಿ ತಾಲ್ವೋ ।
ಷ್ಠದ ವಿವರವಿಲ್ಲದುಣ್ಮುವ
ಪದವಾಕ್ಯಪ್ರಸರದಂತೆಪರಮೇಶ್ವರನಾ ॥ ೨

ಪರಮಪವಿತ್ರನಂತೆ ಧರೆ ನೀರಜಮಾದುದು ತತ್ವವೇದಿಯಂ
ತಿರೆ ಜಳಸಂಕುಳಂ ತಿಳಿದುದುಜ್ಜ್ವಲಮಾದುದು ದಿಙ್ಮುಖಂ ಪ್ರಸ ।
ನ್ನರಮುಖದವಂತೆ ಭಾಕ್ತಿಕನವೊಲ್ ಬಲವಂದುದು ವಹ್ನಿ ಸಗ್ಗದಿಂ
ಸುರಿವಲರ್ಗಂಪಸಾಂತು ಜಡದಂತಡಿಯಿಟ್ಟುದು ಮಂದಮಾರುತಂ ॥ ೩

ಅವಿರಳಮಾದುವಾಪುರದೊ [1] ಳೀಶನ ಜನ್ಮಮಹೋತ್ಸವಕ್ಕೆ ತೀ
ವುವ ಕಲಶಂಗಳರ್ಚಿಸುವ ಕನ್ನಡಿ ಬರ್ಚಿಸಿಕೊಳ್ವ ಪೆಂಡಿರಾ ।
ಡುವ ರಸಲಾಸ್ಯಮೋದುವ ಶುಭಧ್ವನಿ ಪಾಡುವ ಪಂಚಮಾಡಿ ಕ
ಟ್ಟುವಗುಡಿ ಪೊಯ್ವ ಬದ್ದವಣಮೆತ್ತುವ ಮುತ್ತಿನ ಮಾಲೆದೋರಣಂ ॥ ೪

ಕೇಸರದ [2] ಸರದೆ ಬೀಸುವ
ಸೌಸವಮಂ ಕೇರಿಕೇರಿಯೊಳ್ ಮನೆಮನೆಯೊಳ್ ।
ಸೂಸುವ ಸುಟ್ಟುರೆ ರಾಗದಿ
ನಾಸುಕರಂ ಮುಟುಗಿಸಿತ್ತಯೋಧ್ಯಾಪುರಮಂ ॥ ೫

1 ಗ. ಳೀತನ. 2 ಕ. ರಸದೆ.

ವ॥ ಅಂತದೃಷ್ಟಪೂರ್ವಶ್ರುತಮುಮಪ್ರಯತ್ನಮುಮವಾಙ್ಮಾನಸಗೋಚರಮುಮಮಾನುಷೀಯಮುಮಾದ ಪರಮೇಶ್ವರನ ಪರಮಪಾವನೋತ್ಸಾಹದೊಳ್ [1] ಮಹಾಮಹಿಮೆಯೊಳಮರನಾರೀನಿಕರಮೊಡರ್ಚುವ ಮಂಗಳೋಪಚಾರಂಗಳೊಳಿಡೆವಡೆಯದೆ ಧೂಪಲೇಪಭಕ್ಷಣೌಷಧ ರಕ್ಷಣದ್ರವ್ಯಲಕ್ಷಿತೆಯರಾಗಿ ಸೂತಿಕಾಭವನದ್ವಾರೋಪಕಂಠದೊಳ್ ಸಂದಣಿಸಿ ನಿಂದ ಕುಲಮಹತ್ತರವಧೂಕದಂಬದೊಳಂ। ಮತ್ತಮೋಲಗಸಾಲೆಯ ಸಂಗೀತಸದನರಂಗದೊಳಚ್ಚರಸಿಯರ ಗೊಂದಣವೆಕ್ಕಣಮೆ ತೆಕ್ಕನೆ ತೀವೆ ಪುಗಲ್ಪಡೆಯದೆ ಸೂಜಾಯ್ತರ ಕರೆಹಮುಂ ಸನ್ನೆಗೆಯ್ವಂತೆ ರಾಜಾಂಗಣದೊಳಗೆ ಮಂಗಳಾಚಾರಸಂಗೀತಕಮುಂ ನೆಗೞ್ವೆ ಮುಖರಿಗಾಣರತಾಳವಾದ್ಯಕೋಳಾಹಳದೊಳಂ । ಮತ್ತಮಗಣ್ಯಪುಣ್ಯಪುಣ್ಯಾಕಾರಂ ಪಣ್ಯಾಂಗನಾಸಂಗೀತರಾಗಿ ಸಮಯಂಬಾರ್ದು ಕರುಮಾಡದ ಮತ್ತವಾರಣದೊತ್ತುವಿಡಿದುಕುಳ್ಳಿರ್ದ [2] ಮಕುಟವರ್ಧನಮಂಡಳಿಕರ ದಂಡನಾಯಕರ ಠಕ್ಕುರರ ಮಹತ್ತರರೞ್ದು ಮೊತ್ತಂಗಳಿತ್ತ ಸಮಯತ್ಯಾಗಮತ್ತಳಗಮಾಗೆ ಮಂಗಳವೃತ್ತಂಗಳನೋದಿ ಪೊಗೞ್ದು ಹಾರೈಸಿ ಪರಸುವ ವಂದಾರುವೃಂದಾರಕರ ಸಂದಣಿಗಳೊಳಂ। ಆ ಸಿಂಹಸೇನಮಹಾರಾಜಾಲಯದೊಳಗುಂ ಪೊಱಗುಂ ಅತ್ಯುತ್ಸವೋತ್ಸವಪ್ರಕ್ಷೋಭಿತಮಾಗಿರ್ದುದಂತುಮಲ್ಲದೆಯುಂ

ಅರೆಜೋಲ್ದುಟ್ಟುದೆ ಬೞಲ್ವ ಮೇಲುದೊಗೆವೀಷಲ್ಲಂಬಶುಂಭತ್ಪಯೋ
ಧರಮುಡ್ಡಂಗಿಡದಿರ್ದ ಪೂಮಿಡಿವಿತಾನಂ ನರ್ತನಂ ದಾದಿಯ ।
ರ್ಗೆ ರಸಾವೇಶದಿನೊಪ್ಪೆ ಕೂಡೆ ಕುಣಿಯುತ್ತುಂ ಬಂದು ಸಲ್ವನ್ನಮಾ
ಹರಚೇಳಕ್ರಿಯೆ ಭೂಪನಂ ಸುಲಿದುಕೊಂಡರ್ ಪಾಯ್ದು ದಿಂಡುಚ್ಚೆಯರ್ ॥ ೧

ವ॥ ಅಂತು ಮೆಱೆವ ಮಾಂಗಲ್ಯಸಮಯದೊಳ್

ಏೞ ಪುಳೋಮಜಾರಮಣ ಪುಟ್ಟಿದನೀಗಳನಂತನಾಥನೀ
ರೇೞನೆಯಕ್ಷಯಂ ಪರಮನೆಂದು ಕನನ್ಮಣಿಪೀಠಕಂಪನಂ ।
ಪೇೞಲೊಡಂ ಬೞಿಕ್ಕವಧಿಯಂ ತಿಳಿದಾಗಳಯೋಧ್ಯೆಯತ್ತಲಾ
ಏೞಡಿಯಿಟ್ಟು ಮೂಮೆ ಪೊಡೆವಟ್ಟು ಶತಕ್ರತು ಸಾನುರಾಗದಿಂ ॥ ೨

---

1 ಕ. ಮಹಾಮಹಿಮಕೆಯಿಂ. 2 ಕ. ನರಪತಿ.

ಜನ್ಮಮೃತಿವಿರಹಿತಂಗೆ ಜ
ಗನ್ಮಂಡನಮಣಿಗೆ ಭಕ್ತಿಭರಚರಿತಮಪ್ಪನಂ ।
ಜನ್ಮಾಭಿಷೇಕಮೆಂಬು
ದ್ಯನ್ಮಹಮಂ ಮಾಡಲಾಗಲುದ್ಯತನಾದಂ ॥ ೮

ವ॥ ಅನ್ನೆಗಮತ್ತಲ್

ಅಭವಂ ಶ್ರೀಮದನಂತನಾಥನುದಯಂಗೆಯ್ದಿರ್ದುದಂ ತಂಬದುಂ
ದುಭಿ ಕಂಠೀರವಘಂಟಿಕಾಪ್ರಕರನಾದಂ ಸಾಱುವಂತಾಗೆ ಭ ।
ಕ್ತಿಭರಾನಮ್ರಕಿರೀಟರಾಭವನವಾನವ್ಯಂತರಾಜ್ಯೋತಿಷ
ಪ್ರಭುಕಲ್ಪೇಂದ್ರಚತುರ್ನಿಕಾಯದಿವಿಜರ್ ಕೈಕೊಂಡರುತ್ಸಾಹಮಂ ॥ ೯

ಮದಪೂರಾಪ್ಲಾವಿತಾನೇಕಪಘಟಿ ಘನರಂಗತ್ತುರಂಗವ್ರಜಂ ಕೇ
ತುದಳವ್ಯೋಮಾದರಸ್ಯಂದನತತಿ ಘಟಿತಾಸ್ತ್ರಸ್ಫುರದ್ವಿಸ್ಫುಲಿಂಗಂ ।
ಪದಗಂ ನಿರ್ಘೋಷಿತಾಭ್ರಂಕಷವೃಷಭಚಯಂ ಲಾಸ್ಯಗಾಂಧರ್ವಲೀಲಾ
ಸುದತೀವೃಂದದ್ವಯಂ ಬಂದುದು ಹರಿಹಯಸಪ್ತಾಂಗಸೇನಾಸಮುದ್ರಂ ॥ ೧೦

ವ॥ ತದನಂತರಂ

ಗಗನಶ್ರೀ ಚಂದ್ರಕಚ್ಛತ್ರಮನೆಸಗೆ ನಿಜೋಷ್ಣೀಷರತ್ನಾವಳೀರ
ಶ್ಮಿಗಳಿಂ ಕೂರಂಕುಶಂ ಮುಯ್ವಿನೊಳಳವೆಱೆ ಬಂದಪ್ಪಿದಂತಿರ್ಪಿನಂ ಪ ।
ಕ್ಷಗಜಶ್ರೀಪುಷ್ಪಕಾಲಂಕೃತ ಸುರಗಣಿಕಾಚಾಮರಾಂದೋಳಲೀಲಾ
ನುಗವಸ್ತ್ರಪ್ರಾಂತನೈರಾವತವಿಪುಲತರಸ್ಕಂಧದೊಳ್ ಶಕ್ರನಿರ್ದಂ ॥ ೧೧

ದಿಗಧೀಶರ್ ಪರಿವಾರವಾಹನವಧೂನದ್ಧಾಯುಧರ್ ವಂದು ಪೆ
ರ್ಮೆಗೆ ನೆಮ್ಮೆಗೆ ಬಟಿಕ್ಕೆ ಚಾತುರವಿದ್ಯೈಕತ್ರಿಂಶದಿಂದ್ರತ್ರಿರ್ಲೋ ।
ಕಗುರುಶ್ರೀಪದಪೂಜನಾತಿಶಯು ನವ್ಯದ್ರವ್ಯದಿವ್ಯಾಂಗನಾ
ಪ್ರಗುಣಪ್ರಸ್ತುತಗೀತವಾದ್ಯನಟನಾದ್ಯಾನೀಕಿನೀಸಂಯುತರ್ ॥ ೧೨

ದೆಸೆಯೆಲ್ಲಂ ನೂತ್ನರತ್ನಾಭರಣಕಿರಣಜಾಲಂಗಳಿಂ ತೀಂಕೆ ತಳ್ತಾ
ಗಸಮೆಲ್ಲಂ ಛತ್ರಚಿತ್ರಧ್ವಜಚಮರಜ ನಾನಾವಿಮಾನಂಗಳಿಂ ಚಿ ।

ತ್ರಿಸೆ ವಾತವ್ರಾತಮೆಲ್ಲಂ ಮಲಯಜಘುಸೃಣಸ್ರಗ್ಗ್ನ್ಮವಾಮೋದದಿಂ ಪು
ಟ್ಟಿಸೆ ಸೌಧರ್ಮೇಂದ್ರಸೇನಾಭರದಭಿಮುಖದೊಡ್ಡೊಡ್ಡುಗೊಂಡೊಡ್ಡಿ ನಿಂದರ್॥

ವ॥ ಅಂತು ಬಂದು ಸಂಧಿಸಿ ನಿಂದ ಪೂರ್ವೋತ್ತರ್ವರರುಂ ದೇವನಾಯಕರ ಚಿತ್ತೋತ್ಸಾಹಮತ್ತಳಗವಾಗೆ

(ಪೃಥ್ವೀವೃತ್ತ)

ಜಗತ್ರಿತಯಚಿತ್ತವಲ್ಲಭನ ವರ್ಧನೋತ್ಸಾಹದೊಳ್
ನಿಗುಂಬಿಸೆ ಮನೋಮುದಂ ಕಿಱುಪಿ ಬೊಬ್ಬೆಗೊಂಡಿರ್ವರುಂ ।
ತಗುಳ್ದೊದಱಿ ಸಾರ್ದು ಲಗ್ಗೆವಱಿವೊಯ್ದು ತಳಕ್ಕೆಯಿಂ
ನೆಗಟ್ಟಿದುದು ದೇವಲೋಕದ ವಿಲೋಕನಾನಂದಮಂ ॥ ೧೪

ವ॥ ಅಂತು ನಿರಂತರ ಪ್ರಕ್ಷುಭಿತೋದಯವಾಹಿನೀವ್ಯೂಹಲಕ್ಷ್ಮೀಸಮಾಜಂ ಪರಸ್ಪರಪ್ರಣಯದಿನಪ್ಪಿಕೊಂಡಂತಿರೊಪ್ಪಮಾದ ಸಂಘಟ್ಟನ ವಿಘಟನ ಪಟು ಪಟಹಲಟಹಗಂಭೀರಭಂಭಾರಶಂಖಶೃಂಗದುಂದುಭಿಮೃದಂಗಜಯಘಂಟಾಮುರಜಕಹಳೋತ್ತಾಳಕೋಳಾಹಲಂ ಮೆಱೆಯೆ ದೇವೇಂದ್ರವೃಂದವೊಂದೆ ಪಂತಿಯಿಂ ಕಿಂತಿಣಿವಡೆದು ಅಯೋಧ್ಯಾಮುಖವಾಗಿ ತಳರ್ದು ಬರ್ಪಾಗಳ್

ಉಲಿವ ವರೂಥಿನೀರವದ ಬಲ್ಲುಲಿ ಬಗ್ಗಿಪ ದೇವಚಾರಣಾ
ವಲಿಗಳ ಕೆಯ್ಯ ಕೋಲ್ ನಿಲಿಸಲಾಱದ ಕಲ್ಪಜವಾಹಿನೀಮಹಾ ।
ಜಲಧಿಯ ನಿಚ್ಚೆಯುಚ್ಚಗಳ ಮೆಚ್ಚುಗಳಚ್ಚರಿವಲ್ಲಿಗಲ್ಲಿಗೇಂ
ನಿಲಿಸಿದವೊಲ್ ಬೆಡಂಗಿಯರ ಗೀತದ ವಾದ್ಯದ ನೃತ್ಯದೋಜೆಗಳ್ ॥ ೧೫

ಜಿನರಾಜೋದಯಮಿಲ್ಲಿ ಸಗ್ಗದೊಳಗಂತಾಪುಣ್ಯಮೆಲ್ಲಿರ್ದುದೊ
ಯ್ಕನೆ ಸಾರ್ಗುಂ ನಮಗೆಂದಲಂಪುವೆರಸಾಪೀಯೂಷಕಾಸಾರವಾ ।
ಜನವಾಸೇವ್ಯವಿಮಾನವಾಸುರವಧೂಶೃಂಗಾರವಾಪೌರಮಂ
ಬಿನಿತುಂ ಮುನ್ನಮೆ ಬಂದುವೆಂದು ಪುರಮಂ ವೃಂದಾರಕರ್ ನೋಡಿದರ್ ॥೧೬

ವ॥ ಅಂತು ನೋಡುತ್ತುಂ ಬಂದು ಅಯೋಧ್ಯಾಪುರಮಹೋತ್ಸವಲಕ್ಷ್ಮೀ ಮನಂಬುಗೆ ಪೊಕ್ಕು ರಾಜಾಧಿರಾಜರಾಜಮಂದಿರದ ಮುಂದನೇಕಾನೀಕಿನೀನಿ

ಕಾಯವಿಮಾನಯಾನವಾಹನವ್ಯೂಹಂ ತೇನತೇನವೊಟ್ಟುವರೆಂಬಂತೆ ಘಟ್ಟಿಸಿ ನಿಲೆ ತತ್ಪುರೋಭಾಗದಲ್ಲಿ

ಇಟಿಪಿ ಮದೇಭದಿಂ ಪೆಱಗನೇಱಿದಳಂ ವಿವಿಧಾರ್ಚನಂಗಳಂ
ಬಟಿಯೊಳೆ ತಂದು ಮಾಂಗಲಿಕಧಾರಿಣಿಯರ್ ನಿಜವಾಹನಂಗಳಿಂ ।
ದಿಟಿದೊಡವೋಗೆ ಪೋಗು ಬಿಜಯಂಗೆಯಿಸೆಂದು ಪುಲೋಮಜಾತೆಯಂ
ಕಟಿಪಿದನಿಂದ್ರನಿರ್ದ ಮಹಿಪಾಲಗೃಹಪ್ರಘಣಾಂತರಾಳದೊಳ್ ॥ ೧೭

ಇದಿರ್ವಂದೆಱಗಿದ [1] ಸಂಭವ
ಸದನದ ದೌವಾರಿಕೀಕರಂ ಸಂದ ಸಮಾ ।
ಸ್ಯದವಾಮಹಸ್ತೆ ಪೊಕ್ಕಳ್
ತ್ರಿದಶೋತ್ತಮೆ ರೂಪುಗರೆದು ಜನನೀಗೃಹಮಂ ॥ ೧೮

ವ॥ ಅಂತು ಪುಗಲೊಡಂ ಮಗಮಗಿಸಿ ನೆಗೆವ ದಿವ್ಯದ್ರವ್ಯಧೂಪಕಲಾಪ ಸೌರಭಸಾರದಿಂ ಸುರಭಿವಿಮಾನಮಿರ್ಪಂತಿರ್ದ ಸೂತಿಕಾನಿಕೇತನದೊಳ್ ಮಂಗಳವಸದನಮನಂಗೀಕರಿಸಿದಂಗಪರಿಮಳವಿಲಾಸಮೆಸೆಯೆ ಕಪ್ಪುರದ ಲೆಪ್ಪದ ದೇವತೆಯಂತೆ ಕೈಗೈದಿರ್ದ ಜಿನೇಂದ್ರಜನನಿಯಂ ಹರ್ಷಾಶ್ರುಪರಿಹಿತಲೋಚನ ಮರೀಚಿನವೀನಾಭಿಷೇಚನಮನೊಡರ್ಚೆ ನೀಡುಮಚ್ಚರಿವಟ್ಟು ನೋಡಿ

ಮಿಱುಗುವ ಕಾಯ ಕಾಂತಿ ಗೃಹದೀಪಕಲಾಪದ ರಶ್ಮಿಜಾಲಮಂ
ಮಱೆಯಿಸೆ ಸೋಂಕಿಲೊಳ್ ತೊಳಗುತಿರ್ದ ಜಿನೇಂದ್ರನ ಪೆತ್ತ ತಾಯ್ಗೆ ತಾ ।
ನೆಱಗಿದಳಿಂದ್ರಕಾಂತೆ ಶುಭರತ್ನಮನಾಂತ ನಿಧಾನಲಕ್ಷ್ಮಿಗೊ
ಲ್ದೆಱಗುವ ದೀಪವರ್ತಿಯವೊಲಾನತಕಂಧರೆ ಸಾನುರಾಗದಿಂ ॥ ೧೯

ವ॥ ತದನಂತರಂ

ಬಾಲಮೃಗಾಂಕನಂ ಕುಮುದಲಕ್ಷ್ಮಿ ಕುಶೇಶಯಲಕ್ಷ್ಮಿ ತಿಗ್ಮರು
ಗ್ಮಾಲೆಯನಳ್ಕಱಿಂ ಬಳಸುವಂತೊಸೆದಳ್ ಬಲಗೊಂಡನಂತಜಿ ।

1 ಕ. ಸಂಭ್ರಮ.

ದ್ಬಾಲನನಾಲತಾಂಗಿ ಜನನೀಭುಜಧಾಮಸುಧಾವಿಲೋಲ ಕ
ಲ್ಲೋಲಲತಾವಿಲಂಬಿತನಮೇರುನವಾಂಕುರಕೋಮಲಾಂಗನಂ ॥ ೨೦

ಇದು ಚಿತ್ತದ ಚಿಂತಾಮಣಿ
ಇದು ಕಣ್ಗಳ ಕಾಮಧೇನುವಿದು ಸೌಖ್ಯದ ಸಂ ।
ಪದಮಿದು ಮೂಲೋಕದ ಭಾ
ಗ್ಯದ ಬಾಡ್ಮೊದಲೆಂದು ನೋಡಿದಳ್ ಜಿನಶಿಶುವಂ ॥ ೨೧

ಕಡೆಗೋಡಿವರಿವ ಕಾಂತಿಯ
ಕಡಲೊಳಗಣ ಮಣಿವೊಲೆಸೆವ ಶಿಶುವಂ ಶಚಿ ಕಂ ।
ಡೊಡೆಯುರ ತೊಡವಂ ತೊಟ್ಟನೆ
ಬಡವಂ ಕಂಡಂತಿರೆತ್ತಲಣ್ಮದೆ ನಿಂದಳ್ ॥ ೨೨

ವ॥ ಅಂತು ನಿಂದು ಕಲ್ಯಾಣೋದ್ಯೋಗವಿಲಂಬನಭೀತಿ ಕಲಿತನಮಂ ಕೈಗೆವಾಡೆ

ತಳಿರ್ಗಳ್ ಪುಣ್ಯಮಹೀಜದ
ಫಳಮಂ ತಳೆವಂತೆ ಕೆಂದಳಂ ತಳೆಯಲೊಡಂ ।
ಪುಳಕಾಂಕುರವೊಗೆದೊತ್ತುವ
ನಳಿತೋಳ್ಗಳಿನಂಜುತೆತ್ತಿದಳ್ ಬಾಲಕನಂ ॥ ೨೩

ಮಾಯದ ನಿದ್ರೆಯನಿಟ್ಟಳ್
ತಾಯಲರ್ಗಣ್ಗಳ್ಗೆ ಸೋಂಕಿಲೊಳ್ ತಂದಿಟ್ಟಳ್ ।
ಮಾಯಾಶಿಶುವಂ ತ್ರಿಜಗ
ಜ್ಯಾಯನನಾಸೂತಿಭವನದಿಂ ಬಟಿಕೊಯ್ದಳ್ ॥ ೨೪

ಸುರಪನತಮುಕುಟಮಣಿಘೃಣಿ
ವೆರಸಿದಿಗೊರ್ಂಡುವು ಶಚಿಯ ಭುಜೋದಿತಜಿನಭಾ ।
ಸ್ಕರನಂ ದಿವಿಜರ ಜಯಜಯ
ಪರಮೇಶ್ವರ ನಂದ ನಂದ ವರ್ಧ ಸ್ವರಮುಂ ॥ ೨೫

ದಿಕ್ಕಿನೊಳಂ ವಿಯತ್ತಲದೊಳಂ ಗಿಡಿದಂತಿರೆ ನಿಂದ ದೇವಲೋ
ಕಕ್ಕತಿವಿಸ್ಮಯಂ ನೆಗಪೆ ನೋಡುವ ಕಣ್ಣಮೃತಾಂಜನಂಬೊಲ ।
ಣ್ಪೊಕ್ಕುದನಂತಜಿಜ್ಜಿನಸುಧಾಂಶುವ ಮೆಯ್ಸಿರಿ ಮೂಱುಲೋಕಮಂ
ತೆಕ್ಕನೆ ತೀವಲಾರ್ಪ ಪರಮಾತ್ಮನ ಶಕ್ತಿಗದಾವಕೌತುಕಂ ॥ ೨೬

ಕೆಳದಿಯರಾಂತ ಬೆಳ್ಗೊಡೆಯ ಬೆಳ್ನೊರೆ ಬೀಸುವ ಚಾಮರಂಗಳು
ಚ್ಚಳಿಸುವ ತುಂತುರಾಗೆ ಸುರಕೋಟಿಯ ಕವ್ವರೆಗೊಂಡು ಕಾಣ್ಬ ಕ ।
ಣ್ಗಳ ಬೆಳಗೆಂಬ ಪಾಲ್ಗಡಲೊಳರ್ಭಕನಂ ತಳೆದಿಂದುಲೇಖೆಯಂ
ತಳೆದ ತರಂಗಲಕ್ಷ್ಮಿ ನಡೆತರ್ಪವೊಲಿಂದ್ರನ ಕಾಂತೆಯೊಪ್ಪಿದಳ್ ॥ ೨೭

ವ॥ ಅಂತು ಸಾಕ್ಕೆಗೆ ವರಲೊಡಂ

ಎಱಗಿದ ಕೊಂಬೆಟಲ್ವ ಕಿವಿ ತಗ್ಗಿದುರೋಮಣಿವಾಯು ಕುಂಭದೊಳ್
ನಿಱಿಸಿದ ಪುಷ್ಕರಂ ನೆಗಟ್ವ ಕಿಂಕರಣಂಬೆರಸಿಂದ್ರವಂದಿತಂ ।
ಗೆಱಗಿದ ದಿವ್ಯದಂತಿ ಮಡಿದಿತ್ತ ಪದಾಗ್ರಮನೇಱ ಮೂಜಗ
ಕ್ಕೆಱಯನನಾಪುಲೋಮಸುತೆ ರಾಗದೆ ತನ್ನೆಱೆಯಂಗೆ ನೀಡಿದಳ್ ॥ ೨೮

ಪರಮೆಶ್ವರನಂ ನೀಡುವ
ಸುರೇಂದ್ರವಲ್ಲಭೆ ಸುರೇಂದ್ರದಂತಿಯ ಕೆಲದೊಳ್ ।
ಪರಿಭವಿಸಲ್ಕೇನಾರ್ತಳೊ
ಶರದದ ಬೆಳ್ಮುಗಿಲನಡರ್ವ ವಿದ್ಯುಲ್ಲತೆಯಂ ॥ ೨೯

ಮಣಿಮುದ್ರಾಜ್ಯೋತ್ಸ್ನೆ ಪೂವಂ ಕೆದಱೆ ತಳಿಯೆ ಹಾರಾಂಶುಗಳ್ ಸೇಸೆಯಂ ಕಂ
ಕಣಝುಂಕಾರಂ ಕರಂ ಮಂಗಲಮನೆಸಗೆ ಶೀತಾಂಶುವಂ ಸಾಂಧ್ಯಲಕ್ಷ್ಮೀ ।
ಪ್ರಣಯಂ ಕೈಕೊಳ್ವವೊಲ್ಸಂದಿಸೆ ಕರತಲರಾಗಂ ತ್ರಿಲೋಕ್ಯೈಕಚೂಡಾ
ಮಣಿಯಂ ಪೌಲೋಮಿ ತಂದಿತ್ತೊಡೆ ಕುಲಿಶಧರಂ ರಾಗದಿಂದೆತ್ತಿಕೊಂಡಂ॥೩೦

ಅಂತೆತ್ತಿಕೊಂಡು ಕಣ್ಣನಿ
ತುಂ ತಣ್ಣನೆ ತಣಿಯೆ ನೋಡಿ ನಿರ್ವೃತಿಲಕ್ಷ್ಮೀ
ಕಾಂತನ ಕೇಸಡಿಗಳನಿಂ
ದ್ರಂ ತಳೆದಂ ಮಕುಟದೊಡನೆ ತಳಿರ್ವಾಸಿಗಮಂ ॥ ೩೧

ವ॥ ಅನಂತರಮನಂತದಿವ್ಯದ್ರವ್ಯಪರಿಪೂರಿತಗಂಗಾಂಬುಶಿಂಜಿತಮುಮಂ ಚಿತಾಂಚಲಪಂಚರತ್ನವಿಲಸಿತಸವಿಾಚೀನಚೀನಾಂಬರಾಚ್ಛಾದಿತಮುಮಪ್ಪ ನಿಜಪರ್ಯಂಕವಿಷ್ಟರದೊಳಧಿಷ್ಠಿತಂಮಾಡಿದಾಗಳ್

ದೇವರ ದೇವಂ ನೆಗಪ್ದೈ
ರಾವತಪೂರ್ವಾಸನಾಧಿರೂಢಂ ಮೆಱೆದಂ ।
ದೇವೇಂದ್ರನಂಕದೊಳ್ ಹೈ
ಮಾವನಿವರಪುಷ್ಯರಾಗಮಣಿಶಿಖರದವೊಲ್ ॥ ೩೧

ಮಂಡಳಿಪ ಕಂಕಣಚ್ಛವಿ
ಪಾಂಡುಚ್ಛತ್ರಕ್ಕೆ ವಿಲಸನಮಂ ಕುಡೆ ಜಗತೀ ।
ಮಂಡನಮೂರ್ತಿಗೆ ಮಾಣಿಕ
ದಂಡದ ಕೊಡೆವಿಡಿದನಾಗಳೀಶಾನೇಂದ್ರಂ ॥ ೩೨

ಪರಮೇಶ್ವರನಡಿದಳಿರೊಳ್
ಕಿರೀಟರುಚಿ ಕೆದಱೆ ಪೊಗಳಂ ತಮ್ಮೆರಡುಂ ।
ಕರಿಯುಗಜಂ [1] ಬಿಳಿಯಾನೆಗೆ
ಹರಿನೀಲದ ಪಕ್ಕೆಸಾರೆಯಾಗಿಕ್ಕೆಲದೊಳ್ ॥ ೩೪

ಅರುಣಾಂಭೋಜವನಂಗಳೊಳ್ ಕುಳಿರ್ವ ಹಂಸೀಮಾಲೆವೊಲ್ ಚಾಮರಂ
ಕರಕಂಕೆಲ್ಲಿದಳಂಗಳೊಳ್ ಪೊಳೆಯೆ ಕೊಂಕಿಂ ಬಿಂಕಮಿಂಬಾಗೆ ಸಿಂ ।
ಧುರದೊಳ್ [2] ಬೆಂಚೆಯುಮಂ ಮಲಂಗಿ ಜಿನನಾಥಂಗಿಕ್ಕಿದರ್ ಚಾರುಚಾ
ಮರಮಂ ನಿಂದು ಸನತ್ಕುಮಾರನುಮತರ್ಕ್ಯೋತ್ಸಾಹಿ ಮಾಹೇಂದ್ರನುಂ ॥೩೫

ಆಗಳ್ ತುಂಗಮೃದಂಗತಾಳಜಯಘಂಟಾಘಂಟಿಕಾಶಂಖಭಂ
ಭಾಗಂಭೀರಮಹಾರವಂ ಭುವನಮಂ ನಾದಾತ್ಮಕಂ ಮಾಡೆ ದಿ ।
ಗ್ಭಾಗಂ ಪಲ್ಲಟಮಾಗೆ ಪಿಂಗಿಸುವವೊಲ್ ಕೈನೀಡಿ ಸೈನ್ಯಂಗಳಂ
ಪೋಗಲ್ವೇಟ್ಟಮರಾದ್ರಿ [3] ಗಭ್ರಗಜಮಂ ಜಂಭಾರಿ ಬಿದ್ದಿಕ್ಕಿದಂ ॥ ೩೬

---

1 ಕ. ಬಳಿ. 2 ಕ. ಜಂಚೆ. 3 ಗ. ಭದ್ರಗಜಮಂ ಜಂಭಾರಿ ಬಿದ್ದಿಕ್ಕಿನಂ.

ಸುರನಿಕುರುಂಬಮಯೋಧ್ಯಾ
ಪುರದಿಂ ನೆಗೆದಮರಗಿರಿಗೆ ನಡೆಯಿಟ್ಟುದು ಸು ।
ಟ್ಟುರೆಗಾಳಿಗೆ ಸುಯ್ಯಾಣದ
ತೆರೆಯುಂ ಹೊತ್ತೆತ್ತಿ ಬಿಚ್ಚಿದಂತಿರೆ ನಭದೊಳ್ ॥ ೩೭

ವ॥ ಆಗಳ್

ಜಿನಜನ್ಮೋತ್ಸವಮಂ ಮನಂದಣಿಯೆ ನೋಡಲ್ ಗೊಂದಣಂಬೆತ್ತುದಾ
ನನಮುಂ ತಾನೆನೆ ಮೂಱು ನಾಲ್ಕು ಘಟಿಯಂ ದೇವೇಂದ್ರನಂತೇಱಿ ಬ ।
ರ್ಪನೊ ಪೇಟೆಂದೆನೆ ದೇವಕೋಟಿ ನೆಗಟಲ್ಕಾಡಿತ್ತು ಕೋಡಾಳಿಗ
ಟ್ಟಿನ ತಟ್ಟಿಂದೆನೆ ಹಸ್ತಿ ಪೆತ್ತುದು ಮಹಾವೈಕುರ್ವಣೋತ್ಸಾಹಮಂ ॥ ೩೮

ವ॥ ಅದೆಂತೆನೆ :—

ವದನಂ ಕೋಡೆಂಟಱಿಂ ವಾಸವರದನಿಗೆ ಮೂವತ್ತೆರಟ್ಬೊಗೊಳಂಗಳ್
ವದನಕ್ಕೊಂದೊಂದು ನೀರೇಜಿನಿ ಕೊಳಕೊಳದೋರೊಂದು ಮೂವತ್ತೆರಟ್ಬ ।
ತ್ರದರಲ್ಮೊವತ್ತೆರಟ್ಟಲ್ಲಗಗೆಸಟೆಸಟೊಳ್ ನರ್ತಿಪರ್ ದೇವಿಯರ್ ಸೋಂ
ಕದೆ ಮೂವತ್ತಿರ್ವರೇನದ್ಭುತಮಯಮೊ ಜಿನೇಂದ್ರಾಭಿಷೇಕಪ್ರಯಾಣಂ ॥ ೩೯

ಸುರಿವ ನಮೇರುಭೂರುಹದ ಪೂಮಟೆಯುಂ ಶತಕೋಟಿನರ್ತಕೀ
ತರುಣಿಯರಿಕ್ಕುತಿರ್ಪ ಕುಸುಮಾಂಜಲಿಯುಂ ಪಟವಾಸಚೂರ್ಣದೊಳ್ ।
ಪೊರೆದೆರಟ್ಬಟ್ಟೆಯೊಳ್ ಕುಸುಮಕುಟ್ಟಿಮಮಾದೊಡದಂ ಸುಮೇರು ಮು
ಟ್ಟಿರಿಸಿದುದಿಂದ್ರನಾಜ್ಞೆ ಮೆಱೆವಂತಿರೆ ಸೇನೆ ವಿಲಾಸಯಾನಮಂ ॥ ೪೦

ವ॥ ಅಂತು ನಡೆಗೊಳಲೊಡಂ

ನವಲಾವಣ್ಯರಸಂ ತುಟುಂಕೆ ಕುಚಕೋಕಪ್ರೀತಿ ತಳ್ಪೊಯ್ಯೆ ವ
ಕ್ತ್ರವನೇಜಮುಲದೊರ್ಪ್ಪೆ ಕೊಂಕೆ ಭುಜವೀಚೀಸಂಕುಲಂ ನೇತ್ರಕೈ ।
ರವಮುಜ್ಜೃಂಭಿಸೆ ಬರ್ಪ ಮೆಯ್ಸಿರಿ ಕರಂ ಚೆಲ್ವಾಗೆ ಮುಂದಪ್ಸರೋ
ನಿವಹಂ ಮಾಡಿದುದಿಂದ್ರನಚ್ಚಿಗೆ ನಭಃಕಾಸಾರಮಂ ಸಾರಮಂ ॥ ೪೧

ಸುರತರುಣೀಚಳಾಳಕಮೃಗೋದ್ಭವರೇಣು ಪತಲ್ಲತಾಂತಸುಂ
ದರಮಕರಂದರೇಣು ಘನಸಾರನವೋಜ್ಜ್ವಲರೇಣು ಧೂಪದೊಳ್ ।
ಪೊರೆದಿರೆ ಧೂಳಿಯಂತೆ ತರಲಾತುರ್ದಮರ್ತ್ಯರ ಚಿತ್ತವೃತ್ತಿಗಂ
ಬರತಲಯಾನಮಲ್ಲದವನೀತಲಯಾನಮಿದೆಂಬ ಶಂಕೆಯಂ ॥ ೪೨

ವ॥ ಅದಲ್ಲದೆಯುಂ

ಇದು ತಾಂ ಭಾವನದೇವಭಕ್ತಿಯಿದು ವಾನವ್ಯಂತರೋಪಾಸ್ತಿ ಮ
ತ್ತಿದು ದಲ್ ಜ್ಯೋತಿಷದೇವಪೂಜೆಯಿದು ಕಲ್ಪಾವಾಸಸತ್ಕಾರಮೆಂ ।
ದು ದಿವೌಕರ್ ನಿಲಿಸುತ್ತಿದೇಂ ಮೆಱೆದರೋ ನಿಶ್ಶ್ರೇಯಸಶ್ರೀವಧೂ
ಮದನಂಗರ್ಚನಮೆಂಬವೊಲ್ ಸ್ತುತಿಕಥಾನೀರಾಜನೋತ್ಸಾಹಮಂ ॥ ೪೩

ವ॥ ಅದಲ್ಲದೆಯುಂ

ಎರಡುಂ ಕನ್ನಸದಿಂ ತಗುಳ್ದು ಚಮರಂ ವೈರೋಚನಂ ನಾಗ್ರತ
ಸ್ಸರ ರೇರೇ ನ ಚ ಪಾರ್ಶ್ವತಸ್ಸರ ನ ಹೋ ಪಾಶ್ಚಾತ್ಯ ಪಾಶ್ಚಾತ್ಯತ ।
ಸ್ಸರಯೆಂದೊಡ್ಡಿನ ಮುಂತು ಪಿಂತು ಕೆಲನಂ ತಿರ್ದುತ್ತೆ ತಮ್ಮಿರ್ವರುಂ
ಮುರಜಂ ಬಾಯ್ತ್ತರೆ ದೇವಸೇನೆ ನಡೆದತ್ತೋರಂತೆ ನೂಲ್ವೊಯ್ದವೊಲ್ ॥ ೪೪

ವ॥ ಅಂತು ಮೆಱೆವ ದೇವಗಮನಂ ಮುಟ್ಟುವೆಡೆಯೊಳದೃಷ್ಟಪೂರ್ವರಪ್ಪ ಚಮರ ವೈರೋಚನ ಭಾವನೇಂದ್ರರ್ಗೆ ಸೌಧರ್ಮೇಂದ್ರಂ ಕಣ್ಬೊಲನಾದ ಪೊಂಬೆಟ್ಟದ ನಿತಂಬಚತುಷ್ಟಯಾಡಂಬರವಿಲಾಸಮನಿಂತೆಂದು ಪೊಗೞ್ದಂ :—

ಮೇರುಮಹೀಧರಂಗೆ ಕಟಿಸೂತ್ರದ ಪಟ್ಟಿಗೆಯಂತಿರಾರಸೀ
ಹಾರಲತಾಳಿಯಂತಿರೆ ತಗುಳ್ಚಿದ ಕಂಠಿಕೆಯಂತಿರುನ್ನತೋ ।
ಚ್ಚಾರುಕಿರೀಟದಂತಿರೆಸೆದಿರ್ಪುವು ಮೇಖಲೆ ಕೂಡೆ ನಾಲ್ಕು ವಿ
ಸ್ತಾರಮನಾಳ್ದುಪತ್ಯಕದಧಿತ್ಯಕದಂತರದಂತರಾಳದಾ ॥ ೪೫

ಜಿನಮಹಿಮಂ ಸುರಾಸುರರ ಕೃತ್ರಿಮಚೈತ್ಯಗೃಹಂಗಳೊಳ್ ಪಳ
ಚ್ಚನೆ ಸಮೆದರ್ಚನಾಗರುವ ಧೂಪದ ಧೂಮದೆ ದೇವಕಲ್ಪನಂ ।

ದನಮನಿತುಂ ತಮಾಲವನಮಾಲೆವೊಲಾಯ್ತು ದು ಭದ್ರದೊಳ್ ಸುನಂ
ದನದ ಬೆಡಂಗು ಸೌಮನಸದಾಕೃತಿ ಪಾಂಡುಕದೊಂದು ಕೌತುಕಂ ॥ ೪೬

ವ॥ ಅಂತು ಸುಟ್ಟಿಸಿ ತೋಱುವ ಬೆರಲ್ಗುಡಿಯಿಂ ಮುಂದು ಬಣ್ಣಿಸುವ ನುಣ್ನುಡಿಯಿಂ ಪಿಂದುಟಿಯೆ ಮುಂದುವರಿದು—

ರಯದಿಂ ಪಿಂದಡಿ ಭದ್ರನಂದನಯುಗಕ್ಕಾಗಿರ್ಪಿನಂ ಮುಂದಣಂ
ಘ್ರಿಯುಗಂ ಸೌಮನಸಕ್ಕೆ ಪಾಂಡುಕತಲಕ್ಕೆಯ್ದಿತ್ತು ಕೈಕೊಂಡ ವಿ ।
ಕ್ರಿಯೆಯಿಂ ಕಾಯ ಬಲಂ ಸುಮೇರುಗಿರಿ [1] ಗಾಯ್ತ್ತೇರಂಡಲಂ ಬಂದು ಬೆ
ಳ್ಳಿಯ ಬೆಟ್ಟಂ ಪೊಸಪೊನ್ನಬೆಟ್ಟನಡರ್ವಂತಾಯ್ತಿಂದ್ರನೈರಾವಣಂ ॥ ೪೭

ವ॥ ಆಗಳ್

ಪಾಂಡುಕಶಿಲಾತಲೋಪರಿ
ಮಂಡಪ ಲಂಬೂಷ ಲಂಬವನ್ದನಮಾಲಾ ।
ಮಂಡನ ಲತಾಂತಪರಿಮಳ
ಮಂಡಳಿತ ಮದಾಳಿಗೀತ ಮಂದಸಮೀರಂ ॥ ೪೮

ಇದಿರ್ವಂದೊಯ್ಕನೆ ದೇವಸೇನೆಯ ನಭೋಯಾನಶ್ರಮಂ ಪಿಂಗೆ ತೀ
ಡಿದುದಂತೇಱಿ ಬಟಿಕ್ಕೆ ಪಾಂಡುಕಶಿಲಾಪಟ್ಟಾಂತದದ್ರೇಂದ್ರಮೂ ।
ರ್ಧದೊಳರ್ದಿಂದುವಿಯತ್ತಳಭ್ರಮುರದೊಳ್ ಬೇಸತ್ತು ಮಂದಾರಪಂ
ಡದ ಸುಚ್ಛಾಯೆಗಳೊಳ್ ಬಟಲ್ದೊಱಗಿದಂತೇಂ ಚೆಲ್ವುವೆತ್ತಿರ್ದುದೋ ॥ ೪೯

ಅನಿತು ನೆಗಪ್ತೆವೆತ್ತ ಪರವೋತ್ಸವದೊಳ್ ಲವಲೀತಮಾಲನಂ
ದನಕಬರೀಭರಂ ಮೆಱೆಯೆ ಮೇರುಮಹೀಧರನಚ್ಚಮಲ್ಲಿಕಾ ।
ಘನಕುಸುಮಂಗಳಂ ನಡುವೆ ಸಂಪಗೆದೇವಿ ತುಱುಂಬಿ ನಿಂದಳೆಂ
ಬಿನಮೆಸೆದತ್ತು ಪಾಂಡುಕಶಿಲಾತಳಮಧ್ಯದ ಸಿಂಹವಿಷ್ಟರಂ ॥ ೫೦

ವ॥ ಅಂತು ಪೆಱೆಯ ನಡುವಣ ಕಱೆಯಂತೆ ಮೆಱೆವ ಸಿಂಹವಿಷ್ಟರಮನ ಲಂಕರಿಸುವಿನೆಗಮಷ್ಟಯೋಜನೋತ್ಸೇಧಮುಂ, ಶತಯೋಜನಾಯಾಮಮುಂ,

1 ಗ. ಗಾಯ್ತ್ತೋರಂಡಲಂ.

ಶತಯೋಜನವಿಸ್ತಾರಮುಮಪ್ಪ ಚಂದ್ರಕಾಂತಶಿಲಾಪಟ್ಟಕವೆ ಘಟ್ಟಿಸಿದ ಕುಟ್ಟಿಮತಲವಾಗೆ

ಹರಿ ಪೇೞ್ದಂ ವಿಶ್ವಕರ್ಮಂ ಸಮೆದನದಱ ಪಸ್ತಾರ್ತ್ಕರಂ ಸ್ವರ್ಗಪೂಜ್ಯಂ
ನರರಿನ್ನೇವಣ್ಣಿಪರ್ ಪುತ್ತಳಿಗಳದಱ ಕಂಬಂಗಳೊಳ್ ಪಾಡಲುಂ ಬಿ ।
ತ್ತರದಿಂ ನಿಂದಾಡಲುಂ ಮಂಗಳಪರಿಕರಮಂ ನೀಡಲುಂ ಮಜ್ಜನಾಂಭೋ
ಭರಮಂ ಕೈಮಾಡಲುಂ ಬಂದಪುದೊಡನೊಡನಿಂದ್ರಾಣಿ ಕೈಕೊಳ್ವ ಸೂಳೊಳ್॥

ಸುತ್ತಿ ನಡೆನೋೞ್ಪ ದೇವರ
ಮೊತ್ತಂ ತಣ್ಮಲೆಯೆ ಘುಸೃಣಮಲಯಜರಸಮಂ ।
ಬಿತ್ತರದಿಂ ಕಱೆದಪುವಿದೆ
ಮುತ್ತಿನ ಮಾಣಿಕದ ಲಂಬಣಂ ನುಣ್ಬೆಳಗಂ ॥ ೫೨

ಅಂದು ವೃಷಭಾದಿಜಿನರ್ಗೆ ಪು
ರಂದರನೊಡರಿಸಿದ ಸೂಚಿಯಾನಕ್ರಮದಿಂ ।
ಚಂದೋಗಂ ಪಡೆ ಚಂದನ
ತಂದುದು ಜಿನಮಜ್ಜನಕ್ಕೆ ಜಿನಮಜ್ಜನಮಂ ॥ ೫೩

ವ॥ ಎಂಬ ಪೊಗಪ್ತೆಗಳುಂಬಮುಂ ತುಂಬಮುಮಪ್ಪ ಮಜ್ಜನಮಂಡಪದ ತೋರಣದ್ವಾರೋಪಕಂಠದೊಳ್ ನಿಂದು ಮಂಗಳಾಚಾರಚಾರುಸಂಗೀತಕವಾರಣೋದೀರಿತ ಮಾಂಗಲ್ಯ[1] ಪಟನಲಟಹಪಟಹಪ್ರಧ್ವಾನಮೆಸೆಯೆ ರತ್ನಮಂಡಪ ಪಾಂಡುಕಶಿಲಾಮಧ್ಯಾಧ್ಯಾಸಿತಹೈಮಸಾಮಜಾರಿವಿಷ್ಟರದೊಳ್ ದೇವಾದಿದೇವನಂ ದೇವರಾಜಂ ಪೂರ್ವಾಭಿಮುಖನಾಗಿ ಬಿಜಯಂಗೆಯ್ಸಿ ಬೞಿಕ್ಕೆ

ಹರಿಯುಂ ಶಿಖಿಯುಂ ಯಮನಂ
ನಿರುತಿಯನಂಪತಿಯುನನಿಲನಂ ವಿತ್ತಾಧೀ ।
ಶ್ವರನನವರವರ ದೆಸೆಯೊಳ್
ಪರಿವಾರಕಲತ್ರಪುತ್ರಶಸ್ತ್ರಸಮೇತಂ ॥ ೫೪

1 ಕ. ಪಟಲನ.

ಇರಿಸಿ ಚತುರ್ನಿಕಾಯಸುರಸೈನಿಕರಂ ಕರೆದಂಗರಕ್ಷರಾ
ಗಿರಿಸಿ ವಿಶೇಷವಸ್ತುಪರಿಚರ್ಯೆಗೆ ವೇಳ್ದುಟಿದಿಂದ್ರರ ಪುರಂ ।
ದರನಮೃತಾಂಶುಕಾಂತನವರತ್ನಸುವರ್ಣಘಟಂಗಳಿಂದಮ
ರ್ತ್ಯರನಿರವೇಳ್ದುನಿತ್ತರದಿನಬ್ಧಿವರಂ ತರಲೆಂದು ದುಗ್ಧಮಂ ॥ ೫೫

ಹಾರಿವಡೆದೆಸೆದುದಮರರ
ನೇರಾಣಿಯ ಪೊಂಗೊಡಂಗಳೆರಡುಂತರದಿಂ ।
ವಾರಿಧಿಯುನೆಯ್ದೆ ಮೊಗೆಯಲ್
ಮೇರುಮಹೀಧರಮೆ ತೋಳ್ಗಳಂ ನೀಡಿದವೊಲ್ ॥ ೫೬

ವ॥ ತದನಂತರಂ

ಪದಪದ್ಮಾಂಜಲಿಸಂಪುಟಂ ಸಮರುಜುಸ್ಥಾನಕ್ಕೆ ಚೆಲ್ವಾಗೆ ವ
ಕ್ತ್ರದೊಳೋಂಕಾರಪುರಸ್ಸರಂ ನೆಗಳೆ ಮಂತ್ರಂ ದೇವತೂರ್ಯಪ್ರಣಾ ।
ದದಿನೆಂಟುಂ ದೆಸೆಗಳ್ಕಿವುಳ್ವಡೆ ಜಿನೇಂದ್ರಂಗಿಂದ್ರರೆಟ್ಟಿರ್ಘ್ಯಮೆ
ತ್ತಿದ ದರ್ಭಾಕ್ಷತಪುಷ್ಪಚಂದನದಳಂ ಭದ್ರಂ ಶುಭಂ ಮಂಗಳಂ ॥ ೫೭

ಮೊದಲೊಳ್ ಸೌಧರ್ಮೇಶಾ
ನದಿವಸ್ಪತಿಗಳ್ ಪೊಣರ್ಚಿದರ್ಚನೆಯೊಳ್ ಪೆ ।
ರ್ಚಿದ ಧೂಪಧೂಮದಿಂ ನೀ
ಲದ ಪರ್ವತಮಾಯ್ತು ಕನಕಪರ್ವತಮನಿತುಂ ॥ ೫೮

ವ॥ ಅನಂತರಮನಂತನಾಥನಿಂ ಸನಾಥಮಾದ ಸಿಂಹಪೀಠೋಭಯಕಕ್ಷನಿಕ್ಷಿಪ್ತಮಣಿವಿಷ್ಟರಂಗಳೊಳ್ ತ್ರಿವಿಷ್ಟಪಾದಿಷ್ಠಾಯಕರಿರ್ಬರುಂ ಕನಕಕಮಲಸೂತ್ರಯಂತ್ರಿತಮುಂ, ಮುಕ್ತಾಫಲಾಕ್ಷತಲಕ್ಷಿತಮುಂ, ಪಾರಿಜಾತಪಲ್ಲವೋಲ್ಲಸಿತಮುಂ, ಸಂತಾನಲತಾಂತಕಾಂತಮುಮಪ್ಪ ಚಂದ್ರಕಾಂತಕಲಶಂಗಳನುತ್ತರದಕ್ಷಿಣಾಭಿಮುಖರಾಗಿ ನಿಟಿಲತಟಘಟಿತಕರಪುಟಪಟಲಸುರಪರಿಷದ್ವಳಯಜಯಜಯಜಯಾಪ್ರಕ್ಷೋಭಮಂತರಿಕ್ಷಮಂ ಪೊತ್ತೆತ್ತುವಿನೆಗಮೆತ್ತಿಕೊಂಡು

ಆದಿವಿಜಾಧಿಪರ್ ಸುರಿವ ಪಂಚಮವಾರ್ಧಿಯ ಪಾಲ್ ವಿಲೋಚನಾ
ಹ್ಲಾದಿ ಮುಸುಂಕೆ ಚಂದ್ರಿಕೆ ಮುಸುಂಕಿದ ಮಾಣಿಕಜೋತಿವೊಲ್ ಸಿತಾಂ ।

ಭೋದಮೆಬಲ್ದ ಮೇರುವಿನ ಗೈರಿಕಶೃಂಗದವೊಲ್ ಸುಧಾಂಶುವಂ
ಭೇದಿಸಿ ನಿಂದ ಮಂಗಳನವೊಲ್ ಮೆಱೆದಂ ಭುವನೈಕಮಂಗಳಂ ॥ ೫೯

ಹರಿನೀಲೋಪಲಕುಭವಮಂಬುದಚಯಂ ಗಂಭೀರಭೇರೀಪ್ರ್ವದಂ
ಗರವಂ ಗರ್ಜಿತಮುದ್ಧಕಂಕಣಮಣಿಪ್ರದ್ಯೋತಿವಿದ್ಯುಲ್ಲತಾ ।
ಪ್ರಕರಮೆಂತಂತಿರೆ ತೀರ್ಥಕೃತ್ಪರಮಸಾರಕ್ಷೇತ್ರದೊಳ್ ಭೋರೆನು
ತ್ತಿರೆ ಪರ್ಜನ್ಯನಿಯೋಜ್ಯಮೇಂ ಕಱೆದುದೋ ಹಸ್ತಂ ಪಯಃಪೂರಮಂ ॥ ೬೦

ನೆರೆದ ಸುರಾಸುರವ್ರಜದ ನೋಡುವ ಕಂಗಳ ಪುಣ್ಯಪುಂಜಮಾ
ವರಿಸಿದುದೆಬ್ದು ಪಾಂಡುಕಶಿಲಾತಳಕಾಂತಿ ಕವಲ್ದು ಮೇಲೆ ಪಂ ।
ಜರಿಸಿದುದಪ್ಪಿಕೊಂಡುದಮೃತಾಂಗನೆಯಕ್ಕಱಳುರ್ಕೆಯೆಂಬಿನಂ
ಸುರಿವ ಪಯಃಪ್ಲವಂ ಮೆಱೆದುದಾಜಿನಪುಂಗವನಂಗವಟ್ಟದೊಳ್ ॥ ೬೧

ಶಿರದೊಳ್ ಸೂಸಿದ ಸೇಸೆಯಂತೆ ಕೊರಲೊಳ್ ಮುಕ್ತಾಫಲಶ್ರೇಣಿಯಂ
ತುರದೊಳ್ ಚಂದನಚರ್ಚೆಯಂತೆ ಕಟಿಯೊಳ್ ತಳ್ತುಟ್ಟ ಬೆಳ್ವಟ್ಟೆಯಂ ।
ತೆರಡುಂ ತೋಳಿಡೆಯೊಳ್ ಮೃಣಾಳವಳಯಶ್ರೀಯಂತೆ ಚೆಲ್ವಾಯ್ತು ಮಂ
ದರಧಾರಾಗತಿಯಿಂ ಜಿನೇಂದ್ರನಭಿಷೇಕಸ್ನಿಗ್ಧದುಗ್ಧಪ್ಲವಂ ॥ ೬೨

ವ॥ ಅಂತುಮಲ್ಲದೆಯುಂ

ಸುರಿವ ಘಟಾಳಿ ತೀವುವ ಘಟಾಳಿ ಮರಳ್ವ ಘಟಾಳಿ ಹಾರಿಯೊ
ಳ್ಪರಿವ ಘಟಾಳಿ ಸಾಗರದ ಮೇರುವಿನಂತರದೊಳ್ ನಿರಂತರಂ ।
ತಿರುಗೆ ಜಿನೇಂದ್ರಮಜ್ಜನವೃಷಾಮೃತದಿಂ ನವರತ್ನಮಾಲೆಯಂ
ತಿರಿಪುವ ಲೀಲೆಯಾದುದಮರೇಂದ್ರರ ಹಸ್ತಸಹಸ್ರಶಾಖೆಗಳ್ ॥ ೬೩

ವ॥ ಆಮಹಾಭಿಷವಣಾನಂತರದೊಳ್

ಪಸುಳೆಗೆ ತಕ್ಕ ಮಜ್ಜನಮಿದಲ್ತು ಪುರಂದರನಷ್ಟಯೋಜನ
ಪ್ರಸರದ ಕುಂಭಕೋಟಿಗಳಿನಂಬುಧಿಯಂ ಬಱಕೆಯ್ದನೆಂದು ಶಂ ।
ಕಿಸುವಮರರ್ಕಳೇಱದ ವಿಮಾನಮೆ ಗಾಳಿಯ ತೂಳದಂತಿರಾ
ಗುಸಿರ್ವುಸಿರಿಂದೆ ನಂಬಿದರಮರ್ತ್ಯರನಂತನನಂತವೀರ್ಯಮಂ॥ ೬೪

ಪದಪದ್ಮಾನತನಾಗಿ ಬಾಪ್ಪೊಡೆನಗೆಂದುಂ ಕಂದುಕುಂದೆಂಬುದಾ
ಗದು ತಾನೆಂದೊಲವಿಂ ನಖಪ್ರಕರಮಂ ಸಾರ್ದಿಂದುವಂ ಪೊರ್ದಿ ನಿಂ ।

ದುದು ಬೆಳ್ದಿಂಗಳ ಪೂರಮೆಂಬ ತೆಱದಿಂ ಶ್ರೀಪಾದಪೀಠೋಪಕಂ
ಠದೊಳೊಪ್ಪಿರ್ದುದನಂತನಾಥನಭಿಷೇಕಸ್ನಿಗ್ಧದುಗ್ಧಪ್ಲವಂ ‖ ೭೫

ವ॥ ಅಂತುಮಲ್ಲದೆಯುಂ

ಘೋರೆಂದು ಸುರಿವ ಸವನ
ಕ್ಷೀರಂ ನಾಲ್ದೆಸೆಯಿನಿಟಿದು ಪರಿದುದು ದಿವಿಜರ್ ।
ಮೇರುಮಹೀಧರಮಲ್ಲದು
ತಾರಮಹೀಧರಮಿದೆಂದು ಪೊಲಗಿಡುವಿನೆಗಂ ‖ ೭೬

ಪಿರಿದು ಪರಕಲಿಸಿ ಮೇರುವ
ನರುಹನ ಮಜ್ಜನಪಯಃಪ್ಲವಂ ಮುಸುಕಲೊಡಂ ।
ಮರನೆನಿತೊಳವನಿತುಂ ಪಾ
ಲ್ಮರನಾದುವು ಧರೆಯೊಳುಂತೆ ಪಾಲ್ಮರನೊಳವೇ ‖ ೭೭

ಮೇಗೆ ನೆಗೆವಮೃತಪೂರದಿ
ನೀಗಳ್ ಬಿಳಿಯಾನೆಯಾದುದೆನಿಸಿದುದು ಬಟಿ ।
ಕ್ಕೇಗೇಳ್ದಪೆ ಕರ್ಮಕ್ಷಯ
ಭಾಗಿಯ ಸುರಕರಿಯ ಪಿರಿಯ ಸಿರಿಯುತ್ಸವಮಂ ‖ ೭೮

ಮುತ್ತಿನ ಲಂಬಣಂ ಪೊಳೆವ ಕುಂಭತಲಕ್ಕೆನೆ ಬಿಂದುಮಾಲೆಯುಂ
ಪೊತ್ತುದು ಪಾಲಧಾರೆಗಳಿನೊಟ್ಟಿದ ಬಾಲಮೃಣಾಳಮೆಂದು ಕೈ ।
ಗುತ್ತಿದುದೆಟ್ಟಿಮಂದರದ ಕಂಧರದುಜ್ಜ್ವಲಫೇನಪಿಂಡಮಂ
[1] ಬಿತ್ತಗೆಮಾಡಿ ಪೊಯ್ದುದುಪಹಸ್ತದಿನಿಂದ್ರನ ಗಂಧಸಿಂಧುರಂ ‖ ೭೯

ವ॥ ಅಂತುಮಲ್ಲದೆ

(ಉತ್ಸಾಹವೃತ್ತ)

ಕಂದರಂಗಳಿಡುವಿನೆಡೆಗಳೊಳ್ ಕವಲ್ತು ನಿಲ್ತು ಘೋ
ರೆಂದು ಪಾಯ್ವ ಪಾಲ ಪೊನಲೆ ನೊರೆಯ ಪಿಂಡಲೊಗೆದುವಾ ।

---

೧. ಬತ್ತಗೆ.

ಮಂದರಂ ತ್ರಿಲೋಕನಾಥನಭಿಷವೋತ್ಸವಕ್ಕೆ ಪೂ
ರ್ಣೇಂದುಮಂಡಲಂಗಳಿಂದಮಿಂಡೆಯಾದಿತೆಂಬಿನಂ ॥ ೭೦

ಮಾಡಿದನಿಂದ್ರನೆನ್ನೊಳಭಿಷೇಕಮನೀಪರಮೇಶ್ವರಂಗೆ ಕೈ
ಗೂಡಿದುದೆನ್ನಭೀಷ್ಟಮೆನುತುಂ ದೆಸೆದೇವತೆಗಳ್ಗೆ ಜೊಂಪಮಿ ।
ಟ್ಬಾಡಿದುದಿಂದ್ರಶೈಲಮೆನೆ ಪಿಂದಿಟಿತಂದುದು ರತ್ನಮೇಖಲಾ
ಲೋಡಿತಫೇನಪುಲ್ಲಪರಿಷರ್ಜಿತಮರ್ಜನನಿರ್ಝರಪ್ಲವಂ ॥ ೭೧

ವ॥ ಮತ್ತಂ ವಿಡೂರರಜಂಗಳ ಕೊಡಂಗಳ ಬಿಷವಿನಿಂ ಘೃತಾಭಿಷೇಕಮನತಿಸಂತೈಸುವಂತೆಯುಂ, ನೊರೆ ತೆರಳಿ ಸುರಿವ ಮೌಕ್ತಿಕಕುಂಭದಿಂದ ಧಿವಸನಮನಧಿಕರಿಸುವಂತೆಯುಂ, ಮಾಣಿಕದ ಕಲಶದ ಶೋಣಾಂಶುಪಟಲದಿಂ ದಿಕ್ಷುರಸಂಗಳಿಂ ಮಿಳಿಸುವಂತೆಯುಂ, ಪುಷ್ಯರಾಗಘಟರಾಗಘಟಿಯಿಂ ಚೂತರಸ ಮಜ್ಜನಮನುಜ್ಜೀವಿಸುವಂತೆಯುಂ, ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಟ ನೀರ ಪೊನಲೊಳ್ ಮುಟುಗಿಸುವಂತೆಯುಂ, ನೀಲದ ಕಡಾರದ ಕಾಲಿಮಕಾಂತಿಯಿಂ ಮಲಯರುಹಜಲಮಿಳಿತಮೃಗಮದಾಭ್ಯಂಗನಮನಂಗೀಕರಿಸುವಂತೆಯುಂ, ನಿರ್ವಾಣಪದಪೀಸಾರ್ವಭೌಮಂಗೆ ಗೀರ್ವಾಣನಾಥರಿರ್ವರುಮಭಿಷೇಕವಿಭವಮನಭಿನಯಿಸುತ್ತಮಿರ್ದು

ತಳಸಾರ್ದುದು ಪಾಲ್ಗಡಲೀ
ಮಳರಹಿತನ ಮಜ್ಜನಕ್ಕೆ ಸಲಿಲಂ ಕಲಿಲಂ ।
ಗಳಿವಾಗವೆಂದು ದೇವ
ರ್ಕಳನಿಂದ್ರಂ ಹಸ್ತಸಂಜ್ಞೆಯಿಂ ಬಾರಿಸಿದಂ ॥ ೭೨

ವ॥ ಆ ಸಮಯದೊಳ್

ತಳ್ದಿಳ್ದಮಾದ ಪಾಲ್ಗಡ
ಲಟ್ಟರೆಯೊಳ್ ಮಸುಳಮಸುಳದೆಸೆದುವು ಮಣಿಗಳ್ ।
ಬೆಳ್ದಿಂಗಳ ಪೊರೆಪೊರೆಯೊಳ
ಗಟ್ಟಟಿಸದೆ ಮಿನಕುತಿರ್ಪ ತಾರಾಳಿಯವೊಲ್ ॥ ೭೩

ಕೆರೆಕೆರೆದು ಪೊಗೆಯೆ ಮಾಣಿಕ
ವರಲೆಲ್ಲಂ ಬೆದಱಿ ಕಾಯ ಬಸಿರಂ ಪುಗುವಂ ।
ತಿರೆ ಪೊಕ್ಕುವು ರತ್ನಘಟೋ
ದರಮಂ ಜಿನಜನ್ಮಸವನಮೇನಚ್ಚರಿಯೋ ॥ ೭೪

ವ॥ ಅಂತುಮಲ್ಲದೆಯುಂ

ಪಂಚಮಜಲಧಿಯ ಪಾಲ್ಮೊಗೆ
ದಂಚಿರಮಾದೊಡೆ ಬಟಿಕ್ಕೆ ತೀರ್ಥಜಲಂಗಳ್ ।
ಪಿಂಚಿದರ್ಗಿಲ್ಲೆಂಬಂತಿರೆ
ಮುಂಚಿದರಲ್ಲಲ್ಲಿ ಪೊಗೆಯಲ್ದಿವಿಜರ್ ॥ ೭೫

ವ॥ ಅಂತು ತಂದು ವೃಂದಾರಕವೃಂದಮುವಟಯಿಸುವಾಗಳ್

ಗಗನಾಸ್ಫಾಟಿಕಕುಂಭಸಂಭೃತ [1] ಸರಸ್ರ್ರೋತಸ್ವಿನೀದಿವ್ಯವಾ
ರಿಗಳಿಂದುದ್ಗತದೇವದೇಹಸುರಭಿಶ್ರೀವಾಸಿತಾಚ್ಛಾಚ್ಛಶೋ ।
ಭೆಗಳಿಂ ನಾಕಜನಾಥರಿರ್ವರುಮಮೂರ್ತಧ್ಯಾನಸಾರಸ್ಯಮಂ
ಜಗದಾತ್ಮಂಗೆ ನಿವೇದಿಪಂತೆಸಗಿದರ್ ಗಂಧೋದಕಸ್ನಾನಮಂ ॥ ೭೬

ಪರಮೌದಾರಿಕದಿವ್ಯದೇಹಸಹಜಾಮೋದಂಗಳಿಂದಂ ಸರೋ
ವರಗಂಗಾದಿನದೀಜಲಕ್ಕೆ ಮೆಱೆದುಂ ಗಂಧೋದಕಾಖ್ಯಾನಮಾ ।
ಸಿರಿಗಂಪಾಘನಸಾರಮಾಸುರಭಿನವ್ಯದ್ರವ್ಯಮೇಕೀಜಗ
ದ್ಗುರುಗಂಧೋದಕವೊಂದೆ ಮುಕ್ತಿರಮೆಯುದ್ವಾಹಕ್ಕೆ ಹಸ್ತೋದಕಂ ॥ ೭೭

ಉಗಿಬಗಿಯಾಗಿ ಬಾಗಿ ಕೊಳಲೆಂದು ಕಡಂಗುವಶೇಷದೇವಕೋ
ಟಿಗಳವಗಾಹಮಿರ್ಪಿನಮನುತ್ತರಸೌರಭಲುಬ್ಧಭೃಂಗಮಾ ।
ಳೆಗಳೊಡವಾಯೆ ಗಂಧಜಲವಾಹಿನಿ ಕಾಬ್ಬುರಮಾದ ಗಂಗೆಯುಂ
ಜಗುನೆಯುಮೆಂಬಿನಂ ಮೆಱೆದುದಾನಗವಾವನಮಾಗೆ ಪಾವನಂ ॥ ೭೮

---

1 ಗ. ದಳ.

ನಾದೇಯವಾಗಿ ದಿವ್ಯಾ
ಮೋದಂ ತಳ್ತೊಯ್ದು ಪೊಂಗೆ ಕಂಪೞಯೆತ್ತಱಿಂ ।
ತಾದುದು ಸುವರ್ಣಗಿರಿ ಗಂ
ಧೋದಕದಿಂ ತ್ರಿಭುವನೈಕಚೂಡಾಮಣಿಯಾ ॥ ೭೯

ವ॥ ತದನಂತರಂ

ದೇವಾಂಗದೆ ದೇವೇಂದ್ರನ
ದೇವಾಂಗನೆ ರತ್ನಮುಕುರಮಂ ತೊಡೆವವೊಲಾ ।
ದೇವಾಂಗಮನೊಲ್ದುಱುಗುವ
ದೇವಾಂಗವಿಭೂಷಣಾಂಶು ಮಾರ್ಪೊಳೆವಿನೆಗಂ ॥ ೮೦

ವ॥ ಅನಂತರಮಭಿಷವಣಮಣಿಸಿಂಹಾಸನದಿಂದಲಂಕರಣವಿಷ್ಟರಮಂ ವಿಷ್ಟಪತ್ರಯಾಲಂಕಾರನಿಂದಮಲಂಕರಿಸಿ

ತೊಡವಿಂಗೆ ತೊಡವು ರತ್ನದ
ಬಿಡುವಿಂಗೆಸೆವೊಪ್ಪಸೞಗೆ ಕಾಂತಿಗೆ ಕೈಗ ।
ನ್ನಡಿ ತೀರ್ಥಕರಕುಮಾರನ
ಬೆಡಂಗು ಬೆಳ್ಮಾಡಿದಪುದಲಂಕರಿಸುವರಂ ॥ ೮೧

ವ॥ ಎಂದಚ್ಚರಿವಟ್ಟು ಮೆಚ್ಚಿ ಪೊಗೞ್ದು ಪರಮೌದಾರಿಕದಿವ್ಯಶರೀರ ಸೌಂದರ್ಯಮನೊಡನೆ ಬಿಡೌಜನಂಗನೆ ಮಂಗಳಪ್ರಸಾಧನಮಂ ಜಗನ್ನಾಥನಿಂ ಸನಾಥಂಮಾಡಿದಾಗಳ್

ಅರಳೆಲೆ ಮಾಂಗಾಯ್ ಕಿವಿಯೊಳ್
ಕೊರಲೊಳ್ ತಳತಳಿಸೆ ಪಾರಿಜಾತಕುಜಾತಂ ।
ಕರದೊಳೆ ಕೈವಂದಂತಿರೆ
ಪರಮನ ಪೊಸಬಾಲಭಾವಮೇನೊಪ್ಪಿದುದೋ ॥ ೮೨

ದುರಿತಮದಗಜದ ಭಿದುವಂ
ಬಿರಿಯಿಱುವುದನಱಿಪುವಂತೆ ಕೇಸರಿನಖರಾಂ ।

ಕುರಘುಸೆದುದು ಕುಲಿಶದಳ
ಸ್ಫುರಿತಂ ಕೊರಲೊಳ್ ಕುಮಾರಕಂಠೀರವನಾ ॥ ೮೩

ಕಡಗದ ಗೆಜ್ಜೆಯ ಕಂಕಣ
ದುಡೆವಣಿಯ ಬೆಡಂಗು ಸಕಲಮಂಗಳವಧು ಕಾ-॥
ಲ್ವಿಡಿದಪ್ಪಿಕೊಂಡು ಕೆಯ್ಯಂ
ಪಿಡಿದವೊಲೆಸೆದುದು ಜಿನಂಗೆ ಮೌಕ್ತಿಕಖಚಿತಂ ॥ ೮೪

ಅತಿಶಯಮೆಂದೂರ್ವಶಿ ರಂ
ಭೆ ತಿಲೋತ್ತಮೆ ಮಂಜುಘೋಷೆ ಮೇನಕೆವೆರಸಾ ।
ರತಿಯೆತ್ತಿದಳಭವನ ದಿ
ವ್ಯತನುಗೆ ಶಚಿ ನೋಡೆ ನೋಡೆ ವಿಸ್ಮಯದಿಂದಂ ॥ ೮೫

ಅಷ್ಟವಿಧಕರ್ಮವೈರಿಯ
ನಷ್ಟವಿಧಾರ್ಚನೆಗಳಿಂದಮರ್ಚಿಸಿ ಭರದಿಂ ।
ಸಾಷ್ಟಾಂಗವೆಱಗಿ ಬಳಿಯುಮ
ಭೀಷ್ಟಸ್ತುತಿಗೆಯ್ವಂ ತ್ರಿಭಂಗಿಭಣಿತೆಯಿನಿಂದ್ರಂ ॥ ೮೬

ವ॥ ಸಮನಂತರಂ

ಅಲರ್ದ ಸರೋಜಷಂಡಮೆಳನೇಸಱನರ್ಥಿಯಿನೆತ್ತಿದಂತೆ ಕ
ಣ್ಮಲರ್ವಿನಮೆಯ್ದೆ [1] ತಣ್ಣಲೆವಿನಂ ನಡೆನೋಡಿ ಕಿರೀಟಲಕ್ಷ್ಮಿಯುಂ ।
ನಲಿನಲಿದಾಡುವಂತೆ ತಲೆದೂಗಿ ನಿಜಾಂಗದೊಳಿಂದಿರಂ ಜಗ
ತ್ತಿಲಕನನಿಟ್ಟು ಮೇರುನಗದಿಂ ತಳರ್ದಂ ವೃಧಿರೂಢಸಿಂಧುರಂ ॥ ೮೭

ಸಾರಣೆಮಾಣ್ದ ವೀಣೆಯವೊಲಾದುದು ಸಂದಣಿ ಪಿಂಗೆ ಪಿಂದೆ ತ
ನ್ಮೇರುಮಹೀಧರಂ ಬರೆದು ಬಚ್ಚಿಸಿದಂತೆಡೆಯೊಳ್ ಪ್ರಯಾಣದಿಂ ।
ಮಾರುತಮಾರ್ಗಮೊಪ್ಪಿದುದು ನೋಡುವ ಕಣ್ಮಲರೆಂಬ ತುಂಬಿಗ
ಳ್ಗಾರಮೆಯಾಯ್ತು ಮುಂದೆ ಪರಮೋತ್ಸವಕಾರಣಮುದ್ಧೃತೋರಣಂ ॥ ೮೮

1 ಕ. ಕಣ್ಣಲರ್ವಿನಂ.

ಪರಮಾರಾಧ್ಯನ ಕಾಯಕಾಂಚನರುಚಿವ್ಯಾಸಕ್ತಿಯಿಂ ಕಣ್ಣ ಮೆ
ಯ್ಸಿರಿ ಪೊಂದಾವರೆ ಪೂತವೊಲ್ ಮೆಱೆವಿನಂ ದೇವಾಂಗನಾಚಾರುಚಾ ।
ಮರವ್ಯಂದೋ[1] ದ್ಧತಮಂದಮಾರುತಚಲದ್ಗಂಧೋದಧಾರಾಳಕಾಂ
ಕುರನೇಟ್ತಂದನಯೋಥೈಗುತ್ಸವದಿನಿಂದ್ರಾಣೀಮನೋವಲ್ಲಭಂ ॥ ೮೯

ವ॥ ಅಂತು ಬಂದಾಪುರಗೋಪುರಾಂತರಾಳದೊಳನೇಕನಾಕನಿಕಾಯಮಂ ನಿಲಿಸಿ ಕಲ್ಪಾಮರೇಂದ್ರಸಮಾಜಂಬೆರಸು ರಾಜಮಂದಿರಮಂ ಪೊಕ್ಕು ಕರುಮಾಡಕ್ಕೆ ಪರಭಾಗಮಾಗೆ ತನ್ನ ಬೆಸದಿಂ ಮುನ್ನಮೆ ಸಮೆದ ಸಾತ್ವಿಕಭಾವದಂತೆ ಸಮುಜ್ಜೃಂಭಿತಸ್ತಂಭಮುಮನರ್ಘ್ಯರತ್ನದಂತೆ ರಂಗರಮಣೀಯಮುಂ, ಗಾಂಧರ್ವದಂತೆ ವಿತಾನವಿಶೇಷಮುಂ, ಶೃಂಗಾರಾಂಗದಂತಿರಾಲಂಬನವಿಡಂಬಮುಂ, ರತ್ನಾಕರದಂತಿರುಪಾಂತಪ್ರವಾಳಮುಂ, ವಿಯತ್ತಲದಂತೆ ಚಿತ್ರಾಭಿರಾಮಮುಂ, ಸೇನಾಪ್ರತನದಂತೆ ಪತ್ರಸಂಕೀರ್ಣಮುಂ, ವಿರಹಿಣೀಹೃದಯದಂತಿರುತ್ಕಲಿಕಾಕಲಿತಮುಂ, ದೇವತೋಪಾಸ್ತಿಯಂತೆ ವಂದನಮಾಲಾಭಿನಂದಿತಮುಮಾದ ಮಣಿಮಂಡಪದ ಮಧ್ಯವೇದಿಕೆಯ ಸಿಂಹಾಸನದೊಳ್ ಜಿನಸಿಂಹಕಿಶೋರಕನನಿರಿಸಿ ಮಾಂಗಳಿಕಪರಿಕರಂಬೆರಸು ತನಗಿದಿರೆಟ್ಟ ಸಿಂಹಸೇನಮಹಾರಾಜನುಮಂ ಜಯಶ್ಯಾಮಾಮಹಾದೇವಿಯುಮನಭಿವಂದಿತಚಾಟುಚಾತುರ್ಯದಿಂ ಸಂತೋಷಂಬಡಿಸಿ ಮಂದರಾಚಳಚೂಳಿಕಾಚರಿತಜನ್ಮಾಭಿಷವಣಕಲ್ಯಾಣಮನವರ್ಗೆ ವಿದಿತಂಮಾಡಿ ಸಿಂಹಾಸನೋಭಯಪಾರ್ಶ್ವಪ್ರದೇಶದೊಳ್ ದೇವಾದಿದೇವಪದರಾಜೀವಸೇವಾವಿಲಾಸದಿನಿರ್ದಲ್ಲಿ

ಪಡೆವಂ ಲೋಕಮನೀಜಗದ್ಗುರು ದಯಾಲೋಕಾಮೃತಾಸಾರದಿಂ
ಕಿಡೆ ಕರ್ಮಾನಿಳನಾ[2] ಜವಂಜವಿಗಳೆಲ್ಲಂ ಸೌಖ್ಯಜನ್ಮಂಗಳಂ ।
ಪಡೆವನ್ನಂ ನೆಗಟ್ದೀಮಹಾಮಹಿಮನಂ ತಾಯ್ತಂದೆವಿರ್ ಪುಣ್ಯದಿಂ
ಪಡೆದಿರ್ ನಿಮ್ಮ ಮಹತ್ವಮಿತ್ರಿಭುವನಪ್ರೋತ್ತಂಸಿಕಾಭೂಷಣಂ ॥ ೯೦

ವ॥ ಎಂದಿಂದ್ರನಭಿವಂದಿಸಲೊಡಂ

ಪರಮಸುಖಾಮೃತಂ ನಯನನಿಮ್ನಗೆಯಂ ಕರೆಗಣ್ಮವಂತಿರು
ಬ್ಬರಿಸೆ ಮುದಶ್ರುಪೂರಮಮರೇಂದ್ರವಚೋಮಲಯಾನಿಲಂ ನವಾಂ ।

---

1 ಗ. ದ್ಗತ.  2 ಕ. ಜಮಾಜವಿ.

ಕು ರಮನೊಡರ್ಚಿದಂತೆ ಪುಲಕಾಂಕುರಮಂ ತನುವಲ್ಲಿ ತಾಳ್ದೆ ಮಾ
ತರಪಿತರರ್ ಕುಮಾರಮುಖದರ್ಶನದಿಂ ಪಡೆದರ್ ಪ್ರಮೋದಮಂ ‖ ೯೧

ವ‖ ಅಗಳ್

ತಾಳದ ವಾದ್ಯದ ನೃತ್ಯದ
ಚಾಳಿಪ ಪಂಚಮದ ಮಂಗಳಾಚಾರದ ಸಂ ।
ಮೇಳದಿನಮೃತಪಯಃಕ
ಲ್ಲೋಳಿನಿಯೊಳ್ ಮುಳುಗಿಸಿತ್ತು ಸುರನರಸಭೆಯಂ ‖ ೯೨

ಗತಿಗೆಪ್ಪಡುವ ಸೊಕ್ಕಿಗಿಕ್ಕಿದಪುದಾಸಂಗೀತಕಂ ದೇವನೂ
ರ್ಜಿತಪುಣ್ಯೋದಯಮೆಂಬುದ [1] ಪ್ರಮಿತವಾತಂ ರಾಗಿ ಮತ್ತಂತರಂ ।
ಗತರಂಗಂ ನೆಲೆವೆರ್ಚಿ ಮಾಣ್ಬನೆ ವಿನೇಯಂ ಕಟ್ಟಿದುಟ್ಟಿಟ್ಟ ದೇ
ವತರಂ ಮಂಡಿಸಿ ಕೊಂಡ ಗೆಜ್ಜೆ ಮಿಗೆ ರಂಗಂಬೊಕ್ಕನಾಖಂಡಲಂ ‖ ೯೩

ಪಿಡಿದ ಜವನಿಕೆಯ ಮಱೆಯೊಳ್
ಕುಡಿಮಿಂಚಿನ ಬಳ್ಳಿಮುಗಿಲ ತೆಣ್ಬೊರೆಯೊಳ್ ಕ ।
ಣ್ಗೆಡಱುವವೊಲ್ ಧರೆ ಪೊಡರ್ವುದು
ತೊಡವಿನ ಬಿಡುವುಂ ಬಿಡೌಜನಂಗಚ್ಛವಿಯುಂ ‖ ೯೪

ತನುಭುಜಭಾವದೊಳ್ ಮೆಱೆಯೆ ರೂಪಿನ ಮೇಗಣ ರೇಖೆ ಡಾಳದೊಳ್
ನನೆಕೊನೆವೋಗೆ ಬಂದು ಕುಸುಮಾಂಜಲಿಯಂ ಬಲವೈರಿ ಸೂಸ ಪೂ ।
ವಿನ ಮಱೆಗಳ್ ಜಿನಾರ್ಭಕನ ಪಾದನಖಚ್ಛಲದಿಂದೆ ನಿಂದು ಚಂ
ದ್ರನ ಬಟಿಸಂದ ತಾರಗೆಯೊಲೋರಗೆಯಾದುವು ನೃತ್ಯರಂಗದೊಳ್ ‖ ೯೫

ಪ್ರಣಯಾಲಂಬ [2] ವಿಧಾನ ನರ್ತನವಿಧಂ ಕರ್ಣಾಮೃತಂ ಘರ್ಘರೀ
ಕ್ವಣಿತಂ ಕೌತುಕಹೇತು ಚಿತ್ರನಟನಂ ಕೈವಾರವಾರಾದಮು ।

---

1 ಕ. ವಿಧಾಯ. 2 ಕ. ಪ್ರತಿಮ.

ಲ್ತಣಕಂ ಗೀತದ ಮಾತಮಾನುಷಮಿದೇಂ ಪಂಚಾಂಗಮೊಪ್ಪಿತ್ತೊ ಪೇ
ರಣಿ ಸಂಕ್ರಂದನನಲ್ಲದಿಲ್ಲೆ ನಿಸಿದತ್ತಾ ತಾಂಡವಾಡಂಬರಂ ॥ ೯೬

ನಯನಾನಂದಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ ಕೂಡೆ ಚಾ
ರಿಯೊಳುಲ್ಲಾಳದ ಬೀಗದೊಳ್ ಕರಣವೈಷಮ್ಯಂಗಳೊಳ್ ದೇವಕಾಂ ।
ತೆಯರಲ್ಲಾಡದೆ ಸಂದ ಸೆಳ್ಳುಗುರ ಸೂಚೀನರ್ತನಂ ಬಾಹುಶೋ
ಭೆಯ ಜಕ್ಕಂದೊಟವಂಶಮಂಡಲದ ಲಾಸ್ಯಂ ತನ್ನ ಮೆಯ್ಯುದ್ಧಮಂ ॥ ೯೭

ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಿ ಲಯಕ್ಕೆ ದಿಗ್ಗಜಂ
ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡ [1] ಮಾಡೆ ತಾಂಡವಾ ।
ನಂದದಿನಾಡುವಲ್ಲಿ ಹರಿ ನೀಡಿದ ತೋಳ್ಗಳೊಳಾಟಿದತ್ತು ಜ
ಕ್ಕಂ [2] ದೊಟಲಭ್ರಮಭ್ರಮರದಿಂದಮರಪ್ರಮದಾಕದಂಬಕಂ ॥ ೯೮

ಅದನೇವೇಳ್ವಪೆನಾಜಿನೇಂದ್ರಮಹಿಮಾವಷ್ಟಂಭಮಂ ಮಾಱು ಲೋ
ಕದೊಳಂ ಪುಟ್ಟಿಲೊಡಂ ಮಹೋತ್ಸವರಸಂ ತಳ್ಳಂಕಗುಟ್ಟಿತ್ತು ತೀ ।
ರ್ದುದು ದುಗ್ಧಾಂಬುಧಿ ಮೇರು ಪೀಠಮೆನೆ ಮಿಂದಂ ಚಿಣ್ಣನಿಂದ್ರಾಣಿ ಪಾ
ಡಿದಳೆಡ್ಡಾಡಿದನಿಂದ್ರನಿಂದ್ರರೆ ಗಡಂ ಕೈವಾರಮಂ ಮಾಡಿದರ್ ॥ ೯೯

ವ॥ ಅಂತು ಲೋಕಾಶ್ಚರ್ಯಮುಮಪೂರ್ವರಸಮಾಧುರ್ಯಮುಮಾಗೆ ವೃತ್ರವೈರಿ ನೃತ್ಯವಿಳಾಸಮಂ ಮೆಱೆದನಂತರಮನಂತದುರಿತವಿಜಯಿಯಪ್ಪುದಱಿನನಂತಜಿತುಮನಂತಚತುಷ್ಟಯಸ್ವರೂಪನಪ್ಪುದಱಿನನಂತನಾಥನುಮೆಂಬ ಪರಮ [3] ವಚನಶ್ರುತಪೂರ್ವಂಗಳಂ ಸಕಲಮಂಗಳಂಗಳಂ ಪೆಸರ್ಗೊಂಡೆತ್ತಿ ಸಲಪುವ ಧಾತ್ರಿನಿಯೋಗಕ್ಕಮರ್ತ್ಯಮಹತ್ತರಿಕೆಯರುಮಂ ಡಿಂಭಕ್ರೀಡಾರಂಭಕ್ಕೆ ತಕ್ಕ ವೃಂದಾರಕರುಮಂ ನಿಯೋಜಿಸಿ ತದೀಯಪಿತೃದ್ವಂದ್ವಮಂ ಪೂಜಿಸಿ

ದಿವಿಜೇಂದ್ರೇಭದ ಬೆಂಗೆ ವಂದು ವಿನಯಪ್ರಾಧಾನ್ಯಮಾನ್ಯೋಕ್ತಿಯಿಂ
ಭವನೇಂದ್ರಾದ್ಯಮರೇಂದ್ರರಂ ಕಳಿಪಿ ಕಲ್ಯಾಣಕ್ರಿಯಾಕಾರಕ ।

---

1 ಕ. ವಾಗೆ. 2 ಗ. ದೊಳವಭ್ರಮಭ್ರಮರಿಯಿಂದ. 3 ಕ. ಪುರುಷರನು.

ಸ್ವವಿವೇಕಂ ಕೃತಕೃತ್ಯಭಾವಮೆರ್ದೆಯೊಳ್ ತಳ್ವೊಯ್ವಿನಂ ಪೊಕ್ಕನು
ತ್ಸವದಿಂ ಬಂದಮರಾವತೀನಗರಮಂ ಸಾಹಿತ್ಯರತ್ನಾಕರಂ ॥ ೧೦೦

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್ ಜನ್ಮಾಭಿಷೇಕವರ್ಣನಂ

ಪಂಚಮಾಶ್ವಾಸಂ

---

# ಷಷ್ಠಾಶ್ವಾಸಂ

ಶ್ರೀ ಧಾತ್ರಿಯಾದವೊಲಮು
ರೀಧಾತ್ರಿಯುರಮ್ಯತರಸದೆ ಬಳೆಯಿಸೆಯುವ್ಯಾ ।
ಬಾಧಂ ಮತಿಶ್ರುತಾವಧಿ
ಬೋಧಂ ಬಳೆದಂ ವಿನೇಯುಜನಮುಖತಿಲಕಂ ॥ ೧

ವದನವನರುಹದ ಪದಪ
ದ್ಮದ ಕರಸರಸಿಜದ ಚೆಲ್ವು [1] ತನುರೋಚಿಃಪೂ ।
ರದೊಳಲರೆ ಪೊನ್ನ ನೀರ್ ತೀ
ವಿದ ಪೂಗೊಳನಂತೆ [2] ಮೆಱೆದನುತ್ತಾನಶಯುಂ ॥ ೨

ಪರಮಪವಿತ್ರನಂ ಪರುಷವೇಧಿಯ ತೊಟ್ಟಿಲೊಳಿಟ್ಟು ನಚ್ಚಿನ
ಚ್ಚರಿಯರನಂಗ ಜೋ ಅನಘ ಜೋ ಮದನದ್ವಿಪಸಿಂಹ ಜೋ ಚರಾ ।
ಚರಪರಮೇಷ್ಠಿ ಜೋ ಭುವನಭೂಷಣ ಜೋ ಜಗದಾತ್ಮ ಜೋ ಜರಾ
ಮರಣವಿದೂರ ಜೋ ಎನುತೆ ಜೋಗುಳುವಂ ಶ್ರುತಿಗೂಡಿ ಪಾಡಿದರ್ ॥ ೩

ಮಾಣಿಕ್ಯದ ತಿಂಗಣಿಯುಂ
ಮಾಣದೆ ಕಣ್ಬೆಳಗು ಬೆಳಗೆ ಮುತ್ತಿನ [3] ಸುತ್ತಂ ।
ಮಾಣಿಕದ ಮೇಲೆ ಮಕ್ಕಳ
ಮಾಣಿಕವಡಿಗಡಿಗೆ ತೊಟ್ಟಿಲೊಳ್ ಪುಟ್ಟಿಸುಗುಂ ॥ ೪

ಪೊಡೆ ಮಗುಪ್ವೆಡೆಯೊಳ್ ಪೊಕ್ಕುಟ
ಕುಡಿ ಸುಟಿಯಿಂ ವಳಿಯಿನೆಸೆದು ತೆಳ್ವೊಡೆ ಕಡುಚೆ ।
ಲ್ವಡೆದುದು ಬೋಧಾಮೃತದೊ
ಳ್ಗಡಲಾನನಶಶಿಯಿನುರ್ಬಿದಂತರ್ಭಕನಾ ॥ ೫

---

1 ಕ. ಚೆಲ್ವ. 2 ಕ. ಗ. ದಂತೆ. 3 ಗ. ಸತ್ತುಂ.

ಪಡೆದ ಪಿತೃದ್ವಯಕ್ಕೆ ಕಡುಸಂತಸಮಂ ಪಡೆಯಲ್ ವಿಬೋಧಮಂ
ಮಡಗಿ ನೆಗಟ್ಟಿ ಮುದ್ದುತನಮಂ ಪರಮೇಶ್ವರನಿತ್ತಲಿತ್ತಲೆಂ ।
ದೊಡೆ ಮೊಗನೋಡಿ ನಕ್ಕನಡರ್ದಂ ಜನನೀಘನಜಂಘೆಯಂ ತೊದ
ಳ್ನುಡಿನುಡಿದಂ ತಳರ್ನಡೆಗಳಂ ನಡೆದಂ ಚಿಟುಕಿಟ್ಟೊಡಾಡಿದಂ ॥ ೭

ಸ್ಮೇರಮುಖಂ ತೀರ್ಥಕರಕು
ಮಾರಂ ಮುದ್ದಾಟದಿಂದಮೆಲ್ಲರ ಕೆಯ್ಗ ।
ಯ್ಗೇರಂತೆ ಬಂದನನಿತುಂ
ತಾರಾಳಿಗೆ ಬರ್ಪ ತರುಣಹರಿಣಾಂಕನವೊಲ್ ॥ ೭

ತೊದಳಿಸದ ತೊದಳ್ ಕೊಂಕಿ
ಲ್ಲದ ದಟ್ಟಡಿ ರಾಗಮಿಲ್ಲದೊಳ್ನಗೆ ಕಿಸುರಿ ।
ಲ್ಲದ ಮುದ್ದಾಟಂ ಮುಳಿಸಿ
ಲ್ಲದ ಕಾಟಂ ಬಾಲಭಾವಮಚ್ಚರಿ ಜಿನನಾ ॥ ೮

ಒಳಗಱಿಯದೆ ತನು ತಾನೆಂ
ಬಳಿಕರೆ ಬಹಿರಾತ್ಮರೆಂದು ನಗುವಂತಿರ್ದಂ ।
ಪಳಿಕಿನ ಭಿತ್ತಿಗಳೊಳ್ ಮಾ
ರ್ಪೊಳೆಪಂ ತಾನೆಂದು ತೆಗೆದು ನಗುವ ಕುಮಾರಂ ॥ ೯

ವ॥ ಅಂತು ಮೆಱೆದು ಕರಣಜಾಳ[1] ಜಾಡಿಕಾರ ಶೈಶವಪ್ರಾವೃಷೇಣ್ಯ ಮೋಸರಿಸಲೊಡಂ ಮತಿಶ್ರುತಾವಧಿಬೋಧಪ್ರದ್ಯೋತನಪ್ರಭಾವದಿಂ ಸಹಪಾಂಸುಕ್ರೀಡಿತರಾದಮರಕುಮಾರರೊಳ್ ಕುಮಾರಶೇಖರಂ ಛಂದೋವಿಚ್ಛಿತ್ತಿಯೊಳ್ ಜಾತಿಷಟ್ಪ್ರತ್ಯಯಾದಿಪ್ರಸ್ತಾರವ್ಯಾಪ್ತಿಯುಮಂ । ಅಲಂಕಾರದೊಳ್ ಶಬ್ದಾರ್ಥ ಜಾತಿದ್ರವ್ಯಕ್ರಿಯಾಗುಣಪ್ರಪಂಚಮುಖಮಂ । ಅಭಿಧಾನಕೋಶದೊಳೇಕಾನೇಕಾರ್ಥಾವ್ಯಯಲಿಂಗಪ್ರಸಂಗಮುಮಂ।ಕಾಮತಂತ್ರದೊಳ್ ನಾಯಕನಾಯಕೀಭೇದ ಭಿನ್ನಕಲಾಕೌಶಲಮುಮಂ । ಭಾರತಿಕವಿದ್ಯೆಯೊಳ್ ತೂರ್ಯತ್ರಿತಯಮಾಧುರ್ಯಮಾನಭಾವಭಂಗಿಯುಮಂ । ನೀತಿಶಾಸ್ತ್ರದೊಳ್ ಧರ್ಮಾರ್ಥಕಾಮೋಪ

1 ಗ. ಝಾಡಿ.

[1] ಲಬ್ಧಿತಾತ್ಪರ್ಯಮುಮಂ ಪ್ರತ್ಯೇಕಮಭಿವ್ಯಂಜನಮುಮಂ ಮಾಱ್ಪನಂತುಮಲ್ಲದೆಯುಂ

ಇದು ಶಬ್ದಾಗಮನಿರ್ಣಯಂ ನಿಗಮಮಿಾಪಾಂಗರ್ಥಶಾಸ್ತ್ರಕ್ಕೆ ಕಾ
ವ್ಯದ ಭೇದಂಗಳಿನಿತ್ತು ನಾಟಕರಸಂ ಭಾವಂಗಳೀಯಂದಮಿಂ ।
ತಿದು ಮರ್ಮಂ ಕಲೆಗಾಗಮಾನ್ವಯಮಿದೆಂಬಾಮ್ನಾಯದಿಂ ದಾರಕ
ತ್ರಿದಶಪ್ರಶ್ನಕರಾಗೆ ತಾಂ ತಿಳಿಪುವಂ ತ್ರಿಜ್ಞಾನರತ್ನಾಕರಂ ॥ ೧೦

ವ॥ ಮತ್ತಂ ಪರ್ಜನ್ಯ ವಿಸರ್ಜಿತ ಮಜ್ಜನಿಕ ನಿಸರ್ಜಿತ ಮರುತ್ತರಂಗಿಣೀಘನರಸಾ [2] ಭ್ಯಂಗನದೊಳಂ। ಸುಮನೋಮಹಾನಸಿಕ ಪರಿಕಲ್ಪಿತ ದೇವಾನ್ನಪಾನ ಸೇವನಾಸಾತತ್ಯದೊಳಂ । ಗೀರ್ವಾಣಕಾಮಿನೀಕರಕಿಸಲಯಾಗತಹರಿಚಂದನಪಂಕಪಾರಿಜಾತಪ್ರಸವದೇವಾಂಗವಸನಸಾರಹಾರಭೂಷಾವಿಶೇಷದೊಳಂ ವೃಂದಾರಕದಾರಕವಿಕ್ರಿಯಾವಿಲಸಿತ ಮಲ್ಲಮೇಷಮಹಿಷಕುಕ್ಕುಟಪಿಂಜಯಾವಕನಿಕಾಯವಿಚಿತ್ರವಿನೋದದೊಳಂ ಪರಿವರ್ಧಿತಕರನಾದ ತಾರುಣ್ಯಪ್ರಾಗ್ಭಾವದೊಳ್

ಪರಮನ ಪೋಲ್ವೆಗೆ ಒರ್ಪಂ
ತಿರೆ ತನ್ನೊಳ್ ಬಾದುಗುಟ್ಟಿ ಸುರಡಿಂಭರ್ ಬಿ ।
ತ್ತರಿಸಿದ ವಿಕ್ರೆಯೆಯೊಳ್ಪಂ
ತಿರೆ ಸಹಜಾತಿಶಯ [3] ದಿಂದೆ ಸೊಬಗಂ ಸೋಲ್ವರ್ ॥ ೧೧

ತಕ್ಕು ತಗುಳ್ದು ಕಾಯ್ದೊಪ್ಪದವೆ ಕೊಕ್ಕಳ ತಳ್ಕಱಿಯಿಂದೆ [4] ಕೆಂಡಮ
ಲ್ಲೊಕ್ಕರೆ ತೇನತೇನವುವತಂಬಿಗುಣಂ ತಿಗುಣಂಗೊಳಲ್ ಮೊಗಂ ।
ಬೊಕ್ಕ ಗಜಂಗಳಂ ನಿಜಭುಜಾರ್ಗಳಮುಗ್ಗಳೆಯಾಗೆ ಸಾರ್ಚಿ ಕೈ
ಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ ॥ ೧೨

ಕಿಚ್ಚು ಕಿಡಿಯಾಗಿ ತಾಗುವ
ಮಚ್ಚರದ ನಿಮೇಷಯುಗಳದ [5] ಕಡುಪುಂ ।

---

1 ಗ. ಲಬ್ಧ. 2 ಗ. ಭ್ಯಂಜನ. 3 ಕ. ದಿಂದಂ ಸೋಮರ್.
4 ಕ. ಕಂಡ. 5 ಕ. ಕಡುಪಿಂ.

ಪೊಚ್ಚಱುಮರ್ಬಿಸೆ ತೊಟ್ಟನೆ
[1] ಪಚ್ಚರ್ಕ್ಕುವನಡ್ಡಮಿಕ್ಕಿ ಕರಕಿಸಲಯಮಂ ॥ ೧೩

ಸರಸಿಜತಂತು ಕಿಂಶುಕದ ಕುಟ್ಮಲವೇಱಿದ ಕೆಯ್ಯೊಳಂಕುಶಂ
ಪೊರಜೆಗಳಾಗೆ ನೀಡಿ ಬಿದುಪಂ ಸುರದಾರಕರಾನೆಯಾದೊ [2] ಡ ।
ಬ್ಬರಣೆ ಮೃಣಾಳವಾರಣೆ ಲತಾವಳಿ ಕುಟ್ಟುವ [3] ನಿಂತಿದಾರ್ಪೊ ಮೇಣ್
ಕರುಣವೊ ದಂತಿಸಾಹಸದೊಳಾನಱಿಯೆಂ ಪೊಗಟಲ್ ಕುಮಾರನಾ ॥ ೧೪

ತೆಗೆಯದೆ ಕಾಯ್ದು ಚಮ್ಮಟಿಗೆಯಿಂ ದನಿಯಿಕ್ಕುವ ಪಾಗೆ ರಾಘೆಯಂ
ಬಿಗಿಯದೆ ಬೀಸಿಬೀಸಿದೊಡೆ ಪಟ್ಟು ಪೊರಳ್ದಡಿ ನಟ್ಟೆವಾಱೆ ಮೆಯ್ ।
ದೆಗೆದೊಡೆ ತಿಟ್ಟವಿಟ್ಟವೊಲೊಡಂಬಡೆ ತೋಱಿಸಿ ಮೆಚ್ಚ ದಾರಕರ್
ಬಗೆ ಹಯಮಾದವೊಲ್ ಒಟಿಕೆ ಮೆಚ್ಚಿಸುವರ್ ಲುಳಿಯೊಳ್ ಕುಮಾರನಾ ॥ ೧೫

ವ॥ ಅದಲ್ಲದೆಯುಂ

ಪರಮೌದಾರಿಕದೇಹಜಾತಿಶಯಮಿರ್ಪ್ಪೈದುಂತು ನಿಸ್ವೇದಸೀ
ಕರನಾಕ್ಷೀರಸಿತಾಸ್ರುಜಂ ಕುಲಿಶನಾರಾಚಾದಿನಿರ್ಭೇದ್ಯನು ।
ದ್ಧುರವೀರ್ಯಂ ವಿಮಲಂ ಸುಲಕ್ಷಣಯುತಂ ಸೌಗಂಧಿಕಂ ಮೋಹನಾ
ಕರನಾದಂ ಪಿತೃಶತ್ರುಲೋಕಹಿತಭಾಷಂ ದೇವಚಂದ್ರಾಧಿಪಂ ॥ ೧೬

ವ॥ ಅದಲ್ಲದೆಯುಂ

ಇದು ಸಂದೇಹಮೆ ದೇಹದೊಳ್ ಚರಮದೇಹಂಗುಂಟು ಶೀತಕ್ಕೆ ಕೋ
ಡದ ವಾತಕ್ಕಲುಗಾಡದಾತಪದ ಕೋಳಿಂ ಕಾಯದುಗ್ರಾಗ್ನಿ ಪ ।
ತ್ತಿದೊಡಂ ಬೇಯದ ಕಂಟಕಾಮಯಸಮೂಹಂ ತೋಱದೊಂಭತ್ತು ಭೇ
ದದ ನಂಜೂಱದ ಮುಪ್ಪುಬಾರದ ಯುವತ್ವಂ ತೀರದುತ್ಕರ್ಷಣಂ ॥ ೧೭

ವಿದಲಿತಪುಷ್ಪಸೌರಭದಿನಚ್ಯುತಕಲ್ಪದ ಶುಕ್ಲಲೇಸ್ಯೆ ಲೆ
ಪ್ಪದ ಕರು ವಜ್ರದಂಡದ ಬಲಂ ಪೊಳೆಪುದ್ಗತ ತಿಗ್ಮರೋಚಿ ಬ ।

---

1 ಕ. ಪೊರ್ಚು. 2 ಕ. ಡಗ್ಗರಣೆ. 3 ಕ. ಲಂತಿಪರ್ಪಂ....ಕರುಣಮ್ಮೊ

ಣ್ಣದ ರುಚಿ ಮಿಂಚುಮಿಂಚು ಪೆಱಕಣ್ದಿಱವಾಗಿರೆ ಮೂವತಬ್ದಲ
ಕ್ಷದ ಪರಮಾಯುವೊಲ್ದ ರಸಚಿತ್ರದವೊಲ್ ಮೆಱೆವಂ ಕುಮಾರಕಂ ॥ ೧೮

ಪಡೆದರೊ ಪುಷ್ಯರಾಗ [1] ದಳದಿಂ ಕಡೆಯಾಣಿಯ ಪೊನ್ನ ಘಟ್ಟಿಯಿಂ
ಕಡೆದರೊ ಬಾಲಭಾನುಕರದಿಂ ಕರುವಿಟ್ಟರೊ ಬಳ್ಳಿಮಿಂಚಿನೊ ।
ಳ್ಗುಡಿಯನೆ ಕೊಂಡು ಕಂಡರಣೆಗೆಯ್ದರೊ ಪೇಟನೆ ಕಣ್ಗೊಳುಳ್ಕಿ ಕೈ
ವಿಡಿವುದು ಚಿತ್ತಮಂ ನುತಶತಾರ್ಧಧನುಸ್ತನು ಶಾಂತಿಕಾಂತನಾ ॥ ೧೯

ತರುಣೀಲೋಕಾವಲೋಕಭ್ರಮಿತಮಧುಕರಂ ಬಂಧುಗೋತ್ರಾನುರಾಗಾ
ಕರಲೀಲಾಪಲ್ಲವಂ ಮಾತರಪಿತರಹೃದಾನಂದಮಂದಸ್ಮಿತಪ್ರ ।
ಸ್ಫುರಿತಪ್ರತ್ಯುದ್ಗಮಂ ಜವ್ವನದ ಜಸೆಗದೇಂ ಬಂದನೋ ಪಾರಿಜಾತಾಂ
ಕುರಮಿಂದ್ರೋದ್ಯಾನದೊಳ್ ಬಳ್ವಳಮೆ ಬಳೆದು ಕೈವಂದವೊಲ್ ತೀರ್ಥನಾಥಂ॥

ನನೆಯುಂಬಗ್ಗಳಿಗೋಯೆ ಮೆಲ್ಲೆರ್ದೆಗಳಂ ಕಣ್ಬೇಟದೊಳ್ ಬೆಂದು ಪೂ
ವಿನ ಪಾಸಿಂ ತಳಿರ್ವಾಸುಗಳ್ಗೆ ತಳಿರ್ವಾಸಿಂದೆತ್ತಿ ನೀರ್ವಾಸುಗ ।
ಳ್ಗಿನಿತುಂ ಪಾಸಂಗಳಿಂದೆ ತಣ್ಬಸಲೆಗಾಳೀಜಾಲವೊಯ್ದಿಕ್ಕೆ ಕಾ
ಮಿನಿಯರ್ ಕೂಡೆ [2] ಪೊರಳ್ವರೀಕ್ಷಿಸಲೊಡಂ ಸಾಹಿತ್ಯಸರ್ವಜ್ಞನಂ ॥ ೨೧

ವನಿತಾವಶ್ಯಾಂಜನಂ ಹೃತ್ಕುಮುದನಯನನೀರೇಜನೀಮೋಹನಂ ಕೋ
ರನ ರೂಪೀರೂಪೆ ಸಾಲ್ಗುಂ ಜಗಮುನೆಱುಗಿಸಲ್ ವ್ಯರ್ಥಮಿಾಕೈದುವೆಂದಾ ।
ತನಗಿನ್ನೆಂತೆಂದೊ ಮೇಣಾನಱಿಯೆನಭವನಾಕಾರಮಂ ಕಾಣ್ಬುದುಂ ಕ
ಬ್ಬಿನ ಬಿಲ್ಲಂ ಪೂವಿನಂಬಂ ರತಿಯ ವದನಮಂ ನೋಡಿ ಸುಯ್ಯುಂ ಮನೋಜಂ॥

ವ॥ ಅಂತು ನಗೆಗಳ ಕೂರ್ಪುಮಂ, ಕಬ್ಬಿನ ಬಿಲ್ಲ ಪೊಡರ್ಪುಮಂ, ಮಲಯ ಮಾರುತನ ಬೆಂಬಲಮುಮಂ, ಚೈತ್ರಮಿತ್ರನ ಮುಂಬಲಮುಮಂ, ಮಕರಕೇತನದ ಪೆಂಪುಮಂ, ರತಿಯ ಸೋಂಕಿನ ಸೊಂಪುಮಂ, ದರ್ಪಕನ ದರ್ಪಂಬೆರಸೆಱಕುಳಿಗೊಂಡು ಗಂಡೇಱಿದ ಗಂಡಗಾಡಿ ರೂಡಿವಡೆಯೆ ತೀವಿದ ತಿಂಗಳ ಬೆಳಗಿನೊಳಗೆ ತೇಂಕುವ ರಾಕಾಶಶಾಂಕನಂತೆ ಶಾಂತನುಂ, ನಿರ್ವಿಕಾರನುಂ, ನಿರೀಹಿ

1 ಗ. ಚಯದಿಂ. 2 ಕ. ಪೊಗಳ್ವರೀ.

ತನುಂ, ನಿರ್ಮಲನುಮಾಗಿ ಲೋಕಾಪಲೋಕನಂಗಳ ಪುಣ್ಯಪುಂಜವೆನಿಸಿ ರಂಜಿಸುವ ಕುಮಾರನಾಕಾರಮಂ ನೋಡಿ

ಬಳೆದಂ ಜವ್ವನಮಾಯ್ತು ಪೋಯ್ತೆಳವೆಯೊಳ್ ಸಪ್ತಾರ್ಧಲಕ್ಷಾಬ್ದಮಂ
ಗುಳಿಷಂಗಂ ಕುಲಕನ್ಯಕಾಜನದೊಳಾಗಲ್ವೇಳ್ಕು ಮುಂತಿಲ್ಲ ಮ ।
ತ್ಕುಳನಿಸ್ತಾರಮಿದಕ್ಕೊಡಂಬಡಿಪೊಡೀತಂ ವೀತರಾಗಂ ವಿನಿ
ಶ್ಚಳನೆಂಬಂತನಿತಾಯ್ತು ಸಿಂಹನರನಾಥಂಗಂ ಜಯಶ್ಯಾಮೆಗಂ ॥ ೨೩

ವ॥ ಅಂತಲ್ಲದೊಡಂ

ಜಿನನಂ ಸೋಲಿಪ ಪೆಂಡಿರಾರ್ ಪರಮನಂ ತೋಳ್ಸುತ್ತಿನೊಳ್ ಕಾವ ಕಾ
ಮಿನಿಯಾರ್ ದೇವರ ದೇವನಂಕತಲದೊಳ್ ಮಾದೇವಿಯಾಗೊಪ್ಪುವಂ ।
ಗನೆಯಾರ್ ಕೇಳ್ದಡೆಯಿಲ್ಲ ಕಂಡ ಕುಱುಪಿಲ್ಲಂತಪ್ಪ ಪೆಣ್ಣಂ ಕುಮಾ
ರನೊಡಂಬಟ್ಟೊಡಮೆಂದ ಭೂಪತಿಗದೋರ್ವಂ ಸೈನಿಕಾಗ್ರೇಸರಂ ॥ ೨೪

ವ॥ ಸಿಂಹಾಸನತುಳಾತು [1] ಳಿತಮಾದ ಭದ್ರಾಸನದೊಳಿರ್ದ ಭದ್ರಬಳನೆಂಬಂಸಂಘಟಿತಕರಪಲ್ಲವನಾಗಳಿಂತೆಂದಂ:--

ದೇವನ ಜಾತೋತ್ಸವದೊಳ್
ತಾವೆಲ್ಲಂ ಬಂದರಂದು ಕಿಱುಗೂಸು ಭವ ।
ದ್ದೇವರನ ಕೀರ್ತಿಶೇಖರ
ದೇವನ ಸುತೆ ರತ್ನಮಾಲೆ ದೇವರುಮಱಿವಿರ್ ॥ ೨೫

ದೇವರ ಬೆಸದಿಂ ಶೇಖರ
ದೇವನ ದಿಗ್ಜಯಕೆ ಪಡಿಬಲಂ ನಡೆದಿದರ್ಾ ।
ನೀವಧುವಂ ಕಂಡೆಂ ದೇವರ
ದೇವನ ಮಾದೇವಿಯಾಗಲಾಕೆಯೆ ತಕ್ಕಳ್ ॥ ೨೬

ಕಣ್ಗಳ ಬೆಳ್ಪಿಂಗಳಕದ
ನುಣ್ಗರ್ಪಿಂಗಧರದಲದ ಕೆಂಪಿಂಗಾವಂ ।

1 ಕ. ಗ. ತುಳೊ.

ಕಾಣ್ಗೆಮ ಕಂಡ ಬೞಿಕ್ಕೆ ಪೆ
ಱಿಣ್ಗೇವುದೆ ರತ್ನಮಾಲೆವೆಸರೆನ್ನದಿರಂ ॥ ೨೭

ಸುರನರಖಚರೋರಗಸುಂ
ದರಿಯುಗರ್ತರುಣಿಯುಂಗಲತಿಕೆಯ ಲಾವ ।
ಣ್ಯರಸಪ್ರವಾಹಲವಮುಂ
ದೊರೆಕೊಳ್ವೊಡೆ ನಿನ್ನ ಪಾದದಾಣಿಡಲಮ್ಮೆಂ ॥ ೨೮

ತೀವಿದ ಯೌವನಭರಮುಂ
ಲಾವಣ್ಯರಸಂ ತುೞುಂಕೆ ನಯಮುಳಿಬಳಿವೊಂ ।
ದಾವುದುವೆಳವೆಳ್ದಿಂಗಳ
ಭಾವಿಸಿದ ಸುಧಾಂಶುಕೇಳಿಯುಂ ಮಱೆಯಿಸಿದಳ್ ॥ ೨೯

[1] ಮಱೆದರೊ ಮೇಣಂಬಿಕೆಯರು
ಪುಱಿದೆನ್ನಯ ಬಿನ್ನಪಕ್ಕೆ ಮನ್ನಿಸಿ ದಯೆಯಿಂ ।
ತೆಱಪಂ ಕೊಟ್ಟರೊ ಮೇಣೆಂ
ದಱಿಯೆಂ ತಾಮಱಿಯೆ ಚೆಲ್ವೆ ಕನ್ಯಾರತ್ನಂ ॥ ೩೦

ವ॥ ಎಂದು ಜಗಜ್ಜನನಿಯುಮಿತನುಳ್ಳುದನೆ ನುಡಿದೊನಾದೊಡಮಾಕನ್ನೆಗೀವರ್ಣನಮನಿಪ್ಪನ್ನ ವಾಸ್ತವಮಾಪದಾರ್ಥಮುಂ ತಾವಕೀನಮಿನ್ನುತ್ತರಮಿಲ್ಲುತ್ತರೋತ್ತರಂಮಾೞ್ಪುದೆನಲೊಡಂ ಭೂವಲ್ಲಭಂ ನಿರತಿಶಯಾನುರಾಗನಿರ್ಭರಚಿತ್ತಂ ನಿಶ್ಚಿತಾಲೋಚನನಾಗಿ

ದೇವಿಯರ ವಂಶಮೆಂಬುದು
ಯೌವನರತ್ನಕ್ಕೆ ರೋಹಣಾಚಲಮಿದು ಸಂ ।
ಭಾವಿತಮೇನುಂಗುರದೊಳ್
ಕೇವಣಿಸಿದ ರತ್ನಮಾಯ್ತು ಚಿಂತಾರತ್ನಂ ॥ ೩೧

ವ॥ ಎಂದು ಕೀರ್ತಿಶೇಖರಧರಾರಮಣಂಗೆ ಹಸ್ತಾರ್ಕನಂತೆ ಕನ್ಯಾಸಮನ್ವಿತಂ ಬರ್ಪಂತು ಬೞಿಯಟ್ಟಿ ನಿಜವಲ್ಲಭೆವೆರಸು ಕುಮಾರಶೇಖರನಿರ್ದ ವಿಲಾ

---

1 ಕ. ಮಾತೃಕೆಯಲ್ಲಿ ಇಲ್ಲ.

ಸಭವನಕ್ಕೆ ಬಂದು ತಮ್ಮ ಒರವಿಂಗೆ ತದಾತ್ವಿಕಪ್ರಸಂಗಮಂ ಪರಿಹರಿಸಿದರ್ ಪರಮೇಶ್ವರನ ಮೃಗೇಶ್ವರಾಸನೋಪಾಂತಕಾಂತಕನಕಮಣಿಪೀಠಮನಲಂಕರಿಸಿ ತತ್ಸಮಯಸಮುಚಿತಾನುನಯಭಾವಂ ಸಂಭಾವನೆವಡೆಯೆ ಮೆಲ್ಲನೆ ಪೊರ್ದಿ ಸಿಂಹಸೇನಮಹಾರಾಜಂ ದೇವರಾಜಾರಾಧ್ಯಂಗಿಂತೆಂದಂ :—

ಇದು ರತ್ನಾಕರಮೆಂಬ ಪೆಂಪುದಧಿಗಾಯ್ತು ತ್ಯುಜ್ಜ್ವಲಾನರ್ಘ್ಯರ
ತ್ನದ ರೂಢೋದಯದಿಂಬೆ ನಿನ್ನುದಯದಿಂಬೆಮ್ಮೊಳ್ ಜಗದ್ಭಾಗ್ಯರವಂ ।
ವಿದಿತಂ ತಾನೆನಿಸಿತ್ತು ಸಲ್ಗೆ ನುಡಿಯಲ್ವೇಟ್ಟತ್ತಿದಂ ವಿಶ್ವಲೋ
ಕದಯಾವಲ್ಲಭ ಕೇಳ್ದು ಮನ್ನಿಸು ಮದೀಯಸ್ವಾಂತಿಕೋದಂತಮಂ ॥ ೩೨

ವಿಮಲಾಧೀಶ್ವರ [1] ಧರ್ಮಸಂತತಿಲತಾವ್ಯುತ್ಸೇಧಮಾದಲ್ಲಿ ಧ
ರ್ಮಮುಖಂಗಳದು ದೇವ ನಿನ್ನುದಯದಿಂದೀಲೋಕಮಿಕ್ಷ್ವಾಕುವಂ ।
ಶಮುಮಾದಿಪ್ರಭುವಿಂದಮಿಂದುವರೆಗಂ ಸಂದಿರ್ದುದೀ ಕ್ಷಾತ್ರಧ
ರ್ಮಮುಮಂ ಧರ್ಮಮುಮಂ ಸಮುದ್ಧರಿಸು ನೀಂ ತ್ರೈಲೋಕ್ಯಚೂಡಾಮಣೀ ॥

ಅದುಕಾರಣದಿಂ ಮಾಡುವ
ಮದುವೆಗೊಡಂಬಡುವುದೆಮ್ಮ ನೋಡುವ ಕಣ್ಗಂ ।
ಪದೆವ ಮನಕ್ಕಂ ಮಾಟ್ಪುದು
ಮುದಮಂ ಧರೆಗುಭಯಭವಹಿತಂ ಪ್ರಭುಚರಿತಾ ॥ ೩೪

ವ॥ ಅಂತು ಬಿನ್ನವಿಸಲೊಡಮನಂತನಾಥನಂತರ್ಗತದೊಳಿಂತೆಂದಂ :—

ತವಿಸಲ್ವೇಟ್ಟುದು ಜನ್ಮ
ಕ್ಕವಶಿಷ್ಟಾನಿಷ್ಟಯೋಗಮಂ ಭವಿತವ್ಯಂ ।
ಭವತಿ ಎನಿಪ್ಪುದು ದಿಟಮಿಂ
ದಿವರ ದುರಾಗ್ರಹಮನಿಂತು ಮನ್ನಿಸಿ [2] ಕಳೆವೆಂ ॥ ೩೫

ವ॥ ಎಂದು

ಪರಿಭಾವಿಸೆ ಬಟಿಯುಂ ದೇ
ವರ ದೇವನ ಮೊಗದೊಳೊಗೆಯೆ ನಗೆಯ ಮುಗುಳ್ ಕ ।

---

1 ಗ. ತೀರ್ಥ. 2 ಕ. ಕಳೆವೆಂ.

ಙ್ಬರಿ ನೆಲಸೆ ಕೆಟ್ಟುದೇನಂ
ದರಲೆ ಬೆರಲ್ ತಿಳಿದರಭವನನುಮತಿಯನವರ್ ॥ ೩೬

ವ॥ ಅಂತು ತಿಳಿದ ಮಾತಾಪಿತರ ಮನದ ಕೊನೆಯೊಳನುರಾಗಘಟ್ಟಿ ಕೆಯಿಂ ಗುಡಿಗಟ್ಟಿದ ಸಮನಂತರಂ

ಅಮರೇಂದ್ರಂಗಮರೀಮಹತ್ತರಿಯರಿಂ ಪೇೞ್ದಟ್ಟಿ ವೈವಾಹಿಕೋ
ದ್ಯಮಮಂ ತಾಂ ಮಯವಿಶ್ವಕರ್ಮಸಹಿತಂ ದೇವೇಂದ್ರನಿಂದ್ರಾಣಿ ದಿ ।
ವ್ಯಮನೋಹಾರಣಿಯರ್ ಸಮಂತು ಬರೆ ಬಂದೊಡ್ಡೈಸಿದರ್ ನೇತ್ರಹಾ
ರಿಮನಃಕೌತುಕಮಪ್ಪಿನಂ ಜಗತಿಜಾತೋದ್ವಾಹಮಂ ಗೇಹಮಂ ॥ ೩೭

ವ॥ ಅದಲ್ಲದೆಯುಮಿತ್ತಲ್

ಅಂತಟ್ಟಿ ರಾಯಭಾರಿ ದಿ
ನಾಂತರಮೆಡಗೆಯ್ಯದೆಯ್ದಿ ಪದ್ಮಪುರಕ್ಕಾ ।
ಸಂತಸದ ಪರಮಸೀಮೋ
ದಂತಮನೋಲಗದೊಳವನಿಪತಿಗಱಿಪಲೊಡಂ ॥ ೩೮

ಪರಮಶರೀರನಾಪರಮನಂಬುಜನಂಬುವಿನಲ್ಲಿ ಪುಟ್ಟಿಯುಂ
ಪೊರೆಯದವೊಲ್ ಭವಾನುಭವಸೌಖ್ಯಪರಾಙ್ಮುಖನೆಂತು ಮಾಟ್ಕುಮೆಂ ।
ದರಸಿಯುಮಾಪ್ತರುಂ ಕೆಳೆಯರುಂ ಪರಿವಾರಮುಮುಳ್ಕಿ ಕೀರ್ತಿಶೇ
ಖರನಿದನೆಂದನೆಲ್ಲರ ಮನಸ್ತಮಮಂ ದಶನಾಂಶು ಗೆಲ್ವಿನಂ ॥ ೩೯

ಜಿನನಾಥಂ ತೊರರದಿಂದೆ ದೀಕ್ಷೊಗೊಳಲೀಪೋ ಕೆಟ್ಟೆನಾಂ ತೀರ್ಥನಾ
ಥನ ಕೆಯ್ಯಂ ಪಿಡಿವೊಂದು ಪುಣ್ಯಮಿಟಿದತ್ತೇಕಕ್ಷಣಂ ದೇವದೇ ।
ವನ ಮಾದೇವಿಯೆನಿಪ್ಪ ಪೆಂಪು ಕಿಱಿದಲ್ತೀವೈಭಕ್ಕೆನ್ನ ನಂ
ದನೆ ನೋಂತಳ್ ನಡೆನೋೞ್ಪ ಭಾಗ್ಯಮೆನಗಾಯ್ತಾಪಾವನೋದ್ವಾಹಮಂ ॥೪೦

ಎಂದು ತಱಿಸಂದು ತನ್ನಯ
ನಂದನೆಯೊಡವರೆ ಸಮಸ್ತರಾಜನ್ಯಕಮೋ ।
ಬ್ತಂದಂ ಸಿರಿಯೊಡವರ್ಪರ
ವಿಂದಾಕರನಂತಯೋಧ್ಯೆಗುತ್ಸವದಿಂದಂ ೪೧

ವ॥ ಅನ್ನೆಗ ಮುನ್ನ ಸಮೆದ ವಿವಾಹಗೇಹಂ ದೆಸೆದೆಸೆಯೊಳೆಸೆವ ಕಸೆಯುವಟ್ಟಿಗಳ ವಂದನಮಾಲೆಗಳ ಕೆಂದಳಿರ ಗೊಂದಣಮೆಂಬ ಹಸ್ತವಿನ್ಯಾಸದೊಳಂ। ಮುತ್ತಿನ ಲಂಬಣದ ನೀಲದ ಬುಂಭುಕದ ಮೇಳಾಪಕಮೆಂಬ ಲೋಲಲೋಚನ ವಿಕಾಸವಿಲಾಸದೊಳಂ । ಪವಳದ ಕಂಬದ ಮರಕತದ ಮದ್ದಳೆಗಳ [1] ಬಳುಪಳಿಕೆಯೆಂಬ ನಳಿತೋಳ ಕೊಂಬಿನ ಬಿಂಕದೊಳಂ । ಮಂಗಳಾಚಾರಗೀತಾತೋದ್ಯ ಲಯಮಾನಂಗಳಿಂ ತ್ರಿಭುವನಾಭರಣಶೋಭಾವನಕ್ಕಾನೆ ಸೊವತವಾದೆನೆಂದು ನಲಿದು ನಾಟಕಮಾಡುವಂತಿರ್ದುದು. ಮತ್ತಂ ಚತುರ್ಭದ್ರಪಾದ ಭದ್ರಶಾಲೆಗಳ ಕೋಣವಿತಾನದ ಮಾಣಿಕ್ಯದೂಡಲ ಸಂಚಂಮೆಱೆವ ಚುಂಚುಲೋವೆಯು ದಳವಿಲಸನದೊಳಂ । ಕನ್ನಡಿಯು ಕಲಶದ ಬಣ್ಣವುರದಾರತಿಗಳೆಡೆಗೆಡೆಗೆಡಿಸಿದ ಪಂಚರತ್ನದ ಕದಿರ ಪೊದಱೊಳ್ ಪುದುಂಗೊಳಿಸಿ ನೆಗೆವ ಜಾಗದ ಪಡಲಿಗೆಗಳ ಅಗೆಯ ತುಱುಗಲಿಂ ಕೇಸರದ ದೇಸೆಯನಪ್ಪುಕೆಯ್ವ ಮಧ್ಯವೇದೀಕರ್ಣಿಕಾಸಮುನ್ನತಿಯೊಳಂ । ಸರ್ವತೋಭದ್ರಪ್ರಾಸಾದಂಗಳುಮಾನಂದರಸದಿಂದಮಲರ್ದಂತಿರ್ದುದು. ಮತ್ತಂ ಸಾರಣೆಯ ಕಾರುಳಿಯ ರಂಗವಲಯ ಪೂವಲಿಯ ಕೇಸರದೊಳ್ ಸಂದಣಿಗೊಳ್ವಮರರನುಣಿಯರ ಕಾಲ್ದುಡುಗೆಯ ರವದ ಸಡಗರದೊಳಂ । ನಮೇರುಮಂದಾರಪಾರಿಜಾತಪ್ರಸೂನಮಾಲಾಜಾಲದ ಕದಂಬಗಂಪಿನ ಪೊಂಪುಳಿಯೊಳಮನಂತನಾಥನ ಬೆಂಬಿಡಿದು ಬಂದಚ್ಯುತಕಲ್ಪದ ಪುಷ್ಪೋತ್ತರವಿಮಾನಮನವನಿತಲಕ್ಕವತರಿಸಿದಂತಿರ್ದುದು ಅಂತುಮಲ್ಲದೆಯುಂ

ಕಡುಚೆಲ್ವಿನ ಮಂಡಪಮಂ
ನಡೆನೋಡಲ್ ಬಂದು ಬಾಗಿಲೊಳ್ ಪುತ್ತಳಿಯಂ ।
ಪತಿಯುಱತಿಯರೆಂದರೆಬರ್
ನುಡಿಯಿಸೆ ನುಡಿಯದೊಡೆ ನಾಣ್ಚಿ ನೆಲನಂ ನೋೞ್ಪರ್ ॥ ೪೨

ಎಱಿಕೆಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಳ್ಕೆವಾಱೆ ಬಂ
ದೆಱಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕಿಸಾರವುಂ ।
ಕಿಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟಿಯುಂ ಪಿಕಂ
ನಿಱುದಳಿರ್ಗೆತ್ತು ಲಂಬಣದ ಮುತ್ತುಗಳಂ ಮಱೆಗೆತ್ತು ಚಾತಕಂ ॥ ೪೩

1 ಕ. ಬಳುಕು.

ಅದಟಿ ವಿತಾನಚೀನರಸಚಿತ್ರಕದಂಬಮಿಂದ್ರನೀಲರ
ತ್ನದ ನೆಲಗಟ್ಟಿನೊಳ್ ಮೆಱೆದು ಮಾರ್ಪೊಳೆಯುತ್ತಿರೆ ಕಂಡು ಕುಂತಲಂ ।
ಕೆದಱೆ ಕುಚಂ ಕದಕ್ಕದಿಸೆ ತೆಕ್ಕೆ ನಿತಂಬಮಿದೊಂದು ದೂಳಿಚಿ
ತ್ರದ ಖಣಮೆಂದು ಮೈಯ್ಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್॥ ೪೪

ಕಳಶದ ಮೇಲೆ ಕನ್ನಡಿ ತಗುಳ್ಚಿ ಕೆಲಂಬಿಡಿದಿರ್ದ ವೇದಿಕಾ
ವಿಳಸಿತಮಂಡಪಂ ಸ್ಫಟಿಕಭಿತ್ತಿಯೊಳಚ್ಚೞಿದಂತೆ ತೋಱೆ ಪೊಂ ।
ಗಳಸದ ಬಾಯ್ಗೆ ತಂದು ತಳಿರಂ ಮಣಿವೇದಿಕೆಗೆತ್ತು ಭಿತ್ತಿಯಂ
ಬಳಸಿ ಮಹತ್ತರಾಮರಿಯರಂ ನಗಿಪರ್ ಕೆಲರಲ್ಲಿ ಮುಗ್ಧೆಯರ್ ॥ ೪೫

ಅನಿಮಿಷವಧು ಕತ್ತುರಿಗದ
ಡಿನ ಚಳಯಂಗೊಟ್ಟಳಲ್ಲಿ ಸೆಳ್ಳುಗುರ್ಗಳ ತೆ ।
ಳ್ಪನೆ ತಿಳಿದ ಕಾಂತಿ ಕುಸುಮಿಸು
ವಿನೆಗಂ ಕಡೆಗಣ್ಣ ಕಾಂತಿ ಧವಳಿಸುವಿನೆಗಂ ॥ ೪೬

ತಾರೆಗಳಂ ತತ್ತಿಗಳಂ
ಕಾರಿರುಳೊಳ್ ಕಱೆವ ಗಗನಲಕ್ಷ್ಮಿಯೊಲೊರ್ವಳ್ ।
ಸೌರಾಂಗನೆ ಹರಿನೀಲದ
ಕೇರೊಳ್ ಚಂದನದ ಬಿಂದುಮಾಲೆಯನಿಟ್ಟಳ್ ॥ ೪೭

ಮಂಗಳಕೇತುವಿರಾಜಿತ
ಮಂಗೀಕೃತನೀಲಭಾನು [1] ತಮಸಂ ಪರಿಷ ।
ತ್ಸಂಗತಬುಧಗುರುಕವಿರಾ
ಜಂಗತಿನವಗ್ರಹಪರೀತ [2] ಮುದ್ವಾಹಗೃಹಂ ॥ ೪೮

ವ॥ ಅಂತು ಪರಿಣತವಿಲಾಸಮಾದ ಪರಿಣಯನಭವನಭದ್ರಶಾಲಾಭ್ಯಂತ ರ್ವಲಯುಜಮಂಗಳಮಂಡನಮಂಡಪಂಗಳೊಳಿಂದ್ರಾಣಿಯುಮಿಂದ್ರಮಹತ್ತರಿ ಯರುಮಿತ್ತ ರತ್ನಮಾಲೆಯುಮನತ್ತಲಮರೇಂದ್ರನುಮಖಿಲದಿಕ್ಪಾಲರುಮಚ್ಚರಸಿ ಯರುಮನಂತನಾಥನುಮನಾಶ್ಚರ್ಯಮಳಂಕೆಗೊಳ್ವಿನಮಳಂಕರಿಸಿದಾಗಳ್

1 ಗ. ತಮಸು. 2 ಕ, ದು.

ಉರದೊಳ್ ಸಂತತಮಿರ್ಪ ಲಕ್ಷ್ಮಿಯ ಮುಖಸ್ಮೇರಪ್ರಭಾಪೂರದಿಂ
ತಿರೆ ಹಾರಂ ಭುಜದೊಳ್ ಜಯಾಂಗನೆಯ ಗಾಢಾಶ್ಲಿಷ್ಟವೈಚಿತ್ರ್ಯದಿಂ ।
ತಿರೆ ಕೇಯೂರಕವಾಸ್ಯದೊಳ್ ನಲಿವ ವಾಣೀಕೇಕರಾಲೋಕದಿಂ
ತಿರೆ ಕರ್ಣಾಭರಣಂ ಬೆಡಂಗಮದುರ್ದಾಕಲ್ಪಂ ಜಗನ್ನಾಥನಾ ॥ ೪೯

ಪದದೊದವೆ ವೀರಸಿರಿಯ
ಪ್ಪಿದ ತೋಳ್ಸುತ್ತೆನಿಪ ರನ್ನವಟ್ಟೆಯ ರುಕ್ಪಂ ।
ಜದ ಮಂಜರಿವೊಲ್ ರಂಜಿಸಿ
ದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ ॥ ೫೦

ವ॥ ಮತ್ತಮುತ್ತಂಸಾವತಂಸಗ್ರೈವೇಯಕಾಲಂಬನಾಂಗದಕೇಯೂರ ಹಾರಕಂಕಣಕಟಿಸೂತ್ರನೂತ್ನರತ್ನರಶ್ಮಿಸಂಕರಮೆಂಬ ಚಿತ್ರಭಿತ್ತಿ ಪರಭಾಗಂ ಬಡೆಯೆ ಕಡೆಯಿಕ್ಕಿದನೆನಿಪ್ಪ ದೇಸೆಯ ವಿಲಾಸಮಾಸರಮಾಗೆ

ಗಗನಾಭಾಗಕ್ಕೆ ಪೀತಾಂಬರವೆಸೆವನಿತಾನೇಂದ್ರಬಾಣಾಸನಂ ಸು
ತ್ತೊತ್ತಗೆದಂತಾಯ್ತಾಜಗನ್ನಾಥನ ಪಿರಿಯುರದೊಳ್ ಸಂಧಿಸಿರ್ದಿಂದಿರಾಕಾಂ ।
ತೆಗುಡಲ್ ಪೊಂಬಟ್ಟೆಯಂ ಬಿರ್ಚಿದ ರುಚಿ ಮಿಗೆ ಜಂಭಾರಿ ತಂದಿಕ್ಕಿದಾಜಾ
ನುಗಮಿಂದ್ರಚ್ಛಂದಹಾರಂ ಮರಕತಮಯಮಾಲೀಢದಂಭೋಳಿಜಾಳಂ ॥ ೫೧

ವ॥ ಅನ್ನೆಗಮಿತ್ತಲ್

ನಯನಾನಂದದ ಜಾಣ್ಮೊದಲ್ ಹೃದಯರಾಗಕ್ಕಾಗರಂ ಕಾಮತ
ನ್ತ್ರಿಯ [1] ನವ್ಯಾಭಿನಯಾಂಗಮೆಂಬ ಕೃತಕಂ ಕೈಗೊಳ್ವಿನಂ ರತ್ನಮಾ ।
ಲೆಯನಿಂದ್ರಾಣಿಯುಮಿಂದ್ರವಾರವನಿತಾಸಂದೋಹಮುಂ ಮಂಡನ
ಕ್ರಿಯೆ [2] ಯಂ ಮಂಡನಲಕ್ಷ್ಮಿ ರಾಗಿಸುವವೊಲ್ ಕೈಗೈದು ಕೈಗೈಸಿದರ್ ॥ ೫೨

ಮದನನ ಮಂತ್ರದೇವತೆಯೆ ಮುತ್ತಿನ ಪುತ್ತಳಿ ಚಂದ್ರಲೇಖೆ [3] ಯಂ
ಪದವಱಿದೊಪ್ಪವಿಟ್ಟುದೆನೆ ಪಾಂಗಮದಿರ್ಕ್ಕಿದ ಪುಂಜವೊಳ್ಪು ಪೂ ।
ಸಿದ ಹರಿಚಂದನಂ ಮುಡಿದ ಮಲ್ಲಿಗೆ ಕಟ್ಟಿದ ಹಾರಮುಟ್ಟ ಕಾ
ಮುದಿಯ ಕಡಲ್ನೊಲಾದ ದುಗುಲಂ ಬಗೆಗೊಂಡುದು ತಲ್ಲತಾಂಗಿಯಾ ॥ ೫೩

---

1 ಕ. ನವ್ಯಾಭಿನಿಯೋಗಿ. 2 ಗ. ಯಿಂ 3 ಗ. ಯಿಂ.

ವ॥ ಅಂತುನ್ಮದನಮದನಮೋಹನಸಾಯಕಂ ಕಂತುವಿನ ಕೈಗೈದು .. ಮಂಗಳಾತೋದ್ಯವಾದ್ಯನಿರ್ಘೋಷಂ ಪುಣ್ಯಪಾಠಕರ ಮಾಂಗಳಿಕಪಠನಪಟುರವಂಬೆರಸು ದುಂದುಭಿಗಭೀರಧೀರಧ್ವಾನದೊಳ್ ಮುಬ್ಬುಂಕಿ ತೇಂಕುವಿನಂ ಪ್ರಾಗ್ದಿಶಾಸನಸಮಭ್ಯುದಿತಸಹಸ್ರಕರನುಂ ಪ್ರತೀಚೀದಿಶಾಸನಸಮುದ್ಭೂತನೂತನಸುಧಾಂಶುಲೇಖಾಲಕ್ಷ್ಮಿಯುಂ ನಡೆತರ್ಪಂತೆ

ಪಾಸಿದ ದಳಿಂಬಮುಗುರ್ಗಳ
ಕೇಸಡಿಗಳ ಚರಣಭೂಷಣಂಗಳ ರುಚಿಯಿಂ ।
ದಾಸಣಿಸಿ ಚಿತ್ರಪಟಮಂ
ಪಾಸಿದವೊಲಿರೆ ವಧೂವರರ್ ನಡೆತಂದರ್ ॥ ೫೪

ವ॥ ಬಂದು ಸಮಭ್ಯರ್ಚಿತಾಷ್ಟಮಂಗಲಕಲಾಪಮುಮಾಲಂಬಿತಭೃಂಗಾರಕಲಶದರ್ಪಣಸ್ವಸ್ತಿಕವಿಸ್ತಾರಮುಂ ಚತುರ್ಭದ್ರಾಭಿಮುಖನೀಲಮಣಿಸೋಪಾನಪಙ್ತಿಕಾಂತಮುಮಾದ ವೇದಿಕಾಮಧ್ಯದೊಳ್

ಪೊಂಬಟ್ಟೆಯ [1] ಬೋರೆಯದೊಳ್
ತುಂಬಿದ ಬಿಡುಮುತ್ತಿನಕ್ಕಿಯಂ ಮೆಟ್ಟಿರ್ದಂ ।
ದೇಂ ಬಗೆವುಗಿಸಿದುದೋ ಹೇ
ಮಾಂಬುಜದ ಮರಾಳಮಿಥುನಮಂ ತನುಮಿಥುನಂ ॥ ೫೫

ವ॥ ಅಂತು ನಿಲಲೊಡಂ ಸಕಲಜನದ ಕಳಕಳಮಂ ನಿಲಿಸಿ ಶುಭಮುಹೂರ್ತಪ್ರಸ್ತಾವನೋನ್ಮುಖರಾಗಿರ್ದಾಗಳ್

ಕಿವಿವೇಟಮನಿಱುಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ ।
ಯುವತಿಯ ಕಣ್ಣುಂ ಮನಮುಂ
ಜವನಿಕೆಯುಂ ಕನ್ನಮಿಕ್ಕಲ [2] ದಹಡಿಸಿದುದೋ ॥ ೫೬

ವ॥ ಸಮನಂತರಂ

1 ಕ. ಬೋರಿಯು. 2 ಗ. ಡಹ.

ಪರಮಾರಾಧ್ಯ ಜಗತ್ರಯಾಧಿಪತಿಯ್ಯೆ ನೀಂ ನಿನ್ನದಲ್ತನ್ಯಮಾ
ಧರೆಯೊಳ್ ನೋಡುವೊಡಾವುದೆತ್ತೆನೆನಲಾಸಾರೆಂದು ನಿಂದಟ್ಟುಜಿಂ ।
ತರುಣೀರತ್ನಮನೊಪ್ಪುಗೊಟ್ಟು ಜಲಧಾರಾರೇಖೆಯಿಂ ಕೀರ್ತಿಶೇ
ಖರರಾಜಂ ಪಡೆದಂ ಜಿನೇಂದ್ರಪದಪಂಕೇಜಕ್ಕೆ ವಾನರ್ಾಳಮಂ ॥ ೫೭

ವ॥ ಅನಂತರಮನಂತನಾಥಂ ಕಲ್ಪಲತೆಯೊಳ್ಪುವಡೆದ ಪಾರಿಜಾತಂ ಸೈಕತ ದೊಳೆಸೆವಂತೆ ದುಗುಲದಿಂ ಪಾಸಿದ ಪಟ್ಟವಣೆಯ ಪಸೆಯನಲಂಕರಿಸೆ ಸಿಂಹಸೇನ ಮಹಾರಾಜಂಬೆರಸು ಮುಂದೆ ನಿಂದು

ಇನನುದಯಮಪ್ಪಿನಂ ಚಂ
ದ್ರನ ಕೆಲನಂ ನಭದ ಬೆಳಕಮಲ್ತೆಲ್ತು ಧರಾ ।
ವನಮಿನ್ನಿನ್ನುದಯಾಮೃತ
ದೆ ನಿಮಿರ್ಚೆ ಜಗಜ್ಜನಾಭಿಲಾಷಾಲತೆಯಂ ॥ ೫೮

ವ॥ ಎಂದು ಪರಮೇಶ್ವರಂಗಿದಂ ನುಡಿಯುತ್ತುಮಿಟ್ಟ ಮಕುಟದ ಕಟ್ಟಿದ ಬಾಸಿಗದ ದೆಸೆಗಧಿಷ್ಠಾನಮುಂ ಕಟ್ಟುವಂತೆ ಭಾಳಪಟ್ಟದೊಳ್ ಸಾಮ್ರಾಜ್ಯಪಟ್ಟಮಂ ನಿಟ್ಟೆಗೊಳಿಸಿದಿಂಬಳಿಕ್ಕೆ

ಬಲಗೊಂಡಾನತನಪ್ಪವೋಲ್ ಹುತವಹಂ ದೇವಾಧಿದೇವಂಗೆ ತ
ನ್ನೊಲವಿಂ ಜ್ವಾಲೆಯನಾನುಲೋಮವಿಧಿಯಿಂ ಪ್ರತ್ಯಾನತಂಮಾಟ್ಟಿನಂ ।
ಬಲದಿಂದಂ ಬರೆ ವಾಮೆ ವಾಮದೆಡೆಗೇಂ ಶ್ರೇತಾನಳವ್ಯಾಜದಿಂ
ಬಲಗೊಂಡಂ ಪರಮಾರ್ಥವೇದವಿದುರಂ ರತ್ನತ್ರಯಾಲಂಕೃತಂ ॥ ೫೯

ವ॥ ಆ ಸಮಯದೊಳ್

ಇನಿಯನನೆಯ್ದೆ ಸಮ್ಮುಖದೊಳೀಕ್ಷಿಸಲಣ್ಮದೆ ಮುಗ್ಧೆ ಪಾರ್ಶ್ವಯಾ
ಯಿನಿ ತೆಱಪಾಗೆ ನೋಟ್ಟಿ ನಯನೇಂದ್ರಿಯದೊಳ್ ಸಕಲೇಂದ್ರಿಯಂಗಳಂ ।
ಕೊನೆವೆರಲಂ [1] ತಡಂಗಲಿಸಿದಂಗುಲಿಯೊಳ್ ಸಕಲಾಂಗಮಂ ಸಲಿ
ಪ್ಪನಿತುವರಂ ಕಡಂಗಿ ಕರೆಗಣ್ಮಿದಳುಣ್ಮಿದ ಘರ್ಮವಾರಿ [2] ಯಿಂ ॥ ೬೦

ವ॥ ಅಂತುಮಲ್ಲದೆಯುಂ

---

1 ಕ. ಗ. ತಡಂಗುಲಿಸಿ.   2 ಕ. ಯಂ.

ಪರಮಾರಾಧ್ಯನ ಸಂಭವಾಭಿಷವದೊಳ್ ನಾವಿರ್ವರುಂ ಭೂರಿಭೂ
ಧರಮಂ [1] ಮುಂ ಬಲಗೊಂಡ ಪಾಂಗಸಿಟಿಸಲ್ ಸಾಲ್ದಪ್ಪುದಿಂತೀವಧೂ ।
ವರರಿಂದೀಮುಖವಹ್ನಿಯಂ ಬಲದೆಗೊಳ್ವೈಶ್ವರ್ಯಮೆಂದೊರ್ವರೋ
ರ್ವ್ವರ ವಕ್ತ್ರಾಬ್ಜಮನಾಪುಲೋಮಜೆಯುಮಾದೇವೇಂದ್ರನುಂ ನೋಡಿದರ್ ॥ ೬೧

ಪರಿಷದ್ರಾಜಕದಂಬಮಂಬರವಿಭೂಷಾಶ್ಚರ್ಯಸೌಂದರ್ಯದಿಂ
ಪಿರಿದುಂ ಭೇದಿಸಲಾರ್ತುದಿಲ್ಲಱಿದುದಾಗಳ್ ವೇದಿಕಾಭ್ಯರ್ಣದೊಳ್ ।
ಸುರಕಾಂತಾವಲಿಗೀವ ಬಾಯಿನದೆ ಕೈವಾಗಿಂದಮಿಂದ್ರಾಣಿಯುಂ
ನರನಾರೀತತಿಗೀವ ಬಾಯಿನದೆ [2] ಕೈವಾಗಿಂ ಜಯಶ್ಯಾಮೆಯುಂ ॥ ೬೨

ಸವಿಲಾಸಂ ಮೆಱೆದತ್ತು ಬಾಜಿಸುವ ಮಾಂಗಲ್ಯಾನಕಂ ಮಾಣದೆ
ತ್ತುವ ನೀರಾಜನಮೋದುವಕ್ಷರಿಕವೃಂದಕ್ಕಂ ಮೊಗಂನೋಡದಿ ।
ಕ್ಕುವ ಚಾಗಂ ಕರೆದೀವ ಬಾಯಿನಮಲಂಪಿಂ ಮಾಟ್ಪ ದಾನಂ ತೆರ
ಳ್ಟುವ ದೇವೇಂದ್ರನರೇಂದ್ರಹೇಮಮಣಿಭೂಷಾಚ್ಛಾದಪಾದಾರ್ಚನಂ ॥ ೬೩

ಅಂತು ಪರಿಪೂರ್ಣವೈಭವ
ಸಂತಸದಿಂ ರತ್ನಮಾಲೆ ಪೇರುರದೊಳ್ ಚೆ ।
ಲ್ವಂ ತಳೆಯೆ ಸೋಲ್ತು ಪೊರ್ದಿದ
ನಂತೇಶ್ವರನಾಥನುಂ ಸ್ವಯಂವರ [3] ನಾದಂ ॥ ೬೪

ಅರಸಂ ಮನ್ನಿಸೆ ರತ್ನಮಾಲೆ ಮಹಿಷೀಸಂಪತ್ಸಭಾಶಾಲೆ ರಾ
ಗರಸಾಂಭೋಧಿತರಂಗಮಾಲೆ ಹೃದಯಾಲೋಕದ್ವಯಿಾಲೀಲೆ ಪೇ ।
ರುರದೊಳ್ ಲಕ್ಷ್ಮಿಗೆ ತೋಳೊಳಗ್ಗದ ಜಯಶ್ರೀಗಾಸ್ಯದೊಳ್ ವಾಣಿಗು
ರ್ವರೆಯೊಳ್ ರಾಜ್ಯರಮಾನಿತಂಬಿನಿಗೆ ತಾಂ ಪೆತ್ತಳ್ ಸಪತ್ನೀತ್ವಮಂ ॥ ೬೫

ವ॥ ಅಂತು ರಾಜವಲ್ಲಭಾಕರಿಣಿಗಂ ಮನೋವಲ್ಲಭಾಕರೇಣುಗಂ ಜೋಳಿ ಗಟ್ಟಿನಾಲಾನಸ್ತಂಭವಾದ ಭುವನಮೂಲಸ್ತಂಭನಭೂರಿಭುಜಶಾಖೆಗಳಂ ಜನಾನುರಾಗದಿಂ ಪಲ್ಲವಿಸಿ ಕೀರ್ತಿಪ್ರಸರದಿಂ ಕುಸುಮಿಸಿ ಸನ್ಮಾನದಾನದಿಂ ಫಲಿತಮಾಗಿ ವಿಶ್ವಂಭರಾವಲಯಮುಮಂ ಶೀತಲಚ್ಛಾಯಾಚ್ಛನ್ನಮಾಗಿ ಮಾಡಲೊಡಂ

1 ಕ. ಮುಂಬರಿ. 2 ಕ. ಕೈವಾರಿಂ 3 ಕ. ನಾಥಂ.

ಪದವಷೆಯಾದುದಿಲ್ಲಿಯನಿತುಂ ಲಯುವಾದುದಕೃಷ್ಟಪಚ್ಯವಾ
ದುದು ಧರೆ ರತ್ನಹೇಮಖನಿಯಾದುದು ಗಾವಳಿ ಕಲ್ಪವೃಕ್ಷಮಾ ।
ದುದು ತರುಷಂಡಮೋಷಧಿ ರಸಾಯನಮಾದುದೇಂ ನೃಪಾಲಮಾ
ತ್ರದ ನವರಾಜ್ಯಮೆ ಪರಮದ್ವೈವತರಾಜ್ಯಮುದಕ್ಕಿದೊಪ್ಪದೇ ॥ ೬೬

ಚರರಿಂ ಹೇರಿಗರಿಂ ಸ್ವಕೀಯಪರಕೀಯಪ್ರಾಜ್ಯಮಂ ರಾಜ್ಯಮುಂ
ಪರಿಕಿಪ್ಪಂತುಟೆ ತನ್ನದೇಶಜನವಾಪ್ತಂ ಸ್ವಾಮಿಯೆಂದಟ್ಕಱಿಂ ।
ದರಿಭೂಪರ್ ಮದಮಂ ಬಿಸುಟ್ಟು ಪರಮಾರಾಧ್ಯಂ ಜಗದ್ಬಂಧುವೆಂ
ದಿರೆ ಭೂಕಾಂತೆಯನಂತರಂಗಬಹಿರಂಗಾರಕ್ತೆಯಂ ಮಾಡಿದಂ ॥ ೬೭

ಅವಿನೀತರ್ಗುರ್ಱಿಸೆ ಕಾಯ್ವ ನಿಗ್ರಹಮಲಂಪಿಂದಂ ವಿನೀತರ್ಗೆ ಮಾ
ಡುವ ತಾತ್ಪರ್ಯದನುಗ್ರಹಂ ನೃಪನೊಳೆಲ್ಲಂತಾದೊಡಂ ಭೂತಳೋ ।
ತ್ಸವಮಾತಂಗತಿಶೀತಮಾವ ನೆವದಿಂ ಕೂರ್ತಪ್ಪುದರ್ಕಂಗೆ ಪ
ದ್ಮವನಂ ಶೀತಕರಂಗೆ ಕೈರವವನಂ ಚೈತ್ರಂಗೆ ಲೀಲಾವನಂ ॥ ೬೮

ವ॥ ಅಂತು ಸಕಲಜನಾನಂದಮಾದ ರಾಜ್ಯಲೀಲೆಯಿಂ [1] ಸ್ವಾರಾಜ್ಯ ಪೂಜ್ಯಾರಾಧ್ಯನಿರೆ

ಪರಮಂ ಸಾಮ್ರಾಜ್ಯರಾಜ್ಯಪ್ರಮುದೆಗೆ ಮೊಗಮಿತ್ತಿರ್ದನಾರ್ಹಂತ್ಯಲಕ್ಷ್ಮೀ
ಪರಮೈಶ್ವರ್ಯಕ್ಕೆ ಪೊಕ್ಕಿಂಬಟಿಕೆ ಬಗೆವರಾರೆನ್ನನೆಂದಾತ್ರಿಲೋಕೀ ।
ಗುರುಪಾದಾಂಭೋಜಸೇವಾಸಮಯಮಱಿದು ಬರ್ಪಂತೆ ಬಂದಂ ಮದೋದ್ಯ
ತ್ಪರಪುಷ್ಪಪ್ರಾತಿಹಾರ್ಯಪ್ರಕಟಿತಗಮನೋದ್ಯಾನಕಾಂತಂ ವಸಂತಂ ॥ ೬೯

ವ॥ ಅಂತು ಬಂದ ಬಸಂತಸಮಯದೊಳ್ ಪಿರಿಯಂಗೆ ಕರುವೆನಿಪ ಕರುಮಾಡಕ್ಕಪರಭಾಗಮಾದ ವಲ್ಲಭವನದ ನಟ್ಟನಡುವಣ ಕಾದಂಬಿನೀಮಂಡನಮೆಂಬ ದಿಗವಲೋಕನಪ್ರಾಸಾದಮಧ್ಯಭೂಮಿಕಾವೇದಿಕೆಯೊಳ್ ನಗೆಯುತನಗಳ ಸೌಸವದ ಕಬ್ಬಿಗರ ಕಲಾವತಿಯರ ನರ್ಮಸಚಿವರ ಪರಮಪ್ರಾಸಾದಿತರ ಸುರಭಿಸಮಯೋತ್ಕರ್ಷಚತುರವಚನರರಚನಾಪ್ರಸನ್ನಮೆಸೆವಪರಿಮಿತಾಸ್ಥಾಯಿಕೆಯೊಳ್

1 ಕ. ಸ್ವಾರಾಧ್ಯ.

ರತ್ನಮಾಲಾಮಹಾದೇವಿಯ ವಾಮೇತರಪಯೋಧರಸ್ಪರ್ಶಹರ್ಷಪುಲಕಿತಮಾದ ತನ್ನವಿಶಾಲವಕ್ಷಸ್ಥಳಮನಂಗರಾಗಾಮೃತದೆ ಬಳಿದು ನಳನಳಿಸುವ ಸುಖದ ಹರಿವರಿಯುಪ್ಪಿನೆಗಮಾಪಟ್ಟದೇವಿಯ ಮೃಗಮದಚಿತ್ರಿತಮಕರಿಕಾಪತ್ರಕಪೋಲಪಟ್ಟಮೆಂಬ ಮೃಗಾಂಕಮಂಡಲಮಯೂಖಮಾಲೆಯೊಳ್ ತನ್ನನಯನಾಂಚಲಚಕೋರಪಾನೋನ್ಮಾದನಟನವಿನೋದಮಂ ಸಡಳಮೆಸೆವಿನೆಗಮಾಶುದ್ಧಾಂತಮಾಲಾಮೌಳಿಮಂಡನೆಯ ದಕ್ಷಿಣಬಾಹುಶಾಖಾವಲಂಬನದಿಂ ತನ್ನ ರೇಖಾಭಿರಾಮಕಂದರಕಾಂಡಪೂಗತರುನಿಗರಣಂ ನಾಗಲತಾಧಿರೋಹಣಂಬಡೆವಿನೆಗಮಾಮಹಾಗ್ರಮಹಿಷೀಭಾಳಲಲಾಮೆಯ ತರುಣಹರಿಣೀಭಂಗುರಾಪಾಂಗಸುಧಾಮರೀಚಿರೋಚಿಃಕಳಿಕೆಯಿಂ ತನ್ನ ದರಹಾಸಪೇಶಲಸಿತಕಾಂತೋಪಲಂ ಪಾರ್ದೈಸಿ ಪಸರಿಸಿ ನೀರೇಱುವಿನೆಗಮಾಚಿತ್ತಾಭಿರಾಮೆಯ ವಾಮಕರಾಂಗುಲಿಕೋರಕಾನ್ವಿತತಾಂಬೂಲದಳವೀಳಿಕಾಖಂಡಮೃಣಾಳಶಕಲಮಂ ತನ್ನದಂತಪಙ್ತಿಕಲಹಂಸಕಲಭವೆಱಕದಿನೆಳಸಿ ಕಬಳಂಗೊಳ್ವಿನೆಗಮಾಪ್ರಾಣವಲ್ಲಭೆಯ ಲಲಾಟಪಟ್ಟದೊಳ್ ಚಾಮರದ ಕೋಮಲಪವನಪರಿಯಟದಿಂ ಪರಿಪಾಟಿದಪ್ಪ ಸುಳಿಗುರುಳೆಂಬ ತುಂಬಿಯ ಬಂಬಲಂ ತನ್ನ ಬೆಳ್ವೆಳಗನುಗುಳ್ವ ಸೆಳ್ಳುಗುರೆಂಬ ಪೊಂಗೇದಗೆಯ ಕುತ್ತುಂಗಱಗಳ್ ಪತ್ತೆಸಾರ್ಚಿ ಪಂತಿಗೊಳಿಸುವಿನೆಗಮಾಚರಾಚರಪರಮವಲ್ಲಭಂ ಕಣ್ಗಳಂಗಳಕ್ಕೆ ಬಿರ್ದುವಂದುದ್ಯಾನ ಲಕ್ಷ್ಮಿಯನಾದರಿಸುತ್ತುಮಿರ್ದನಾಸಮಯದೊಳ್

ಅಳವಡೆ ತೊಟ್ಟ ಪೂದುಡಿಗೆ ಕಟ್ಟಿದ ಬಲ್ಮುಗುಳ್ವೆಂಡೆಯಂ ಪದಂ
ಗೊಳಿಸುವ ನಾಯಿಕಾಪ್ರತತಿ ಬಂದುದು ವಾರವಿಲಾಸಿನೀಜನಂ ।
ಮಳಯಮರುನ್ಮದೋಚ್ಚಳಿತಮಂಗಳಕೇಸರವಾಸಚೂರ್ಣಮಂ
ಜುಳಲತೆಗೊಂದಳಂ ಮಣಿಯೆ ಪಾಡುವ ಚೌಪದಿ [1] ಯೆಡ್ಡತಾಣದೊಳ್ ॥ ೭೦

ವ॥ ಅಂತು ಬಂದು ಸಭಾಶಿರಸ್ಸರೋಜಾಂದೋಳಮಂ ನೆಗಟ್ಟುವ ಹಿಂದೋಳರಾಗದಿಂ ವಸಂತಸಮಯದೊಳುಲ್ಲಸಿತಜಾತಿಯಾದ ಚತುಃಪದಿಚ್ಛಂದದೊಳ್ ಪಾಡೆ ಚತುರಚತುರ್ಮುಖನ ಜಡುವ ವಾರಸುಂದರೀವೃಂದದೊಳಗೆ ಪರಿಮಳೆಯುಂ ಭ್ರಮರಿಕೆಯುಮೆಂಬ ಮೇಳದ ವಿಳಾಸಿನಿಯರ್ ಪಾದಪೀಠೋಪಕಂಠಕ್ಕೆವಂದು ತಮ್ಮವಿರಚಿಸಿದ ಕೈವಂದ ಮಾಕಂದದಂತಿಶುಕವಿನೂತ ಮುಕ್ತಕಂಗಳೊಳಗೆ

1 ಕ. ಯಡ್ಡ.

ಪದದೊಳ್ ಛಾಯೆಗಳೋರಣಂಬಡೆಯೆ ವಾಕ್ಯಾರ್ಥಕ್ಕೆ ಪಕ್ಕಾಗೆ ರಾ
ಗದ ಮಾಧುರ್ಯಮನುಕ್ರಿಯಾಂಗುಳಿವಿಲಾಸಂ ಭಾವಮಂ ತಾಳ್ದಿ ಕ ।
ಬ್ಬದ ನಿರ್ವಾಹದ ಮೇಲೆ ಬೈಸಿಕೆ ಬೆಡಂಗಂ ಬೀಱೆ ನಿಂದೊರ್ವಳೋ
ದಿದಳಾಂದೋಳದೆ ಪಲ್ಲವಾಧರೆ ವಸಂತೋತ್ಪದ್ಯಮಂ ಗದ್ಯಮಂ ॥ ೭೧

ವ॥ ಅದೆಂತೆನೆ

ನನೆದೋಱಿತ್ತು ದಿಗ್ಗಂತಿ ಮುಂತೆ ಪನೆಗಳ್ ತೋರ್ಪಂತೆ ತೆಂಗಾಳಿ ಕೆಂ
ಗೊನರೊಳ್ ದಟ್ಟಡಿಯಿಟ್ಟುದೊಳ್ನಗೆ ಪೊದಟ್ದತ್ತು ಬ್ಜದೊಳ್ ಕೋಕಿಲಂ ।
ಕೊನರಂ ಕರ್ಚಿ ತೊದಳ್ ಸರಂಗೆಡೆದುದೆತ್ತಂ ನಂದನಶ್ರೀಯ ನಂ
ದನನಾನಂದನನನ್ಯಜಂಗಣುಗನಾಯ್ತಂತೀವಸಂತಾಗಮಂ ॥ ೭೨

ಉಗುರೊತ್ತಿಂ ಸೋರ್ವಸೊರ್ಕಂಗೊನರ ಸೊನೆಗೆಯೇವೈಸಿಬಾಯ್ಬಾರೆಯುನ್ಮಾ
ಳ್ದುಗೆ ಮುಟ್ಟುತ್ತೀಂಟಿ ಬಾಯಂ ತೆಱೆದು ಪರಭೃತಂ ಕಾಯ್ದು[1] ಕಿಟ್ಕೊಂಬಿನೊಳ್ಕೈ ।
ಮಿಗೆ ಪೊಕ್ಕುರ್ವೇಡೆ ತುಪ್ಪುಟ್ ಮಡಗೆದಱಿ ಕುಳಿರ್ಪೋಪುಗಿಲ್ ಪೋಪುಗಿಲ್ ಪೋ
ಪುಗಿಲೆಂದಿಮ್ಮಾವಿನೊಳ್ ತಣ್ಮಲೆದುದುಲಿದು ತನ್ನಿಚ್ಚೆಯಿಂದನ್ಯಪುಷ್ಟಂ ॥ ೭೩

ತಿಳಿಪಲ್ ವಾಸಂತಿಯಂ ಸಂದಿಸೆ ಪುಗಿಲೆನೆ ಪುಂಸ್ಕೋಕಿಲಂ ಧಾಷ್ಟ್ಯಂದಿಂ ಪಿಂ
ದೊಳಪೊಕ್ಕೊಚ್ಚೈಸಿ ಮಲ್ಲೀಮುಕುಳಕಲಿತಭೃಂಗಾವಲೀನೀಲಮುಕ್ತಾ ।
ಫಳಮಂ ತಂದಿತ್ತು ಪಾದಂಬಿಡಿದು ನೆಗೆವಿನಂ ಕಂಟಕಂ ಚೂತಿಕಾಕೋ
ಮಳೆಯಂ ವಿಶ್ಲಿಷ್ಟರೋಷಂ ಮಱೆಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ॥೭೪

ಕಳಹಂಸೀರಾಜಗೇಹಂ ಮಧುಪಮದವತೀಪಾನಕೇಳೀಗೃಹಂ ಮಂ
ಗಳಲಕ್ಷ್ಮೀಮಂಡನಾಸ್ಥಾಯಿಕೆ ಮಲಯಮರುದ್ವಾಹಳೀಭೂಮಿ ಕೋಕೀ ।
ಕುಳಸದ್ಮಂ ಕಾಮುಕಾಳೋಕನದವದಹನಂ ಕಾಮಚಕ್ರೇಶಚಾತು
ರ್ಬಳಚಕ್ರಂ ಚೈತ್ರರಾಜಧ್ವಜಚಯಮಲರ್ದುದ್ದಂಡಮಾಯ್ತಬ್ಜಷಂಡಂ ॥ ೭೫

ಸ್ಮರಕಾಂತಾಪ್ರೇಯಸೀಸ್ಥಾಸಕಘುಸೃಣಲತಾಮಂಟಪಂ ದರ್ಪಕಾಧೀ
ಶ್ವರದಿಗ್ಜೈತ್ರೋತ್ಸವೋತ್ತಂಚಿತಮಣಿಮಯದೂಷ್ಯಂ ಮೃಗೀಭೂತಕಾಮಾ ।

[1] ಗ. ಬ.

ತುರದಾವಜ್ವಾಳಿಕಾಮಂಜರಿ ಮಧುಮಧುಪಾನಪ್ರಮತ್ತಾಟವೀಪಿಂ
ಜರಿತಾಸ್ವಾಡಂಬರಂ ಪೂತೆಸೆದುದಸದಳಂ ಪ್ರೋತ್ಪಲಾಶಂ ಪಲಾಶಂ ‖ ೭೬

ಇನಿಯರ ಕಂತುರಾಗರಸಮಂ ದಳವೇಱಿಸುವಂತೆ ಕಾಮದೇ
ವನ ಕರವಾಳ್ಗೆ ಕಾಮಿಹೃದಯಾರುಣವಾರಿಯನೆತ್ತುವಂತೆ ನಂ ।
ದನವನಲಕ್ಷ್ಮಿಯಂ ಘುಸೃಣದಿಂ ಪೊರೆವಂತೆ ಸುಧಾಂಶು ಸಂಜೆಗೆ
ತ್ತನುವಿಸುವಂತೆ ಕೆಂದಳಿರ ಪೊಂಪುಳಿ [1] ಪಪ್ಪುಕಮಾಯ್ತಶೋಕೆಯೊಳ್ ‖ ೭೭

ಎಳಲತೆಯ ಲಾಸ್ಯದಲೆಯೊಳ
ಗಳಿನೀಗೀತಕ್ಕೆ ನಿಂದು ಬಾಜಿಪ ಮಂದಾ ।
ನಿಳನಟನ ಪೊನ್ನತಾಳಂ
ಗಳವೆನಿಸಿದುವಲರ್ದ ಕರ್ಣಿಕಾರಪ್ರಸರಂ ‖ ೭೮

ಸೊಡರ್ಗುಡಿಯುಗೆಯಂ ಪಚ್ಚೆಯ
ಪಡಲಗೆಗಳೊಳಡಕಿಲಿಟ್ಟು ರತಿ ಪೊಯ್ದ್ವೋಲೇಂ ।
ಜಡಿದುದೊ ಸಂಪಗೆ ನನೆಯಿಂ
ಜಡಿದುದು ಮಧುಲಕ್ಷ್ಮಿ ತೊಟ್ಟ ಪೊಸಪೊಂದೊಡವಂ ‖ ೭೯

ಅಳಸುವ ದನಿ ಬಳಸುವ ಮದ
ಕೊಳಿಸುವ ಕೋಡೆಱಕೆ ಮೆಱೆಯೆ ತಳಿರ್ಗೊಂಬುಗಳೊಳ್ ।
ಗಿಳಿ ಮರಳ್ವರಗಿಳಿ ಪೆಣ್ಗಿಳಿ
ನೆಳಮಾವಿಟಿಸಿದುದು ರತಿಯ ಜಕ್ಕನ್ದೊಟವಂ ‖ ೮೦

ವ‖ ಎಂದೋದಿ ಕೇಳಿಸುತ್ತಾಭ್ರಮರಿಕೆ ಪರಿಮಳೆಗೆ ತೆಱಪುಗುಡಲೊಡಂ ಆ ಕುಂದದಳಧವಳದಶನವಿಸರೆ—

ಅಳಿಗಿಳಿಕೋಗಿಳೆ ಕರೆದೊಡೆ
ಎಳವೆಱೆಯಂಕುಶವದಗ್ರಪಲ್ಲವದೆಡೆಯೊಳ್ ।
ಕೊಳಿಸಿ ಬಸಂತನ ಬರವಿಂ
ಗೆಳಮಾವಿನ ಗಜಮನಿಟಿದು ಸರಿದಂ ಶಿಶಿರಂ ‖ ೮೧

---

[1] ಕ. ಪುಷ್ಪಕ.

ಪೊದೆಗೆದಱುರ್ದ ಪೂಗಣೆಯ ಕೆಂಗಱಿಯಂತುರಿಗಣ್ಣ [1] ತೆಕ್ಕೆಯಂ
ಮದನಮಹೇಶ್ವರಂ ವಿರಹಿಸಂಹಿತೆಯೊಳ್ ತೞೆದಂತೆ ಕೂರ್ತು ಕೊ ।
ಡಿದ ಹೃದಯಪ್ರಿಯರ್ಗಭಯಹಸ್ತವನೆತ್ತಿಸಿದಂತೆ ಪೂತ ಚೂ
ತದ ಕಿಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು ವಸಂತಮಾಸದೊಳ್ ॥ ೮೨

ಮುಗುಳ್ವಲರ್ಗೊಪ್ಪಮುಂ ನಿಮಗೆ ನೀಗದ ನೇಸಱಗೆಯ್ವೆನಮ್ಮನಾ
ಲಗೆಗಳನೆಲ್ಲಮಂ ಶಿಶಿರನಯ್ಯೊ ಬಿಸುಟ್ಟನೆ ನಿಮ್ಮ ನೀಂ ಪುಗಲ್ ।
ಪುಗಲವಮೆಂದು ಮೂದಲಿಸಿ ಲೋಧ್ರಿಗೆ ಮೊಲ್ಲೆಗೆ ಸಿಂಧುವಾರಮ
ಲ್ಲಿಗೆ ಕಿಱುಗಣ್ಚಿ ಮೆಟ್ಟಿ ಜಡಿದೂಳ್ದುವು ಕೋಗಿಲೆ ಶಲ್ಲತಾಗ್ರಮಂ ॥ ೮೩

ಮುಳಿದುಟಿದೋಪರಳ್ಕೆರ್ದ ಪುಗುಳ್ತುರಿಪಂತೆ ಮುಗಳ್ತು [2] ಸಂದ ನಾ
ಣೊಳಗು ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊ ।
ಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ವಿರಿವಂತು ಕಂಪು ಕೈ
ಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೊಲ್ ॥ ೮೪

ಮಲಯಮರುಚ್ಚಮೂಪತಿಗಲರ್ಗಳ ಸೌರಭದಂಗಚಿತ್ತಮಂ
ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿಸೂಱೆಯಂ ಶುಕಾ ।
ವಲಿಯ ಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ಬಸಂತನ
ಗ್ಗಲಿಕೆಗೆ ಬಂದು ಸಂವರಣೆದೋಱಿ ಮನಂಬಡೆದಂ ಮನೋಜನಾ ॥ ೮೫

ಅಲರ್ಗಂ ಬಂದುವು ನಿನ್ನ ಕೋರಕದಿನೆನ್ನಂ ಚೆನ್ನಬಲ್ ನಿನ್ನ ಗೊಂ
ಚಲ ಪೂವಿಂ ತಳೆದತ್ತು ತೋಮರಮನೆನ್ನೊಂದಾಜ್ಞೆ ನಿನ್ನಿಂದ ಸ ।
ತ್ಫಲಮಾಯ್ತೆಂದು ಮನೋಜರಾಜನ ಪಸಾಯಂಗೊಟ್ಟ ಕೆಂಬಟ್ಟೆಯಂ
ಚಲದಂತಾದುವು ನೀಳ್ದ ಕೆಂದಳಿರ್ಗಳಿಂದಂ ಬಂದ ಮಾಕಂದದೊಳ್ ॥ ೮೬

ಹರನುರಿಗಣ್ಗೆ ನೀಂ ಸೊನೆಯ ಸೋನೆಯನಾಗಿಸು ಚೂತಕಂಠದೊಳ್
ಗರಲದ ಕರ್ಪನೊತ್ತಿ ಕಳೆ ಚಂದ್ರನ ಪೂಸಿದ ಬೂದಿ ಪಾಱೆ ಮೈ ।
ಮರವಡೆಸುತ್ತಗಂಧವಹ ಕೆಂದಳಿರೊಂದಲಗಿಂ ಕಪರ್ದಿಯೊಳ್
ಬೆರಸುಬಳಿಕ್ಕೆ ನೀನೆನುತೆ ನೋಡಿದನಂಗಭವಂ ವಸಂತನಂ ॥ ೮೭

1 ಗ. ಸೆರ್ಕೆಯಿ. 2 ಕ. ನಾಣಜಾಣೊಳಗು. . ಬೆಳರ್ತ. . ಇದು ಕಾವ್ಯಸಾರದಪಾಠ.

ಎಳಮಿರ್ಪಾವುಗೆ ಸಾರಿ ಕುಟ್ಮಲಕುಲಂ ರಂಗತ್ತರಂಗೋತ್ಕರಂ
ಪಳಕಂ ತಾವೆನೆ ಕಾಮನುಂ ರತಿಯುಮಾಡುತ್ತಿರ್ದಪೊಲ್ ತೀರಶೈ ॥
ವಳಶೇಖಾವಲಿ ತಳ್ತು ಪೀನಕುಚದಘ್ನಂ ನಾಭಿದಘ್ನಂ ವಧೂ
ಪುಳಿನೋದ್ಯತ್ಕಟಿದಘ್ನಮಾದುವು ಜಲಂ ಕಾಸಾರಷಂಡಂಗಳೊಳ್ ॥ ೮೮

ವನಜಲಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದೊಯ್ಯನೊ
ಯ್ಯನೆ ಕಿಱಿದಾದುದಂದಿನಿರುಳಗ್ಗಱಿಸುವಂತಿನನಿಂದಗಲ್ದ ಪ ।
ದ್ಮಿನಿಯ ನಿರೋಧಮಂ ಶಿಶಿರನಿಂ ಮುಳಿದಿಟ್ಟಪಸವ್ಯಗಂಧವಾ
ಹನಕರಚಕ್ರದಂತೆ ಬಡಗಲ್ ನಡೆದತ್ತು ಹಿಮಾಂಶುಮಂಡಲಂ ॥ ॥ ೮೯

ವ॥ ಅಂತು ಕಿವಿಯ ಸವಿಗೆ ಭಾಜನಭಾಜನೆಯ ಮಾಧುರ್ಯಭರದಿನವ ತಂಸವಾಸರಮಾದಂತೆ ತಲೆದೂಗುವ ವಿಲಾಸಂ ದೇಸೆವಡೆಯೆ

ಸುಕುಮಾರೋಚಿತವಾಯ್ತು ರೀತಿ ಮೆಱೆದತ್ತುತ್ಪ್ರೇಕ್ಷೆ ಚೆಲ್ವಾಯ್ತು ರೂ
ಪಕದೊಳ್ ವಕ್ರಿಮಜಾತಿಯಾಯ್ತು ಸುರಭಿವ್ಯಾವರ್ಣನಂ ಪೇೞ್ದಮು ।
ಕ್ತಕಮಿಂಬಾದುವಿದಗ್ಧಮಾಕವಿತೆವೀರಾಗಂಗಳೊಳ್ಪೆಯ್ದೆ ಕೌ
ತುಕಮಾಯ್ತೆಂದು ಪಸಾಯಮಿತ್ತು ಪೊಗೞ್ದಂ ವಾಗ್ಭಾಮಿನೀಭೂಷಣಂ ॥ ೯೦

ವ॥ ಆಪ್ರಸಂಗದೊಳ್ ಪರಿಭೃತನೆಂಬ ಪರಿಹಾಸಕಂ ಸರಭಸದಿನೆೞ್ದುನಿಂದೀಕುಂತಲಕುಟ್ಮಲೆಯರ್ ವಸಂತವಲ್ಲಭನುಪರೋಧದಿಂ ಮಲಯಾನಿಲನೊಡನೆ ತಯ್ತುವಂದು ಕವಿತೆಯ ನೆವದಿಂ ಪ್ರರೋಚನೆಯುಂ ದೇವರ ಚಿತ್ತಕ್ಕೆ ಬಿತ್ತರಿಸಿದಪ್ಪರೀಕೆಯರಳವಿಂಗಿದುವಂನೆಗಮಿತ್ತಲವಧರಿಸಿಮೆಂದು ತೋಱೆ

ತರುಣೀಪಾದಪ್ರಹಾರಕ್ಕಸುಗೆ ಕುರವಕಂ ವಾರನಾರೀಕುಚೋದ್ಯ
ತ್ಪರಿರಂಭಕ್ಕಂಗನಾದೃಕ್ಪದವಿಗೆ ತಿಲಕಂ ಕಾಮಿನೀದುಗ್ಧಗಂಡೂ ।
ಷರಸಾಸ್ವಾದಕ್ಕೆ ಚಾಂಪೇಯಕಮೆಳಸಿ ಬರಲ್ ವೇಡೆ ನಿಮ್ಮಂ ಪಿಕಾರಾ
ವರವಂ ಮಂದಾನಿಲಂ ಬಿನ್ನವಿಸಿ ಕರೆದಪಂ ಸೌರಭಾದರ್ಶಹಸ್ತಂ ॥ ೯೧

ವ॥ ಎಂದು ವಕ್ರೋಕ್ತಿಯಿಂ ಬಿನ್ನವಿಸಿ ವನವಿಹರಣವಿನೋದಪ್ರಸ್ತಾವಕ್ಕಭಿಮುಖಂಮಾಡಿದಾಗಳ್

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂ ಮಲ್ಲಿಗೆ ಚಂದನಂ ಮೆಱೆವ ಚೆಲ್ವಿಂ ಕಂಪುಸೊಂಪಾದ ಮೆ ।
ಯ್ವೆಸದಿಂ ಮನ್ಮಥಚಂದ್ರಚೈತ್ರರೆ ವನಕ್ರೀಡಾರ್ಥಮೆಲ್ವಂತಿರೆ
ದುರ್ಗಸಭಾಮಂಡಲದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ॥ ೯೨

ವ॥ ಉದ್ಯಾನವಿನೋದಪ್ರಸ್ಥಾನಭೇರೀಶಂಖಕಾಹಳಾಧ್ವಾನದಿಂ ದಿಶಾಗಗನಮಂಡಪಕ್ಕೆ ಬರೆ ಲಕ್ಷ್ಮೀಮಂಡಪಕ್ಕೆ ಬಂದು ನಿರ್ಯೂಹಪರ್ಯಂಕದೊಳ್ ನಿಂದು

ಹಯಮಂ ನಾಗರಕಾದಿಯಶ್ವರಥಮಂ ವಿದ್ಯಾವತೀವೃಂದಮಾ
ನೆಯನುರ್ವೀಶತನೂಜರಂದಣಮನಾವಾರಾಂಗನಾಶ್ರೇಣಿರಾ ।
ಣಿಯವಾಸಂ ಶಿಬಿಕೌಘಮಂ ಪಿಡಿಯಪಿಂಡಂ ಪೆಂಡವಾಸಂ ನೃಪಾ
ನ್ವಯಚೂಡಾಮಣಿ ಪಟ್ಟಗಂಧಗಜಮಂ ಮುನ್ನೇಱೆ ತಾಮೇಱಿದರ್ ॥ ೯೩

ಅರಸಿ ಪೆಱಗೇಱೆ ಮದವ
ತ್ಕರಿಧವಳನನೇಱಿ ಮೆಱೆದನವನಿಪಧವಳಂ ।
ಶರದಂಬುದಮಂ ರೋಹಿಣಿ
ವೆರಸೇಱಿದ ಚಂದ್ರನಂತೆ ಪೂರ್ವಾಸನದೊಳ್ ॥ ೯೪

ವ॥ ಅಂತೆ ತಿರಿಪಿ ರಾಜಾಂಗಣದೊಳ್ ಸಂದಿಸಿ ನಡೆವ ಪಡಿಯಱರ ಪಡೆವಳರಡಪವಳರಗ್ಗವಳರ ಕಬ್ಬಿಗರ ಸವ್ವವರ ಪಪ್ಪವರ ಪರಿಹಾಸಕರ ರಾಜರಾಜವಲ್ಲಭರಂದಣದ ಗೊಂದಣಂ ರಣಮಂಡಲದ ಬಾಗಿಲ್ವಾಡದೊಳ್ ತಿಂತಿಣಿಗೊಂಡು ಮುಂತೆ ಪೊಱಮಡುವಂತು ದಂತಿರಾಜನಂ ತೊಡರ್ಚಿ ಪಿಡಿದೊಯ್ಯನೊಯ್ಯನೆ ಪೊಱಮಟ್ಟು

ಬನಮಾಯ್ತಂಗಡಿವೀಧಿ ಪೀಲಿದಳೆಯೊಡ್ಡಿಂ ಪಂಕಜಾಸ್ಯಂಗಳಿಂ
ವನಜಾತಾಕರಮಾಯ್ತು ವಾರವನಿತಾಪಾಂಗಾಂಶುವಿಂ ಸೌಧಸಾ ।
ರನಿಕಾಯಂ ಮಧುಮಾಸಮಾಯ್ತು ಪುರಮೆಲ್ಲಂ ಮಲ್ಲಿಕಾಮಾಲೆಭಾ
ರನಿಜಾವೋದದಿನೆಂಬಿನಂ ತಳರ್ದನುರ್ವೀಮಂಡಲಾಖಂಡಳಂ ॥ ೯೫

ವ॥ ಅಂತು ತಳರ್ದು

ಸಮದೇಭವ್ರಜದಾನವರ್ಷಮಬಲಾಸಂದೋಹನೇತ್ರಾಬ್ಜಷಂ
ಡಮನೇಕಧ್ವಜಮೇಘಡಂಬರಚಯಂ ಶುದ್ಧಾಂತಕಾಂತಾಮುಖೇಂ।
ದುಮಯೂಖಂ ಚಮರೀಜವೀಜನಬಲಾಕಂ ತಳ್ತು ಕಾರುಂ ಬಸಂ
ತಮುಮುದ್ಯಾನವನಕ್ಕೆ ಬರ್ಪ್ಪ ತೆಱದಿಂ ಬಂದಂ ಜಗದ್ವಲ್ಲಭಂ ॥ ೯೭

ವ॥ ಅಂತು ಬಂದು ನಂದನವನೋಪಾಂತಂಬರಂ ನೀಡಿ ನಿಟ್ಟಿಕ್ಕಿದ ಪಟ್ಟದಾನೆಯಂ ಹೋ ಎಂದಪ್ಪಳಿಸಿ ಕೊಲ್ಲಣಿಗೆಯೊಳಲ್ಲನುಲಿದು ಬಂದ ಕೊಲ್ಲಣಿಗೆಯೆಲ್ಲವನಲ್ಲಿಯೆ ನಿಲವೇೞ್ದು

ತೊಡೆಯಿಂದೊತ್ತಿ ಮದಾಂಧಗಂಧಗಜಮಂ ಪಿಂತಿರ್ದ ನಲ್ಲಳ್ಗೆ ಕೈ
ಗುಡುತುಂ ಮೆಲ್ಲನಿಟಿಪ್ಪ ಕೈಯಲಗನತ್ತಲ್ ನೀಡಿ ಕುಂಭಾಗ್ರಮಂ।
ತೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೆ
ಯ್ಯೆಡೆಯಿಂ ಲಂಘಿಸಿದಂ ಕೆಲಕ್ಕೆ ಜವದಿಂ ಸಾಹಿತ್ಯರತ್ನಾಕರಂ ॥ ೯೮

ಗದ್ಯ॥ ಇದು ಪರಮಜಿನಸಮಯವನವಸಂತಸಂತಾನಾರಾಮ ರಾಮ
ಚಂದ್ರ ಮುನೀಂದ್ರಪ್ರಸನ್ನಾಂತಃಕರಣ ಕವಿಚಕ್ರವರ್ತಿಬಿರುದ
ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ
ಅನಂತನಾಥಪುರಾಣದೊಳ್
ವಸಂತೋದಯವರ್ಣನಂ
ಷಷ್ಠಾಶ್ವಾಸಂ.

---

# ಸಪ್ತಮಾಶ್ವಾಸಂ

ಶ್ರೀರಮಣಿಯ ನೆಲೆವೊಲೆಗಳೊ
ಳೋರಗೆಯೆನೆ ನೆಗೆದ [1] ಗಜದ ಬಿದುತಟಮದಕ ।
ಸ್ತೂರಿ ಪೊರೆದೆಸೆವ ಕರಮನು
ದಾರಂ ತಿಮಿರ್ದಂ ವಿನೇಯಜನಮುಖತಿಲಕಂ ॥ ೧

ಕಳಿಕೆಗಳ ಮಿಡಿಯ ತನಿವ
ಣ್ಣಿಳ ರಸದಿಂ [2] ಸೊರ್ಕಿ ಜಡಿದು ನುಡಿವೆರಸಿ ಮಹೀ ।
ತಳಪತಿಗವರೋಹಣಮಾಂ
ಗಳಿಕಮನೆಸಗಿದುವು ಪುರುಳಿಗಿಳಿಕೋಗಿಲೆಗಳ್ ॥ ೨

ಸರಸಿರುಹಂಗಳಿಂದಿಟಿವ ಮತ್ತಮರಾಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿಟಿವ ಸೋಗೆಯ ಗೊಂದಣದಂತೆ ಬಂದ ಮಾ ।
ಮರದೆಳಗೊಂಬಿನಿಂದಿಟಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದಮಂದಣದಿನೇಟಿತಂದರೊ ವಾರನಾರಿಯರ್ ॥ ೩

ಪಿರಿಯಂದಣಂಗಳಿಂದಿಟಿ
ವರಸಿಯರ ಪದಾಬ್ಜಶೋಣರುಚಿ ದಂಡಿಗೆಯೊಳ್ ।
ಪೊರೆದು ಕೊನರಿಸಿದುವೊಣಗಿದ
ಮರಂಗಳಂ ಮದನ ರಾಗರಸಪರಿಣತೆಯಿಂ ॥ ೪

ಪೊಂದುಡಿಗೆಬೆಡಂಗಡರ್ದೆಳೆ
ವಿಂದಿರೆರಜವಡರ್ದು ಕನಕಕಮಳದಿನಿಟಿವೊಂ ।
ದಿಂದಿರೆಯೆನೆ ಮೆಱೆದಳ್ ಪಿರಿ
ಯಂದಣದಿಂದಿಟಿವ ರಾಯರಾಣಿಯದೊರ್ವಳ್ ॥ ೫

---

1 ಕ. ಜಗದ. 2 ಕ. ಸೊಂಕಿ.

ವ॥ ತದನಂತರಂ

ಅಗೆವೊಯ್ದ ಚಂದ್ರಮಂಡಲ
ದಗೆಗಳವೊಲ್ ಕಾರ ಮುಗಿಲ ಕಿಬ್ಬಿರಿಗಳವೊಲ್ ।
ಸೊಗಯಿಸಿದುವು ಬೆಳ್ಗೊಡೆಗೊಂ
ಬುಗೊಂಬಿನೊಳ್ ಕಂಬಕಂಬದೊಳ್ ಪೆರ್ವಿಡಿಗಳ್ ॥ ೬

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮಚ್ಚರಂಗಳಂ ।
ಬಳೆಯಿಸಿ ಮುತ್ತುವಂತೆ ಬನಮಂ ನಡೆದರ್ಕಳನಾಽದೆಯರ್ ಸಮು
ಜ್ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ॥ ೭

ವ॥ ಅಂತು ಬರ್ಪ ರಾಣಿವಾಸದ ವಾರನಾರಿಯರ ನರ್ಮಸಚಿವರ ನಡುವೆ ಚಂದ್ರಮಂದಾನಿಲರ ಗಡಣಂಬೆರಸು ಅನಂಗಜಂಗಮಕಲ್ಪಲತಾಪ್ರತಾನ ಪರೀತನಾದ ವಸಂತವಲ್ಲಭನಂತೆ ವನಮಂ ಪೊಕ್ಕು ಚಿತ್ತಪ್ರೇಯಸೀಹಸ್ತಪಲ್ಲವದೆ ಪರಿಷ್ವಂಗಭಂಗುರವಾಮಹಸ್ತಪ್ರಕೋಷ್ಠಕಾಂಡಂ ವನಪಾಲನಿರ್ದಿಷ್ಟಲವಂಗ ಲುಂಗನಾರಂಗಮಾತುಲುಂಗನಕ್ತಮಾಲತಮಾಲನಾಳಿಕೇರಜಂಬೀರಪೂಗಪುನ್ನಾಗಪ್ರತೋಳಿಕಾಮಾಳಿಕೆವಿಡಿದು ನಡೆತರ್ಪೆಡೆಯೊಳ್ ಪಾಸಿದ ಪಸೆಯ ಪಸರ ದಂತಸದಳಮೆಸೆವ ನುಣ್ಬೆಳಂತಿಗೆಮಟಲ ತಣ್ಬುಟಿಲೊಳ್ ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂದನಂ ವನಪಾಲಂ ನೃಪಾಲಪಾರಿಜಾತನ ನಿತ್ತಲವಧರಿಸಿಮೆಂದು ತೋಱಿ :—

ಪೊಂಬಾಡೆ ಚಾಮರಂ ಚಂ
ದ್ರಂ ಬೆಳ್ಗೊಡೆ ಕೇಳಿಶಿಖರಿ ಸಿಂಹಾಸನಮಾ ।
ಯ್ತುಂಬಿನೆಗಮಂಗಜಂ ಮಾ
ವೆಂಬ ಕುಮಾರಂಗೆ ಪಟ್ಟಮಂ ಕಟ್ಟಿಸಿದಂ ॥ ೮

ವ॥ ಎಂಬುದುಮಿಾಸಹಕಾರಕುಮಾರಕನ ಸೌಭಾಗ್ಯಮಂ ಕೊಂಕಿ ನಿಮಿರ್ದಕವಲ್ಗುಡಿಗಳೆಂಬ ನಳಿತೋಳ್ಗಳಿನಪ್ಪಿ ನಿಂದ ಮಲ್ಲಿಕಾವಲ್ಲಭೆಯೊಲವೆ ಪೇಳ್ದಪ್ಪು

ದೆಂಬ ರಸಿಕರತ್ನಾಕರನ ವಚನರಚನೆ ವಿಚಕಿಲವಿಲಾಸಪ್ರತ್ಯುಜ್ಜೀವನಮಾಗೆ ವಿಲಾಸನೆಂಬ ನರ್ಮಸಚಿವನಿಂತೆಂದಂ :—

ನವಸಹಕಾರನೊಳ್ ನೆರೆದ ಮಲ್ಲಿಗೆನಲ್ಲಳ ತಾರಹಾರದಂ
ತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೊಳೀಂಟಿ ದೂಂಟುವಾ ।
ಡುವ ಮಱಿದುಂಬಿಮಾಲೆ ತಳಿರೊಳ್ [1] ತಡವಾಯ್ದೆರ್ದೆ ಝುಂಕೃತಂ ತುಳುಂ
ಕುವ ನೆವದಿಂದೆ ಜೇವೊಡೆದು ನೋಡಿದನಂಗಜನಿಕ್ಷುಚಾಪಮಂ ॥ ೯

ವ॥ ಎಂಬುದುಂ ನಾಗರಕಂ ವಿನೋದವಿಲಾಸಂಗೆ ನೀನೆಂದಂತೆ ದರ್ಪಕನ ದರ್ಪಂ ಬೆಂಗೆ ಯಿತ್ತಲಭಿವ್ಯಂಜಕಮಾದಪ್ಪುದೆಂದು ಸೂಚೀಹಸ್ತದಿಂ ಸೂಚಿಸಿತೋಱಿ

ಮುಗುಳಂ ಪೇಱಿ ಬಟಲ್ವ ಗೊಂಚಲೆಡೆಯೊಳ್ ಪುಷ್ಪಾಸ್ತ್ರಪತ್ರಂಗಳಂ
[2] ತೆಗೆದುತ್ಕೀರಕದೊಳ್ ಮರಲ್ವ ತಳಿರಂ ಕೈವಂದ ಮಾಕಂದ ಶಾ ।
ಖೆಗಳೀತೊರ್ಪುವೆ ಬೆನ್ನೊಳಾಳಿಸಿದ ತೂಣೀರಾಗ್ರದಿಂ [3] ಬಾಣಮಂ
ತೆಗೆಯಲ್ ನೀಡಿದ ಶಂಬರದ್ವಿಷನ ಹಸ್ತಾಳಾಪವಿಸ್ತಾರಮಂ ॥ ೧೦

ವ॥ ಎಂದು ಮಂದಸ್ಮಿತಪ್ರಸಾದಮಂ ಜಗತ್ಪ್ರಸಾದನನ ಭಂಗುರಾಪಾಂಗದಿಂ ಪಡೆದು ನಡೆಯೆ ಮುಂದೊಂದೆಡೆಯೊಳ್ ಕಟ್ಟಲೆಯಂ ತಲೆವಿಡಿದು ಕಾಳಮನಾಳಿಗೊಳ್ವ ತಮಾಳಲತೆಯ ಬಾಳ್ಜೊಂಪದ ಬಳಸಿನೊಳಗೆ ಕಂಕೆಲ್ಲಿಯ ಸೋಂಕಿನೊಳ್ ಚಂಪಕದಣ್ಪಿನೊಳಂ ಪೊಂಪುಳಿವಡೆದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಿಂ ಪಾಟಿಸಲ್ ನೆಱೆವ ಪಾಟಳಿಯಂ ಸಹಕಾರನೆಂಬ ನಾಗರಕಂ ನೋಡಿ

ಪರಭೃತಪಕ್ಷದಿಂ ರತಿಯ ಕಣ್ಮಲರಂ ಮಱೆಗೆಯ್ವನಂಗನೊ
ಲ್ದರೆಯೆ ವಸಂತದೂತಿ ಮಱಿದುಂಬಿಗಳಿಂ ಮಱೆಸನ್ನೆಗೆಯ್ವ ಪಾ ।
ದರಿಗಲರ್ಗಂಗಳಿಂದೆ ಮಕರಂದಮುದಶ್ರು ತುಟುಂಕೆ ಪಲ್ಲವಂ
ಮುರಿದುವು ತೋಳೊಳಿಂದು ಮಲಯಾನಿಳನಿರ್ದಪನೆಂದು [4] ತೋರ್ಪವೋಲ್॥

1 ಕ. ತೊಡ. 2 ಕ. ತೊ. 3 ಗ. ಬಣ್ಣ. 4 ಕ. ತೋಱುವೋಲ್.

ವ॥ ಎಂದು ನಿಂದು ತೋಱಲೊಡಂ ವಿದೂಷಕನರಸಿಂಗೆ ವಿಚಾರವು ಳ್ಳೊಡೀದರ್ಪಕನ ತಪ್ಪಿಂಗೆ ರತಿಗೆ ಶಾಸ್ತಿ ಬಾರದೆಂದು ನಗಿಸುತ್ತುಂ ನಡೆದು ಮುಂತೆ ಪನೆಗಂಡುಕೊಂಡ ಚೂತಲತೆಯ ತಳಿರ್ಗುಡಿಗಳೊಳಂ, ಮಾಧವೀಲ ತೆಯ ನನೆಗುಡಿಗಳೊಳಂ, ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ, ಚಂಪಕಲ ತೆಯಲರ್ಗುಡಿಗಳೊಳಂ ಪಿಣಿಲಿಱಿದು ಪೆಣೆದು ಪರ್ವಿ ಪಸರಿಸಿದ ಪೊಂಬಾಳೆಯ ಕಂಬಂಗಳ ತುಱುಂಬಿನೊಳ್ ಬಳ್ವಳ ಬೆಳೆದ ಮೃದ್ವೀಕಾಲತೆಯ ಕಾಯಮಾನಂ ಕಾಮನ ರತಿಯ ವಿವಾಹಕ್ಕೆ ಚೈತ್ರನೆಂಬ ಚಿತ್ರಕಂ ಬಣ್ಣಮಿಟ್ಟು ತಿಣ್ಣಂ ಸಮೆದ ಪಸುರ್ವಂದರಂದದಂತಿರೆ ಕಾಂತಮನೋಹರಮಾಗೆ ರಾಜಮನೋಹರಂ ರತ್ನ ಮಾಲಾಮನೋಹರಿವೆರಸು ಅಲ್ಲಿಗೆ ಬಂದು ಮಂಡಪಕ್ಕೆ ಮಂಡನಮಾದ ಪ್ರವಳಿಕಿನ ಪಪ್ಪುಕಜಗಲಿಯೊಳ್ ವನವಿನೋದಪ್ರಸಂಗಚತುರ [1] ಪ್ರಸಾಧನ ಪರಿಜನಪರೀತಂ ಸುಖಾಸೀನನಾಗಿರ್ಪಿನಂ ಇತ್ತ ಲತಾಂತಲತಾಪ್ರತಾನದ ಮೇಲೆ ಮಲಯಮಾರುತನಂಗಭವಜಂಗಮಲತಾವಿತಾನಮಂ ಕೈವೀಸಿದಂತೆ ತಳರ್ವ ತರ ಳಲೋಚನೆಯ ಪಾದಪಲ್ಲವದ ಕೆಂಪಿನ ಸೊಂಪು ಪೂಗತರುನಿಕರದ ಸಾಲ್ಗಳೆಡೆ ಯೆಡೆಯೊಳ್ ಬಯಲ್ದಾವರೆಯ ಬನಮಂ ಪಡೆಯೆಯುಂ, ನಖಮಯೂಖಪ್ರಭಾ ಪ್ರಸರಂ ನಾಳಿಕೇರಮಾಳಿಕಾಮಾರ್ಗದೊಳ್ ತಾವರೆಗಳನಾರಿಗೊಳಿಸೆಯುಂ, ತುಳಾಕೋಟಿ [2] ನಳಪಂಗಳೊಳ್ ಹಂಸಮಂಡಳಿಗಳಂ ಮುಟುಕುಗೊಳಿಸೆಯುಂ, ತೂಗಿ ತೊನೆವ ನಳಿತೋಳ್ಗಳ ಕಂಕಣದ ಝುಂಕಾರಂ ಭ್ರಮರಮಾಲೆಯಂ ಭ್ರಮರಿಗೊಳಿಸೆಯುಂ, ಅಲರ್ಗುಡಿಗಳನೀವೆಮಗೆತಮಗೆಂಬ ಕಳರವಂಗಳ್ ಕಳಕಂಠರವಕ್ಕೆ ವಿಕುಂಠತೆಯನೊಡರಿಸೆಯುಂ, ಸೂಟಿವರಿವಾಗಳ್ ಕಣ್ಗಳ ಬೆಳಂತಿಗೆಬೆಳ್ಪು ಪರಿಮಳಂ ಪರಿವರಲ್ಗೊಂಚಲ್ಗೆ ದುಕೂಲಚೇಲಮಂ ಬಾಸಣಿಸೆ ಯುಂ, ವಿಳಾಸದಿಂ ಪಾಸುಂಪೊಕ್ಕುಂ ಪರಿದು ಕುಸುಮಾಪಚಯವ್ಯಾಸಕ್ತೆಯ ರಾದ ಕುಸುಮಸುಕುಮಾರಿಯರೊಳೊರ್ವಳ್ ಸಂದಣಿಸಿ ನಿಮಿರ್ದ ಕೆಂದಳಿರ ಗೊಂದಣದಾಂದೋಳದಿನಂದಂಬಡೆದು ಬಂದ ಮಾಕಂದದ ಮುಂದೆ ನಿಂದು

ಕುಸುಮಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮೀನಕೇತನ
ಕ್ಕಸಮಶಿಲೀಮುಖಂಗೆ ರತಿಗೇಳುಗಿ [3] ವೆಂದರೆಮುಚ್ಚಿದಟ್ಟಿ ಜೋ ।

1 ಕ. ಪ್ರಸಾದಿತ. 2 ಗ. ಕಳಾಪಂ. 3 ಕ. ಗೆ.

ಳಿಸಿ ಕರಪಲ್ಲವಂ ಬಿರುಗೆ [1] ಬಾಸಿನ ಸೂರ್ ನನೆ ಮೊಗ್ಗೆ ಜಾಗರಲ್
ಪಸರಿಸಿ ಕೊಯ್ದು ಮಲ್ಲಿಗೆಯೊಳರ್ಚಿಸಿದಳ್ ಸಹಕಾರಪಾದಮಂ ‖ ೧೨

ವ‖ ಅದಲ್ಲದೆಯುಂ

ಕರತಲರಾಗಮಳ್ಳಿಱಿಯ ಸೆಳ್ಳುಗುರಾಳಿಸೆ ಲೋಚನಾಂಶುಗಳ್
ಪರಿದೊಳಪೊಯ್ಯೆ ಪೂದಿಱಿದಳೋರ್ವಳೆ ದಿಗ್ಗನೆಯಿಂದೆ ಬಂದಳೀ ।
ತರುಣಿ ಬನಕ್ಕೆ ಬರ್ದಿನಿತೆ ಮಲ್ಲಿಗೆಯೆಂದೊಸೆದಪ್ಪಿದಂತೆ ಪಂ
ಕರುಹದಳಾಕ್ಷಿ ಕೇದಗೆಯ ಕುತ್ತೆಸಳುತ್ಪಲಪತ್ರಸಂಕುಳಂ ‖ ೧೩

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ತಾನೆಂದು ಮುಳಿದು ಸಂಪಗೆಯೆಸಳಂ ।
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸಳ್ಗಳನೆ ತಿಱಿದು ಸೂಡಿದಳೊರ್ವಳ್ ‖ ೧೪

ವ‖ ಮತ್ತಮೊಂದು ತಣ್ಬುಟಿಲೊಳ್ ಬಂಬಲಂಬಡೆಯೆ ಬಳ್ಳಿಮಾವಿನೆಳಗೊಂಬಿನ ಕೋರಕದ ಕುಟ್ಮಲದ ಮೊಗ್ಗೆಯ ಮೊಗ್ಗರಂಗಳನಾಯ್ದು ಕೊಯ್ದು ಸಂದಿಸಿದ ಕೆಂದಳಿರ [2] ತಡೆಯೊಳ್ ತೀವಿ ನಿಜವಯಸ್ಯೆಯ ಕರಪಲ್ಲವಕ್ಕೆ ನೀಡಿ ನಿಲಲೊಲ್ಲದೆ ಶಾಖಾಂತರಮಂ ತರಂಗದೊಳಾಂದೋಳಮನಳಂಕೆಗೊಳಿಸಿ

ಎಳಲತೆಯುಯ್ಯಲಾಡಿದಪುದೆನ್ನಸಿತೋತ್ಪಲಮುಯ್ಯಲಾಡಿತೆಂ
ನ್ನೆಳದಳಿರುಯ್ಯಲಾಡಿದುದು . . ತೆಂಬೆಲರಿಂದಮೊಂದು ತಂ ।
ಗೆಳದಿಯರೊಲ್ದು ಪಾಡೆ ತನುಮಧ್ಯೆ ವಿಲೋಲವಿನೀಲನೇತ್ರೆ ಕೆಂ
ದಳದ ಬೆಡಂಗನಿಕ್ಕಿ ತೆಗೆದುಯ್ಯಲನಾಡಿದಳಾಮ್ರಶಾಖೆಯೊಳ್ ‖ ೧೫

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನಮೋರ್ವಳೇಱಿ ಕೃತಕಾದ್ರಿಯನೇಂ ।
ದೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೊಲ್ ‖ ೧೬

---

1 ಕ. ಬಾಗಿನಚೂರ್.    2 ಗ. ಮಡೆ.  ಕ. ದಳೆ.

ವ॥ ಅದಲ್ಲದೆಯುಮಲ್ಲಿ ತಂತಮ್ಮ ಮೇಳದಾಳಿಯರ್ ತಾರಲ್ವಿಡಿದು ಗೋರಿವರಿದು ಮೆನೆಕುನುಂಗಿ ಕೆಲ್ಲಯಿಸಿ ನೋಟ್ಪ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ [1] ಮನಂಗೊಳಿಸಿ

ನಿಱಿದಳಿದೊರ್ಗಂಗಲಂ ತೆಗೆಯೆ [2] ಬಾರುಳಿಯಂ ದನಿಗೆಯ್ದಶೋಕೆಯೊಳ್
ಕಿಱುಮುಗಳ್ಗಂಜಿಯುಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಯೊಳ್ ।
ಚ್ಚೞಿದಿರೆ ಮೇಚಕಚ್ಛವಿಯ ತಾವರೆಗಣ್ಗಳ [3] ಗಾಳುವೆಣ್ಗಳೇಂ
ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮಂ ॥ ೧೭

ವ॥ ಅದಲ್ಲದೆಯುಮಿತ್ತ ಸುರಭಿಸಮಯಕ್ಕೆ ಹರಿಚಂದನಮಾದ ಸುರಹೊನ್ನೆಯ ಸುರುಚಿರಪ್ರಸೂನಮನುತ್ತಾನಶಾಖಾಲೀನಮಂ ಸ್ವಹಸ್ತಶಾಖಾಧೀನಂ ಮಾಡಿ [4] ಕುಡೆಂದನುರಕ್ತವಿಟನ ಬಾಹುಶಾಖೆಯಂ ಪಿಡಿದು ನೆಗೆಪಿಯುಮುತ್ತರೀಯಾಂಚಲಮಂ ಪಿಡಿದುಂ ಜಡಿದುಂ ತಾರಹಾರಮನಾಲಂಬಿಸಿಯುಂ ಬಡದೆಲಲ್ಲೈಸಿ

ಗಳದೊಳ್ ತೋಳಮೊದಲ್ ಪಟಂಚೆ ಕಟಿಯೊಳ್ ವೃತ್ತೋರು ತಳ್ವೊಯ್ಯೆ ಪೆ
ರ್ಮೊಲೆ ವಕ್ಷಸ್ಥಳಮಂ ಪಳುಂಕೆ ತಿಱುಯಲ್ ಮೇಲ್ಗೊಂಬಿನೊಳ್ ತೋರ್ಪಗೊಂ।
ಚಲ ಪೂವಿಂಗೆ ಲತಾಂಗಿ ನಿಳ್ಕುವಿನಮೋಪಂ ಲೀಲೆಯಿಂದೆತ್ತಿ ವೃ
ಕ್ಷಲತಾಲಿಂಗನಭಂಗಿಭಾವರಸಮಗ್ನಸ್ತಂಭಮಂ ತಾಳ್ದಿದಂ ॥ ೧೮

ವ॥ ಅಂತುಮಲ್ಲದೆಯುಮುತ್ತುಂಗಪೀನಪಯೋಧರೆಯುಮತಿಪೃಥುಳನಿತಂಬಬಿಂಬೆಯುಮತ್ಯಂತತನುತರಮಧ್ಯಭಾಗೆಯುಮಾದ ತರುಣಹರಿಣತರಳನೇತ್ರೆಮತ್ತಮೊರ್ವಳ್

ಕುರವಕಮಂ ಘನಸ್ತನದ ಸೋಂಕಿನೊಳುಳ್ಳಲರ್ವಂತಿರಾಳಿಯುಂ
ಕುರವಿಡೆಮಾಡೆ ಕಂಡು ದರಹಾಸದಿನಾಕೆಯ ಚಿತ್ತವಲ್ಲಭಂ ।
ಪುರುಡಿಸಿ ಕೆಯ್ಯೊಳಿರ್ದ ಸರಸೀಜಮನಂಟು [5] ಮುಗುಳ್ಚಿ ಬೆಚ್ಚೆ ಕಾ
ತರೆ ತಳಿವೊಯ್ಟು [6] ನಿಟ್ಟಸುಗೆಯೊಳ್ದಳಿರಂ ಪಡೆದಳ್ ಪ್ರಸಾದಮಂ ॥ ೧೯

1 ಕ. ದಿವಂ. 2 ಕ. ಚಾರು. 3 ಗ. ಗಾಱು. 4 ಕ. ಕೂಡೆ
5 ಕ. ಮುಗುಳ್ಚಿ. 6 ಗ. ನಿಟ್ಟಿ.

ವ॥ ಅಂತುಮಲ್ಲದೆಯುಂ

ಸುರಹೊನ್ನೆಯ ಮುಗಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್ ।
ಪರಿಮಳಮುಳ್ಳೆಳಮುತ್ತಿನ
ಸರವೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ॥ ೨೦

ದಾಳಿಂಬದ ಕಿಱುನನೆಗಳ
[1] ದಾಳಿಂಬಿಗೆ ಮೆಱೆಯೆ ಮುಗುಳ ಮುತ್ತಿನಲೊರ್ವಳ್ ।
ಬಾಳಿಕಿ ಪಂಚಶರಂಗೊ
ಯ್ದೋಳಿಸಿದಳ್ ಪಂಚಶರನ ಶರಪರಿಣತೆಯಿಂ ॥ ೨೧

ವ॥ ಮತ್ತಮೊಂದೆಡೆಯೊಳ್ ಪೊಂಗೇದಗೆಯ ಸಂದಣಿಸಿ ನೆಗೆವ ಧೂಳಿ ಜಾಳಮೇಳಾಪಕದಿಂ ಮೃದುಳಮಾದ ಸೈಕತಸ್ಥಳದೊಳ್ ಪೋಱವಾಱ ಪೋಱ ವೋಱೆಯಿಂ ಗುಜ್ಜುಮೆಟ್ಟುವ ಪಜ್ಜೆಯ ಮಡಂಗಳಗಲ್ದು ಬರೆ ವಿಲಾಸಪರಿಗಮನ ವಿನೋದಮಂ ಮೆಱೆವಲ್ಲಿ

ಸುಟಿವ ಕಲಹಂಸಕಾಂತೆಯ
ಒಟಿಯೊಳ್ ನಡೆದೊಪ್ಪಿ ತಗುಳ್ದು ಬಿನದದಿ ನಯದಿಂ ॥
ಬಟಿಯಂ ಪರಿಯಲ್ಕಱಿಯದೆ
ಬಟಲ್ದು ಗಜಗಮನೆ ಸೋಲ್ತು ಗೆಲ್ದಳದೊರ್ವಳ್ ॥ ೨೨

ವ॥ ಅಂತು ಪುಷ್ಪಾಪಚ [2] ಯವಿನೋದಮುಮಂ ಕುಸುಮಾಭರಣಕ್ಕೆ ವಿಭೂಷಣವಿಲಾಸಮುಮೊಡನೊಡನೆ ಮೆಱೆಯೆ

ಬಾಳಮೃಣಾಳಹಾರಲತೆ ಬಾಹೆಯ ಸೂಳಿಯ ತಾಲವೃಂತಮು
ಳ್ಳಾಳೆಯ ನೀಳಪೊಟ್ಟಣಮನಕ್ಷರಮತ್ತಿಸೆ ದೇವನಂ ಪಯಃ ।
ಕೇಳಿಗೆ ವಂದರಬ್ಜದಳಲೋಚನೆಯರ್ ಕುಡೆ ಘರ್ಮಬಿಂದುಮ
ದ್ಭಾಳತಳಂ ಸುಧಾಂಶುಕಳಿತಾರ್ಧಸುಧಾರುಚಿಗರ್ಧಚಂದ್ರ [3] ನಂ ॥ ೨೩

---

[1] ಗ. ದಾಳಿಂಬಗೆ. [2] ಕ. ಯುಮಂ. [3] ಕ. ಮಂ.

ವನಲಕ್ಷ್ಮೀಶತಮಂಗಜಂಗೆ ಶತಸಾಹಸ್ರಪ್ರಸೂನೇಕ್ಷುಚಾ
ಪನಿಕಾಯಂಗಳನೀವವೊಲ್ ತರುಣಿಯರ್ ತಂದಿತ್ತುವಂ ಪುಷ್ಪಮಂ ।
ಡನಮಂ ತಾಳ್ದಿ ಸರೋವರಕ್ಕೆ ತಳರ್ದಂ ವಾಃಕೇಳಿಶಕ್ತಾಭ್ರಮೂ
ಪನತಾಭ್ರ [1] ದ್ವಿಪದಂತಿರುನ್ನಮಿತಯಾನಂ ರತ್ನಮಾಲಾನ್ವಿತಂ ॥ ೨೪

ವ॥ ಆಸರೋವರಮಾಪೂರಿತಮಲಯರುಹಮೃಗಮದಕಾಶ್ಮೀರಘನಸಾರವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ನಿರವಿಸಲರಿದೆನಿಸಿ ಜಲದೇವತಾನಿವಹದ ಹರಿಣವಿದ್ಯಾವಿಳಾಸಿನೀವಾಸದಂತೆಯುಂ ಷಟ್ಚರಣನಿಕರಚರಣಾಘಾತದಿಂ ಪೊರೆಸಡಿಲ್ದ ಪೊಂದಾವರೆಯ ಕೆಂದೂಳಿಗಳನುರದೆಗೊಂಡೊಗೆಪ ಸುರಭಿವಹನ ಸರಭಸಾಸ್ಫಾಳನದಿಂ ತ್ರೈಲೋಕ್ಯವಲ್ಲಭನ ಕೇಳಿಯುತ್ಸವದೊಳ್ ಪಟವಾಸಚೂರ್ಣಮಂ ಸೂಸುವಂತೆಯುಂ ಪೃಥುಲನಿತಂಬಿನೀಕದಂಬಸುಖಾವರೋಹಣಸೋಪಾನಪಜ್ತಿಗಳ ತಲೆದುಡುಗೆಯೆನಿಸೆ ನಿಱುಸಿದ ಹೇಮರಜತರತ್ನದ್ರೋಣೀಕಟಾಹಪರಿವೇಷ್ಟನದಿನುದಾರಫಲವಂ ಕೆದಱುವಂತೆಯುಂ ಮುಂತೆ ಮೆಱೆದಿರ್ದುದಂತುಮಲ್ಲದೆ

ಅಳಿಗಳ ರತ್ನಕದಂಬದ
ಬೆಳಗಿಂ ಬಹುವರ್ಣಜಲಮನಾಂತ ಕಟಾಹಂ ।
ಗಳ ನಡುವೆ ಪೆತ್ತ ಮಱಿಯಂ
ಬಳುಕಾಡಿಸುವಂತೆ ಸರಸಿ ಪಡೆದುದು ಪದಮಂ ॥ ೨೫

ನೆಲೆಮೊಲೆ ಪೊಣರ್ವಕ್ಕಿಗಳಂ
ವಳಿ ವಳಿಗಳನಾಸ್ಯಬಿಂಬಮಂಬುರುಹಮನ ।
ಗ್ಗಲಿಸೆ ಕಲಹಂಸಯಾನೆಯ
ರಲಗೊರ್ಳನಲಗೊರ್ಳಕೆ ಬಿರ್ದುವಂದಂತಿರ್ದರ್ ॥ ೨೬

ಬನದೊಳಗುಳ್ಳ ಹಂಸೆ ಗಿಳಿ ಕೋಗಿಲೆಯೆಂಬಿವು ಮೆಚ್ಚಿ ಬಂದುವಂ
ಗನೆಯರ ಭಂಗಿವೆತ್ತ ನಳಿತೋಳ್ಗಳನೆಂಬಿನಮೇಂ ಸರೋಜಲೋ ।
ಚನೆಯರ ಕೆಯ್ಯೊಳೊಪ್ಪಿದುವು ಮುತ್ತಿನ ಸುತ್ತಿನ ಪಚ್ಚೆಸಾರದ
ಚ್ಚಿನ ಹರಿನೀಲಮಾಲಿಕೆಯ ಸಂಘಟನಾಜಲಯಂತ್ರಸಂಕುಲಂ ॥ ೨೭

1 ಕ. ದ್ವಿರದ.

ವ॥ ಅಂತು ಜಲಕ್ರೀಡಾಸನ್ನದ್ಧೆಯರಾದ ಚೆನ್ನೆಯರಂ ಕಂಡು ಕೈಪೀಸುವುದುಂ

ಪರಿದೊಳಪೊಯ್ದು ಜೀರ್ಕೊಟವೆಯಂ ತೆಗೆದೆತ್ತಿದ ಕೆಯ್ಯೊಳೊರ್ವರೊ
ರ್ವರನಿರದೊತ್ತೆ ಪಂಜರಿಸೆ ಮೇಲೆ ಮುಸುಂಕುವ ಕುಂಕುಮಾಂಬುಸಂ ।
ಕುಲದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂ
ಬರಿವವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ ॥ ೨೮

ವ॥ ಅಂತು ಮೆಱೆವ ತುಮುಲಖೇಲನವಿಲಾಸದೊಳ್ ತಂತಮಗೆಡೆವಚ್ಚುಗೊಂಡು ಬಿಚ್ಚತಮಾಡುವಿಚ್ಚೆಗಾರ್ತಿಯರೊಳ್

ಮಿಸುಪಂ ತೋಳ ಮೊದಲ್ ತುಟುಂಕೆ ಮೊಲೆ ಮುಯ್ವಂ ಮಿಾಱೆ ಗಾತ್ರಾಪರಂ
ಪಸರಂಬೆತ್ತಿರೆ ಕೊಂಕಿ ಬಳ್ಕಿ ನಡು ಕೊಂಬಂ ತೀವಿಕೊಂಡೆತ್ತಿ ಪೂ ।
ಣಿಸಿ ತನ್ನಂ ಬಿಡೆ ಪೊಯ್ದು ಪೋಪವಳನೊಡ್ಡೊಡ್ಡೆನುತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂದು ಭಾವದೊಳೆ ಭಾವೋದ್ಭೂತನಾದಂ ಸ್ಮರಂ ॥

ಮುಂಡಳಿಗೊಂಡು ಸಿಂಪಿಸುವ ಕುಂಕುಮವಾರಿಯ ಚೆಂಚಗೆಂಚು ಕೈ
ಕೊಂಡು ದುಕೂಲಚೇಲದ ವಿಲಾಸಿನಿಯರ್ಕಳ ದೇಸೆ ತಂದುದಿಂ ।
ದುಂಡಿಗೆಸಾಧ್ಯಮಾಯ್ತೆನಗೆ ಮೂಜಗಮಿಾಜಲಕೇಳಿಯಿಂದಲೆಂ
ದುಂಡಿಗೆಯೊತ್ತಿ ತೋಱಿದನಿವಳ್ದಿರನಂಗಜನೆಂಬ ಭಂಗಿಯಿಂ ॥ ೩೦

ಇಟಿಪಿದ ಕಟಾಹಶತದೊಳ್
ಸುಟಿಸುಟಿದೋರೊರ್ಮೆ ಮೊಗೆಯಲೆಯ್ದುವೆ ನೀರ್ ಜೀ ।
ರ್ಕೊಟವೆಯ ಕೊಂಬಿನ ಜಂತ್ರದ
ಘುಟಿಯಿಕ್ಕಿನಿಪಿರಿದೊ ನೃಪನ ವನಿತಾನಿವಹಂ ॥ ೩೧

ವ॥ ತದನಂತರಂ

ಹರಿನೀಲೋಪಲಪಟ್ಟಿಕಾಘಟಿತಸೋಪಾನಂಗಳೊಳ್ ತೀರಮಂ
ದರಕಲ್ಲೋಲವಿಲೋಲಮಾಲಿಕೆಗಳೊಳ್ ಕಾಂತಾಪ್ರತಿಚ್ಛಾಯೆ ತ ।

ಳ್ತಿರೆ ಕಾಸಾರಮಿದಲ್ಲದಲ್ಲದು ಮನೋಜಬ್ರಹ್ಮನಿವಾರ್ಣನಂ
ತರುಣೀರತ್ನಮಹಾನಿದಾನಮೆನೆ ಕಣ್ಗಿಂಬಾಯ್ತು ಪದ್ಮಾಕರಂ ॥ ೩೨

ಸೆಳೆದು ಮರಲ್ಚಿ ಸೋಗೆನಿಱಿಯಂ ಮೃದುಜಂಘೆಯನೊಯ್ಯನಂಟೆ ಮೈ
ಪುಳಕಿಸಿ ಸೋಂಕಿ ನುಣ್ದೊಡೆಯ ಮೆಲ್ದಡಮುಂಬಿಡೆ ತಳ್ತು ಮಧ್ಯಮಂ ।
ಕಳಶಕುಚಂಗಳಂ ತಳೆದು ಪೊಕ್ಕಿಟಿವಲ್ಲಿ ತರಂಗಹಸ್ತದಿಂ
ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ ॥ ೩೩

ಇಟಿದೊಡೆ ಕೂರದ ಪೆಂಡಿರ
ಕೆಟಗಾದಪೆವೆಂದು ರತ್ನಸೋಪಾನಕದೊಳ್ ।
ಗಟಗಟನಿಟಿಯುದೆ ಬಾಣತಿ
ಪೊಟೆಮೆಟ್ಟುವ ತೆಱದೆ ಗುಜ್ಜುಮೆಟ್ಟಿದರರೆಬರ್ ॥ ೩೪

2816

ಅವಗವಮಾದುವುಗುಳ್ನೀ
ರ್ವಾವಳರೆರ್ದೆಗಬ್ಬುವದನೆಯರ್ ಪುಗುವೆಡೆಯೊಳ್ ।
ಲಾವಣ್ಯರಸಂ ತೆಕ್ಕನೆ
ತೀವಿದ ತಿಳಿಗೊಳಡ ಪಯಸ ಮೂರುದ್ವಯಸಂ ॥ ೩೫

ವ॥ ಅಂತು ವಾರಕಾಂತಾಸಂತಾನ [1] ಶ್ರುತಿಪ್ರತಾನದಂತೆ ಸರಸದೊಳ
ಪೊಕ್ಕಲ್ಲಿ

ಜಳಜಾತದ್ವಯಮೇತಮೆತ್ತಿದಪುವಂಭೋಜಾಳಿಗೆಂಬಂತೆ ಕೆಂ
ದಳಿರ್ಗಳ್ಗೊಂದಳಮರ್ಘ್ಯಮಿತ್ತಪುವು ಶೀತದ್ಯೋತಿಗೆಂಬಂತೆ ಕೋ ।
ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ [2] ತುಳ್ಕಾಡೆ ತುಳ್ಕಾಡಿದರ್
ಪ್ರಳಯಕ್ಷುಬ್ಧಮನೋಭವಾಬ್ಧಿಗಳೊಳೆತ್ತಲ್ ನೋಡೆ ಚಿತ್ತಪ್ರಿಯಂ ॥ ೩೬

ವ॥ ಮತ್ತಮೊರ್ವಳ್ ತನ್ನ ತನುವಿನ ರಾಗಚಿಹ್ನಂಗಳಂ ವಿಟಪೇಟಕದ
ಕಣ್ಣರಲ್ಗಳಂ ಕವ್ವರೆಗೊಳಿಸಿದ ಕಾಮುಕಿ

ಪೊಳೆವೆಳವಾಳೆ ಚುಂಬಿಸಿ ಮುಟುಂಕಿರಲಂಜಿದಳೆಟ್ದುಮೆಯ್ದೆ ಮೆ
ಯ್ಕೊಳಿಸಿದ ನಾಗವಟ್ಟಳಿಗೆ ನಾಣ್ದು [3] ಪಗಲ್ತಿರೆ ನಾಣ್ಚಿದಳ್ ಕುಚಂ ।

---

[1] ಕ. ಸ್ರ. [2] ಕ. ಮೆಳ್ಕೊ. [3] ಕ. ಪಗಲ್ತಿರಿ.

ಗಳ ಕೆಲದೊಳ್ ಕವಲ್ತು ನಖರೇಖೆಗೆ ಬನ್ನಗಡುವ್ರಣಕ್ಕೆ ಕಂ
ಚುಳಿಕೆಯೊಲಾಗೆ ರಾಗಿಸಿದಳೊತ್ತಿದ ಕುಂಕುಮಪಂಕಧಾರೆಗಳ್ ॥ ೩೭

ವ॥ ಅಂತುಮಲ್ಲದೆಯುಂ

ತುಳುಕುವ [1] ನಲ್ಲನ ನೀರ್ವೊಱಿಯ್
ತೆಳಕಿಪವೋಲ್ ಮುಱುಕೆ ಮುನ್ನೆ ಕಣ್ಬೇಟದವಳ್ |
ಪುಳುಕಿದೆಡೆಗೆಯ್ದಿ ಚುಂಬಿಸಿ
ಚುಳುಕಾಡೆ ಮರಳ್ಚಿ ಮೂಡಿದಂ ಸ್ಮರ ನೊರ್ಪಂ ॥ ೩೮

ವಳಿರೇಖೆವಡೆದ ಬಡನಡು
[2] ತೊಲೆಯೆನೆ ಕುಚಜಘನಭಾರಮಂ ಕರತಲದೊಳ್ |
ನಿಲಿಸಿ ಲತಾಂಗಿಗೆ ನೀಸಲ್
ಕಲಿಪ ವಿಟಂ ತೂಗುವಂಗಜಂಗೇಣ್ಯಾದಂ ॥ ೩೯

ವ॥ ಅಂತಲಂಪುವಡೆದ [3] ಸಿಂಪಿಣಿಯ ಪೊಂಪುಳಿಯೊಳ್

ಆಯತಲೋಲಲೋಚನಚಲಪ್ರಭೆಯಿಂ ಹರಿಚಂದನದ್ರವ
ಶ್ರೀಯನೊಡರ್ಚೆ ಕಸ್ತುರಿಯನೀರ್ತಳಿದಳ್ ಸತಿ ರತ್ನಮಾಲೆ ಪೃ |
ಥ್ವೀಯುವತೀಪ್ರಸಾದನನ ಪೇರುರದೊಳ್ ಜಳವೇಳನಪ್ರತಿ
ಚ್ಛಾಯಿತಲೋಲಕಂಕಣದಿನುಣ್ಮುವಿನಂ ಜಪಝುಂಕೃತಿಸ್ವನಂ ॥ ೪೦

ಮಡದಿಯ ಮೇಲಿಳಾಧಿಪತಿ ಕಸ್ತುರಿನೀರ್ಗಳನೊತ್ತೆ ಕೂಡೆ ಪಾ
ಯ್ದಡಸಿದ ಧಾರೆಯಿಂ ವದನಪಂಕರುಹಂ ಮಱಿದುಂಬಿಮಾಲೆಯಿಂ |
ಪಡೆದುದು ಕರ್ಣಪೂರದಸಿತೋತ್ಪಲಮಂಜರಿ ನೀಳನಾಳಮಂ
ಪಡೆದುದು ಮೌರ್ವಿಯಂ ಪಡೆದುದಾಕೆಯ ಮಧ್ಯಮನೋಜಕಾರ್ಮುಕಂ ॥ ೪೧

ವ॥ ಆಗಳ್

---

[1] ಕ. ನಲ್ಲಳ್ . . ಪುಳಕಿಸಿದೆಡೆ . . ಕಾಡಿದುದಳ್ಕಿಮೂಡಿದಂ ನಿಕರಂ. [2] ಕ. ಕ್ಷಲಿ.
[3] ಕ. ಶಿಂ.

ಸವತಿಯ ಮೇಲೆ ಜೀರ್ಕೊಳವೆಯಿಂ ತೆಗೆದೊತ್ತೆ ಮನಃಪ್ರಿಯಂ ಕಲಂ
ಕುವ ಒಗೆ ಕೆಂಕಮಾದ ಕಡೆಗಣ್ ತಳಿರ್ವಣ್ಣಮನಪ್ಪ ತೆಳ್ಗದಂ ।
ಪವಿರಳಘರ್ಮವಾರಿ ಮೆಱೆವನ್ನಮದೊರ್ವಳಬಿಲ್ದ ಸೂಯೆಯಿಂ
ಯುವತಿ ಕಡಂಗಿ ಕೋಪರಸದೋಕುಳಿಯಾಡಿದಳಿಕ್ಷುಚಾಪನೊಳ್ ॥ ೪೨

ವ॥ ಆ ಮಾನವತಿಯಲ್ಲದೆಯುಂ

ಸರಸಿಜದೆಲೆಗೊಡೆಯಂಪಿಡಿ
ದರಸನ ಸೀರ್ವೊಯಿಸೆ ನಿಂದು ಕುನಿದಾಂತೊರ್ವಳ್ ।
ಮರಕತದ ಹರಿಗೆಯೋಜೆಯ
ನರಲಂಬನ ಮುಂದೆ ಮೆಱೆವ ರತಿಯವೊಲೆಸೆದಳ್ ॥ ೪೩

ಮುರಿದೆಡಗೈ ನಿಱಿಗಳನೋ
ಸರಿಸಿರೆ ಬಲಗೈಯನೊಡ್ಡಿ ಧಾರೆಗಡೊರ್ವಳ್ ।
ತರಲಾರ್ತಳುಭಯಕರದಿಂ
ಪರಿವೃತದೊಳ್ನಿಂದ ನರ್ತಕೀವಿಭ್ರಮಮಂ ॥ ೪೪

ಕೋಕನದವದನೆ ಜಳಧಾ
ರಾಕಳನಕ್ಕಾನಲಾಱದೊರ್ವಳ್ ಮೇಲ್ವಾ ।
ಯ್ದೋಕುಳಿಯ ನೆವದಿನಪ್ಪಿ ಮ
ಹೀಕಾಂತನೊಳಂಗಸಂಗಸುಖಮಂ ಪಡೆದಳ್ ॥ ೪೫

ವ॥ ಮತ್ತಮಭಿಮಾನನಿಧಾನೆಯೆನಿಸಿದ ಮಾನಿನಿಯೊರ್ವಳ್

ಮುೞುಗಿದೊಡೆ ಸವತಿಯರ್ಕಳ
ಚಳನಂ ಸೋಂಕಿದಪುದುಪ್ಪೋಡಿದೊಡೆ ನಕ್ಕಪರೆಂ ।
ದೆೞೆಯುಳ್ ತಳರದೆ ನಿಂದಳ್
ಜಳದೇವೀಭಾವಚರಿತಮಣಿಪುತ್ರಿಕೆವೊಲ್ । ೪೬

ವ॥ ಮತ್ತಮೊರ್ವಳುರ್ವರಾಧಿಪತಿಯೊತ್ತುವ ಜೀರ್ಕೊಳವಿಯುಳವಿಗೆ ಸಿಲ್ಕಿ

ನೀರ್ವೊಗಸಿ ಪೊಯ್ಯೆ ಬಿರ್ಚಿದ
ಸೋರ್ಪುಡಿಯೊಳೆ ಮುಸುಕೆ ನಿಜಮುಖಾರ್ಥಮನಿನಿಸಂ ।
ಕಾಮುರ್ಗಿಲೆಳಸಿದ ಹಿಮರೋ
ಚಿರ್ವಾಲೆವೊಲೆಸೆದುದಸಿಯಳಾನನಬಿಂಬಂ ॥ ೪೭

ವ॥ ಅಂತು ನೆಗಟ್ಟಿ ಭಾವ [1] ವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ತಟ್ಟುತ್ತು ತಾಗಿ ಪೋಗದೆ

ಅರಸನ ಮೇಲೆ ಭೋರ್ಗರೆದು ರಾಣಿಯ ವಾಸದ ಪೆಂಡವಾಸದಾ
ದರದ ಬೆಡಂಗೆಯರ್ ಮಳಯಜಾಂಬುಮಿಳದ್ಘನಸಾರವಾರಿಯುಂ ।
ಸುರಿಯೆ ಮನೋಜಪುಷ್ಪಿತಲತಾಪ್ರಕರಂ ಮಕರಂದವರ್ಷಮಂ
ಸುರಿದ ನಮೇರುಭೂರುಹದವೊಲ್ ಮೆಱೆದಂ ನರಲೋಕಚಂದ್ರಮಂ ॥ ೪೮

ವ॥ ಆವಿಲಾಸಕ್ರೀಡೆಯೊಳ್

ಕರಶಾಖೆಗಳವಚರ್ತಂ
ತಿರೆ ಜಳಯಂತ್ರಕ್ಕೆ ಮೆಲ್ಲನಾದುವು ಸದ್ಮಾ ।
ಕರಕೇಳಿ ಸಾಲ್ವುದೆಂಬಂ
ತಿರೆ ಕಂಪಿಸಿದುವು ಬೆಡಂಗೆಯರ ತನುಲತೆಗಳ್ ॥ ೪೯

ವ॥ ಅನ್ನೆಗಂ ವಿಲಾಸವನವಸಂತಂ ಸಂತರ್ಜಿತಕ್ರೀಡಾವಸರನಾಗಿ

ನೀರಾಟವಾಡಿ ಪೊಱಮಡು
ವೈರಾವತದಂತೆ ದಿವಿಜದೀರ್ಘಿಕೆಯಂ ಕಾ ।
ಸಾರದಿನೇಂ ಪೊಱಮಟ್ಟನೊ
ವಾರವಧೂಸಹಿತಮವನಿಪತಿದಿಗ್ನಾಗಂ ॥ ೫೦

ವ॥ ಅಂತು ಪೊಱಮಡುವೆಡೆಯೊಳ್ ಸಡಿಲಮಾದುಡೆನೂಲನಡಿಗಡಿಗೆ ಸಾವಗಿಸುತ್ತುಂ ನಾಂದು ಸುರುಳ್ದು ವೃತ್ತಸ್ತನಂಗಳೊತ್ತಿಂಗೆ ಬೀಱುವುತ್ತರೀಯ

[1] ಕ. ವ್ಯಂತರಂಗಳ್.

ಮ [1] ನೆತ್ತಿ ಸಾರ್ಚುತ್ತುಮುತ್ತಂಸವಲಯದೊಳಡ್ಡಂಗೆಡೆವ ಸಾರ್ದ್ರಕಬರೀಭಾರಮಂ ತೆಱವಿನೊಳ್ ಪೊಱಮುಯ್ವಿಂಗಣಿದು ನೂಂಕುತ್ತುಂ ನೂಪುರಕಲಾಪದೊಳ್ ತೊಡಂಕಿ ಬರ್ಪ ಮೃಣಾಳಶಕಲಮಂ ಕರ್ದುಂಕಿ ಸೆಳೆವ ಹಂಸಿಗಳಂ ನಿವಾರಿಸುತ್ತುಂ ನೀರಾಟತೋಟಿಯೊಳ್ ಬಾಡಿ ಸೊವಡಾದ ಬಿಸಿನೀವಿಸರದೆಸಟಂ ಬಿಸುಟ್ಟು ನಱುಸುಯ್ಗೆಱಗುವ ಮಱಿದುಂಬಿಗಳಂ ಮರಳಿ ಸೋವುತ್ತುಂ ಉತ್ತುಂಗಜಘನೆಯರ್ ಪೊಱಮಡುವಾಗಳ್

ಮದಕಲಹಂಸಯಾನದ ರಥಾಂಗಕುಚಂಗಳ ವಾರಿಜಾತವ
ಕ್ತ್ರದ ಸಿರಿಯಿಂದಮೆನ್ನ ಸಿರಿ ತಾಂ ಮೆಱೆದಿರ್ದು ನಿಮ್ಮ ವಾರ್ಧಿನೋ ।
ದದ ನೆಲೆ ವಾರನಾರಿಯರಿರೆನ್ನನೆ ಬಿನ್ನನೆ ಮಾಡಿ ಪೋಗಲಾ
ಗದು ನಿಮಗೆಂದು ಕಾಲ್ವಿಡಿವವೊಲ್ ತೆರೆಯುಣ್ಮಿದುವಬ್ಜಷಂಡದೊಳ್ ॥ ೫೧

ವ॥ ಅಂತು ಪೊಱಮಟ್ಟು ಪೊಱಗೆ

ಅವರೊಧಪ್ರಮದಾಕದಂಬವಿಗಳತ್ಕಾಶ್ಮೀರಸಾರಂ ಮೃಗೋ
ದ್ಭವಕಲ್ಕಂ ಘನಸಾರರೇಣುಪಟಲಂ ಶ್ರೀಖಂಡಜಂಬಾಳೆಯೆಂ ।
ಬಿವಱಿಂ ತೇಂಗೆ ತರಂಗಮಾಲೆ ರತಿ ಕಂದರ್ಪಂಗೆ ತೀವಿಟ್ಟ ಬ
ಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಖಾಸಾರಮಂ ॥ ೫೨

ಸ್ತನಕುಂಭದ್ವಿತಯಂಗಳೊಳ್ ಮೆಱೆಯೆ ಹಸ್ತಸ್ವಸ್ತಿಕಂ ಕುಂತಳಾ
ಗ್ರನಮಿಶ್ಪಲ್ಲವಮಾಸ್ಯದರ್ಪಣದ ಮೇಗಿಂಬಾಗೆ ನಾಂದಂಬರಂ ।
ತನುವಂ ಪತ್ತಿ ದಿಗಂಬರೀಮಹಿಮೆಯಂ ತಂದೀಯೆ ನಿಂದಿರ್ದ ಕಾ
ಮಿನಿಯರ್ ಮಂಗಳಮಂತ್ರದೇವಿಯರವೊಲ್ ಕಣ್ಗೆಂ ಬೆಡಂಗಾದರೋ ॥ ೫೩

ಭೂವರನಿತ್ತಂ ವರಭೂ
ಷಾವಲಿಯಂ ತೊಳೆದ ತೋರಮುತ್ತಿನ ಮೊತ್ತಂ ।
ಪೋವಣಿಕೆವಡೆದುದೆಂಬಿನ
ಮಾವರವನಿತೆಯುರದೇಂ ಮನಂಗೊಳಿಸಿದರೋ ॥ ೫೪

---

1 ಕ.ನೊತ್ತಿ.

ವ॥ ಅಂತಲಂಕೃತಪರಿಜನನಾಗಿ ಜನತಾವಲ್ಲಭಂ ವಲ್ಲಭೋದ್ಯಾನದಿಂ ಪೊಱಮಟ್ಟು ಪುರಗೋಪುರಾಂತಂಬರಂ

ಮದಗಂಡೇಭವಿಲಾಸಯಾನಮುರದಪ್ರೋಡ್ಡೀನಯಾನಂ ತುರಂ
ಗದವೋರಂಘಿತಯಾನಮುಶ್ವತರಲೀಲಾಯಾನಮಾಂದೋಳನಂ ।
ಮದಯಾನಂ ಮೆಱೆದೊಪ್ಪೆ ರಾಜಗೃಹಮಂ ಪೊಕ್ಕಂ ಪುರಸ್ತ್ರೀಚಳ
ನ್ಮದಿರಾಪಾಂಗಮರೀಚಿ ಬಂದಿದಿಗ್ಗೊರ್ಳಲ್ ತನ್ನಂ ಮಹೋತ್ಸಾಹ [1] ದಿಂ ॥೫೫

ವ॥ ಆಸಮಯದೊಳ್

ಜನರಾಜಂ ವನವಾರಿಕೇಳಿ [2] ವಿಭವಂ ವಾರಾಂಗನಾಲೋಲಲೋ
ಚನರಾಜ್ಜೀದರಹಾಸವಕ್ತ್ರವಲಯಂ ಶ್ರೀಯಂ ಮದೀಯಪ್ರಿಯಾ ।
ಬ್ಜಿನಿಯಂ ತೊಟ್ಟುಟಿವಾಡಿ ಕೀಲ್ಪಡಿಸಿದಂ ತಾನೆಂದು ಕಾಯ್ದಂತೆ ಕೆಂ
ಪಿನ ಸೊಂಪಂ ತಳೆದಂ ತವಿಲ್ಪಗಲೊಳಂ ವಿಶ್ವಂಭರಾವಲ್ಲಭಂ ॥ ೫೬

ವ॥ ಅಂತು ಪೊಕ್ಕು ರಾಜರಾಜಂ ರಾಜಾಂಗಣದೊಳ್ ಅಹಮಹಮಿಕಾ ಪ್ರಣತಪ್ರಚಂಡಮಂಡಳಾಧೀಶ್ವರಮಣಿಕಿರೀಟಮರೀಚಿಮಂಜರೀಪ್ರತಿಬಿಂಬಕ ಚಂದ್ರಕಪಕ್ಷ್ಮಕ್ಷ್ಮಾಸಿದಾನಗಜರಾಜನನುಭಯಕರಪಲ್ಲವನಖಮಯೂಖದೀಪಕಲಾಪಂ ಮುಖಮುದಲಕ್ಷ್ಮಿಗಾರತಿಯನೆತ್ತೆ ಕುಂಭಬಿಂಬದ್ವಯಮಂ ಸುತ್ತಿ ತೊಡೆದ ಪ್ಪಳಿಸುತ್ತೆ ನಿಂದು

ಕಿಱಿದಾಲೋಕನಚಂದ್ರಿಕಾ [1] ಪ್ರಸರದಿಂ ಹಸ್ತಾಬ್ಜವಿನ್ಯಾಸದಿಂ
ಕಿಱಿದಾಂದೋಳಿತಮೌಳಿಯಿಂ ಕಿಱಿದು ತಾಂಬೂಲಪ್ರದಾನಂಗಳಿಂ ।
ಕಿಱಿದಾನಮ್ರಶಿರಸ್ಕಮಂಜಲಿಪುಟವ್ಯಾಲಗ್ನಭಾಳಂ ಜಗ
ಕ್ಕೆಱೆಯಂ ಬೀಳ್ಕೊಡೆ ಪೋಯ್ತು ರಾಜಗೃಹದಿಂ ಸೌಜನ್ಯರಾಜನ್ಯಕಂ ॥ ೫೭

ವ॥ ಅನಂತರಮುವರೂಢಗಂಧಗಜರಾಜರಾಜನನಾರೂಢತವಂಗಭದ್ರಪ್ರಾಕಾರತುಂಗಮಣಿಮಂಡಪನನಧಿಷ್ಠಿತನಿಷ್ಪಪ್ತಕನಕಹರಿವಿಷ್ಟರನನಾಘೂರ್ಣಿತಮಾಂಗಳಿಕಶಂಖದುಂದುಭಿಗಭೀರಭೇರೀಧ್ವಾನಮೆಂಬ ತೆಂಬೆಲರಲಪದಿನಲರ ಗುಲುಂ

1 ಕ. ಗ. ಮಂ. 2 ಗ. ನಿಭದಿಂ. 1 ಗ. ಪ್ರಕರ.

ಷ್ಟನಮಂ [1] ತೂಱಿ ತೊನೆಪನಂಗಜಂಗಮಲತೆಗಳಂತೆ ಕನಕಮಯಭಾಜನವಿಹಿತಸರೋಜರಾಗದೀಪಕಳಿಕಾಕಳಾಪಮೆಸೆವಿನಂ ವಾರನಾರಿಯರಾರತಿಯನೆತ್ತುವವಸರದೊಳ್ ಮಂಗಳಪಾಠಕರ್ ಮಂಗಳವೃತ್ತಂಗಳನಿಂತೆಂದೋದಿ ಕೇಳಿಸಿದರ್

ಘನಮಾರ್ಗೋದಾತ್ತಪಾತ್ರಪ್ರಣಿಹಿತಮಣಿತಾರಾಳಿನೀರಾಜಿತಂ ಮೇ
ರುನಗೇಂದ್ರಂ ನಿನ್ನ ರಾಜ್ಯೋದ್ಭವವಿಜಯಯಶಃಕೀರ್ತಿಲಕ್ಷ್ಮೀಸದೃಕ್ಷಾಂ ।
ಗನೆಯರ್ ಕಣ್ಸೋಲಮಂ ಸಾಲಿಡೆ ನಿವಳಿಪ ದೀಪಾವಳೀಚಾರುನೀರಾ
ಜನಮಾಂಗಲ್ಯಕ್ಕೆ ಮಾಂಗಲ್ಯಮನೆಸಗುಗೆಲೇ ದೇವ ರಾಜಾಧಿರಾಜಾ ॥ ೫೮

ಇಭಚರ್ಮಾಂಬರಭಾಸಮಾನತಿಮಿರಂ ನಿರ್ಮುಕ್ತತದ್ರಕ್ತಸ
ನ್ನಿಭಸಂಧ್ಯಾರುಣಿಮಂ ನಿಮಗ್ನದಿನಕೃದ್ಬಿಂಬೋನ್ಮುಖಾನೇಕರ ।
ಶ್ಮಿಭುಜಂ ಪಶ್ಚಿಮಶೈಲಶಂಭುನಟನಾರಂಭಂ ಜಗತ್ಪ್ರಾಣನಾ
ದ ಭವದ್ಭೂರಿಭುಜಕ್ಕೆ ಮಾಳ್ಕೆ ವಿಭವಶ್ರೀಯಂ ಜಯಶ್ರೀಯುಮಂ ॥ ೫೯

ವ॥ ಎಂದೋದಿ ಮಂಗಳವೃತ್ತಪ್ರಸ್ತಾವನಾನುಗತಮಾದ [2] ವೀಜನದೋಜೆ ಬೀಜಮಾಗೆ ಬಂದು ಪತಾಕೆಗಳಂ ಸಂದಿಸಿ ನಟಯಿಸುವಪರವೇಲಾನಟನನಾಟಕಸಂವಿಧಾನಮೆನಿಸಿ

ದಿವಸಕರಾಪಸಾರಣದೊಳ್ಮೈದಿಸಿ ಬೆನ್ನನೆ ಬರ್ಪ ಪೆರ್ವಾಲ
ಕ್ಕವತಮುಸಪ್ರಚಂಡರರಿಕ್ಕಿದ ಸೊಪ್ಪನೆ ಬೆಂಡ ಱಂಬಿನೊಳ್ ।
ಕವಿಲ ಬಿಸಿಲ್ಗಳೇಂ ಮಱುಸಲಾರ್ತುವೊ ತೀವ್ರಕರಾಭಿಘಾತದಿಂ
ದವನಿಯ ಬೆಂದ ಪುಣ್ಗಲೆಗಳೊಯ್ಯನೆ ಕೆಂಗಲೆಗಟ್ಟಿದಂದಮಂ ॥ ೬೦

ಪುಳಿನತಳಂಗಳೊಳ್ ಸೆಳೆವ ನುಣ್ಮಳಲಂ ಜಳಶೀಕರಂಗಳಂ
ತಳಿದು ಕಳಲ್ದ ಪದ್ಮದಳಸಂಕುಳದಿಂದೆಸಪ್ವಾಸನೊತ್ತಿ ಪೂ ।
ಗೊಳದೊಳಗಲ್ವ ಕೋಕವನಿತಾ [3] ವ್ಯಥೆಗಿಂ ಶಿಶಿರೋಪಚಾರದೊಳ್
ಕೆಳದಿಯರಾದುವಾತಳರ್ವ ತಣ್ಣೆಲರಿಂ ತರಲೋರ್ಮಿಮಾಲೆಗಳ್ ॥ ೬೧

---

1 ಕ ತೂಗಿತೊನೆವ. 2 ಭಾಜನಯೋಜೆ. 3 ಗ. ಗೇಂ.

ನಳಿನೀಸಂಪತ್ತಿಸೂತಂ ಪೆಱಗುಡುಗಿ ಹಯಂ ಜಾಱಿ ತೋಳ್ವಾಱಿ ತೇರ್ ವ್ಯಾ
ಕುಳಚಕ್ರಂ ಸಿರ್ಕೆ ಶೃಂಗಾಗ್ರದಿನಿಟಿಪೆಡೆಯೊಳ್ ಪದ್ಮಿನೀಕೋಶದೇಶಾ ।
ವಳಿಯಂ ಕೈಕೊಂಡು ಬೆಂಬತ್ತಿಸೆ ತಿಮಿರಬಲಂ ಕಂಡು ತಾಂ ಸೂರ್ದನಸ್ತಾ
ಚಳದೊಳ್ ಕೆಂಬಟ್ಟೆಯೊಂದಡ್ಡಣದೊಳೆ ಮುಗುಳ್ದಂತೆಡ್ಡವಾಯ್ತರ್ಕಬಿಂಬಂ ॥

ವ॥ ಅನಂತರಂ

ಅಪರಾಂಭೋಧಿತರಂಗಮೆಂಬ ತೊವಲೊಳ್ ತ್ರಿಂಶ [1] ದ್ಘಟೀಪರ್ವದಿಂ
ದೆ ಪವಣ್ಗಟ್ಟಿದ ದೊಂಟಿಯಂ ಕೊಳಿಸಿ ಕಾಳವ್ಯಾಧನಸ್ತಾಚಲಾಂ ।
ಘ್ರಿಪದಿಂದಂಬುಜಮಿತ್ರಬಿಂಬಫಲಮಂ ತದ್ವಾರುಣೀಪಾನಕೇ
ಳ್ಯಪದಂಶವ್ಯಪದೇಶದಿಂದೆ ಸೆಳೆದಂ ದೊಪ್ಪೆಂದು [2] ಬೀೞ್ತರ್ಪಿನಂ ॥ ೭೩

ವ॥ ಅದಲ್ಲದೆಯುಂ

ಕಟಿಪದನಾದ ಬಾಸರಬಿಸಿಲ್ ತೆರೆಯಂತಿರೆ ಬಟ್ಟಲಿಟ್ಟು ತಂ
ದಿಟಿಪಿದ ಲೋವೆಯಂತಿರಪರಾಚಲಕೋಟಿ ನಿಶಾತಮಿಃ ಪ್ರಯೋ ।
ಗಟುಗುವ ದೂಳಿಸಂಜೆಯನೆ ಪೊರ್ದಿರೆ ಪಿಂಬಗಲೆಂಬ ಲಗ್ನಿಗಂ
ಘಟಿಗೆಯ ಬಟ್ಟಲಂತೆ ಮುೞುಗಿತ್ತಪರಾಬ್ಧಿಯೊಳರ್ಕಮಂಡಲಂ ॥ ೭೪

ರಸಗೀತಾತೋದ್ಯನೃತ್ಯಾನುಗದೊಳೆ ಕಹಳಾಶಂಖಭೇರೀಮೃದಂಗ
ಪ್ರಸರಂ ಮೇಳಾಪಕಂ ಘೂರ್ಣಿಸೆ ಮಣಿಶಿಖರಾಗಾರಪಾರಾವತಂಗ ।
ಳ್ಗಸಿತೋದ್ಯದ್ಧೂಪಧೂಮಚ್ಛವಿ ಗಳರವಮಂ ವಲ್ಲಭಾರೋಚದಿಂ ಪು
ಟ್ಟಿಸೆ ಜೈನೇಂದ್ರಾಲಯಂಗಳ್ಗೆಸೆದುದಸದಳಂ ಧೂಮವೇಳಾವಿಳಾಸಂ ॥ ೭೫

ವ॥ ಆಗಳಾದೇವಂ ದೇವಾಗಾರದೊಳಪರವೇಳಾಯಾಮನಿತ್ಯಾರ್ಚನಾವಿಧಾನಮುಮಂ ತೀರ್ಚಿ ತೀರ್ಥನಾಥಂಗೆ ಕುಸುಮಾಂಜಲಿಯನಿತ್ತುಭಯಕರಕಿಸಲಯರಾಗಭೋಗದಿಂ ನಿಟಿಲತಲಮಲಯರುಹಕ್ಕೆ ಕೇಸರದ ದೇಸೆಯಂ ಪಡೆದು

ಕುದಿಯೆ ನೆಲಕ್ಕೆ ಕಾಯದ ಮುಗಿಲ್ ಮಱೆಯಾಗದ ರಾಹುಪೀಡೆ ಪೊ
ರ್ದದ ದಿವಸಾವಸಾನದೊಳಡಂಗದಿರುಳ್ ಪೆಱತೊಂದು ಮೂಡೆ ಪಿಂ ।

[1] ಕ. ದ್ಘ್ನ.    [2] ಕ. ಬಿೞ್ತಪ್ಪನಂ.

ಗದ ಸಹಜಪ್ರಕಾಶಶತಕೋಟಿರವಿಪ್ರಭ ನಿನ್ನ ತೇಜಮ
ಲ್ಲದೆ [1] ದುರಿತೋದ್ಯಮಂ ಪೆಱರ ತೇಜಮಡಂಗಿಪುವೇ ಜಿನೇಶ್ವರಾ ॥ ೬೬

ವ॥ ಎಂದು ತತ್ಸಮಯಾಭಿರೂಪಗುಣ [2] ವಸ್ತುಪರಿಪುಷ್ಟನ ಸ್ತವನದಿನ ಬಿಷ್ಟುತಿಗೆಯ್ದು ಗಂಧಜಲಸಿದ್ಧಶೇಷಾಕ್ಷತಪ್ರಸರಕುಸುಮಿತಾಳಕಲತಾಜಾಲಕನಾಸ್ಥಾನಭವನಭದ್ರವೇದಿಕೋಪಾಂತದೊಳ್ ವಾರನಾರೀನೀರಾಜಿತದೀಪಕಳಿಕಾಳಾಪನುಂ ತದವಸರೋಚಿತಚತುರಪ್ರಸಾದಿತಕವಿಜನಾಳಾಪನುಮಾಗಿರ್ದನಾಗಳ್

ಕರೆದುವು ತಾಮರಲ್ದಗಿವ ತಾಮರೆ ಕೂಡೆ ಕುಕಿಲ್ವ ಪಕ್ಕಿಗಳ್
ಪರೆದುವು ಮಾಣದಂಡಲೆವ ಹಂಸೆಗಳುಂ ತಡಿಸಾರ್ದುವಿನ್ನುಮೈ ।
ಸಿರಿ ಬರಲುಂಟು ಚಂದ್ರಬಲಮುಂಟು ನಿಶಾಬಲಮೆಂದು ರಾಗದಿಂ
ಬಿರಿವವೊಲೇನೆಸಟ್ಮಸಗುತಿರ್ದುವೊ ನೀಲಸರೋಜಮಾಲೆಗಳ್ ॥ ೬೭

ಎನಗಾರಿರ್ದಪರೀರಥಾಂಗಮಿಥುನಕ್ಕೆಂತೊಲ್ಲದಲ್ ನೀಲಪ
ದ್ಮಿನಿಯೆನ್ನಂ ನಗುವಂತು ಮಾಡಿದೆ ಧರಿತ್ರೀನೇತ್ರ ನೋಡೆನ್ನ ಕೇ ।
ಡನದೇವೋದಪೆಯೆಂದು ಸಂಕುಚಿತವಕ್ತ್ರಾಸಕ್ತ [3] ಭೃಂಗೀಕಲ
ಧ್ವನಿಯಿಂ ಕೂಗಿಡುವಂತಿರಾಯ್ತು ದಿನಪಂಗಂಭೋಜಿನೀಕುಟ್ಮಲಂ ॥ ೬೮

ಮುಗಿವ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ
ತೆಗೆಬಗೆಯಾಗಿ ಸ್ವೈರಿಸದೆ ಷಟ್ಪದಸಂತತಿ ರಾಜಬಾಧೆಯಿಂ ।
ಸುಗಿವ [4] ನವಪ್ರಸಾದಫಲದಿಂದಗಿದಾಪ್ತಗೃಹಕ್ಕೆ ಕೂರ್ಪ ಬಂ
ಧುಗಳೆಡೆಯಾಡುವಂತಿರೆಡೆಯಾಡಿದುವಂಬುರುಹಾಕರಂಗಳೊಳ್ ॥ ೬೯

ವ॥ ಆಗಳ್

ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗ
ಲ್ಬುವ ದಿವಸಾವಸಾನಸಮಯಕ್ಕೆ ಕನಲ್ದುರಿದೇಟ್ವ ಸಂಜೆ ಪೊ ।
ತ್ತುವ ತಮಮುತ್ತಮಿತ್ತಮಳುರ್ದತ್ತಲೆ ಪೊರ್ದಿದ ಪೊಟಿಲೊಳ್ ಮಿಡುಂ
ಕುವ [5] ಜೆಳುಗಾಪಿನಂತಗಲಲಾರದಗಲ್ದುವು ಜಕ್ಕವಕ್ಕಿಗಳ್ ॥ ೭೦

1 ಕ. ರುದಿತೋ. 2 ಕ. ವಸ್ತುತಿ. 3 ಕ. ಕುಲ. 4 ಕ. ವನ. 5 ಕ. ಬೆಳುವಾ.

ಎರಲಲೆಪಿಂದೆಸಟ್ಟಿಸುಪ ನೆಯ್ದಿಲನೋಪಳೆಗೆತ್ತು ಗೆಂಟಱೊಳ್
ಕರೆದುದು ಬಾರಳಾಂ ಕರೆದೊಡಂ ಪ್ರಿಯೆಯೆಂದು ಕನಲ್ದು ಚಂಚುವಂ ।
ಮುರಿದುದು ಬಂದಡಂಗಿದಳೆಗೆತ್ತು ಬಿದಿರ್ಚಿ ದಳಂಗಳಂ ತೆಱಂ
ದಿರಿದುದು ಜಕ್ಕವಕ್ಕಿ ಮಿಗೆ ಮುಚ್ಚೆಗೆ ಸಂದುದು ಕಾಣದೋಪಳಂ ॥ ೭೧

ಗಟಿಯಿಸುವ ತಮಂ ಮೂಡಲ್
ಪೊಪೆಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂ ।
ಡೆಟಲೆ ಧರೆಗರ್ಧನಾರಿಯ
ತಪವಿಡಿದಂತಾಯ್ತು ಗಗನಮಂಡಲಮಿನಿಸುಂ ॥ ೭೨

ದಿನನಾಥಂ ಪೆಱಪಿಂಗೆ ಪೆತ್ತು ತೆಱಪಂ ಮೆಯ್ವೆರ್ಚಿ ರಾಗಂ ನಿಶಾಂ
ಗನೆಯಿಂ ಮುನ್ನೆ ಮೃಗಾಂಕನೊಳ್ ನೆರೆಯಲೆಂದಾಶಾವಧೂದೌತ್ಯವ ।
ರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲಚೇಲಾವಗುಂ
ಠನಮಂ ತಾನೆನೆ ದಟ್ಟಮಾಗಿರೆ ತಮಂ ತಳ್ತಿತ್ತು ದಿಕ್ಪ್ರಾಂತಮಂ ॥ ೭೩

(ತರಳವೃತ್ತಂ)

ಮೃಗಧರಂಗೆ ನಿಶಾಸತೀವರಮಾಲೆಸೂಡುವ ನೀಡಱೊಳ್
ದಿಗಧಿಪಾಳಿ ಘನಾವಳೀನವಪಾಟಕರ್ಮವಿತಾನಮಂ ।
ನೆಗಪಿದಂತೆಳಮರ್ಬಿನೊಳ್ ಪೊಳೆಪಂ ಪಳಚ್ಚನೆ ತಾಳ್ದಿ ತಾ
ರಗೆಗಳಾಯ್ದುಗೆಪೊಯ್ದು ವೊಲಿರೆ ಬಿಚ್ಚನಾಯ್ತು ನಭಸ್ಥಲಂ ॥ ೭೪

ಉದಯಂಗೈವುತ್ಪಲಾಧೀಶ್ವರನನಮರಕಾಂತಾಳಿ ನೀರಾಜನಂ ಮಾ
ಡಿದ ಮಾಣಿಕ್ಯಪ್ರದೀಪಾವಳಿಯ ಬೆಳಗು ತದ್ವಾಮವಾಮೇತರಾಶಾ ।
ಸುದತೀಪಿಷ್ಟಾತಕಾಕೀರಣಕಪಿಶರಜಃಪುಂಜಮೆಂಬತದೇಂ ಪ
ರ್ವಿದುದೋ ಕಂದರ್ಪಯಾತ್ರಾಬಳಚಳನಪರಾಗಂ ತದುದ್ಯೋತರಾಗಂ ॥

ನೂಂಕಿ ಬರೆ ನುಣ್ಮಲರ್ವೆಳ
ಗಿಂ ಕುತ್ತಿರೆ ತಡಿಸಡಿಲ್ದು ತಮುಮಭ್ರತಟಾ ।
ಕಂ ಕಣ್ಗೆ ಬಳಸಲಾಯ್ತು ಮೃ
ಗಾಂಕೋದಯಮುಖನಿದಾಘಸಮಯಾಂತರದೊಳ್ ॥ ೭೬

ವ॥ ಆಗಳ್ ನಾಗರಿಕಂ ವಿಟವಿದೂಷಕಪೀಠಮರ್ದಕರ್ಗೆ ದೇವಾ ನೀಂಚಂದ್ರೋದಯಪ್ರಾಗ್ಭಾವಕ್ಕಮಾನಂತರ್ಯಮಯೂಖಲೇಖೋನ್ಮುಖತೆಗಂ ವಿರಚಿಸಿದ ಪದ್ಯದ್ವಿತಯಮತಿಕೌತುಕಮಾದುವವಂ ಕೇಳಿಮೆಂದಾರಭಟಿಗನುಗತವಾದ ಗಮಕದಿನಿಂತೆಂದು ಕೇಳಿಸಿದಂ

ತೊರೆದುದು ಚಂದ್ರಕಾಂತಮಣಿ ಕಣ್ದಿಱಿಯಲ್ ಮಿಡಿಕಿತ್ತು ನಿದ್ರೆಯೊಳ್
ಪೊರೆದ ಚಕೋರಿಕಾಹೃದಯವರ್ಣವತೀರತರಂಗವುಕ್ಕಲು ।
ಬ್ಬರಿಸಿದುದುಳ್ಳೆಸಟ್ಮುಮಸಕದಿಂ ತನಿಗೆತ್ತುದುವುತ್ಪಲಕ್ಕೆ ಭಾ
ಸುರರುಚಿ ಮುನ್ನೆ ನೆಟ್ಟನೊಗೆಯಲ್ ಬಗೆದಂದೊಡೆ ಚಂದ್ರಮಂಡಲಂ ॥ ೭೭

ಗಗನಶ್ರೀಕುಚಭಾರದೊಳ್ ಪೊಳೆವ ಮುಕ್ತಾಲಂಬನಂ ಧ್ವಾಂತದಂ
ತಿಗೆವಾಯ್ದಿಂದುಮೃಗಾರಿ ಕೋರಿಸಿದುಗುರ್ ತಾವೆಂಬಿನಂ ಉರ್ವಿಯೊಳ್ ।
ಪುಗುವಾಗಳ್ ಪಡೆದೇಂ ಕದುರ್ಕಿಂಕಿದುವೊ ಪೊಕ್ಕಾಯ್ದಾಯ್ದು ಚಂಚಚ್ಚಕೋ
ರಿಗಳೆತ್ತಂ [1] ತಿಲ ತಂಡುಳೀಕೃತನವಜ್ಯೋತ್ಸ್ನಾಂಕುರಾಸಾರಮಂ ॥ ೭೮

ವ॥ ಅಂತೋದಲೊಡಂ ತಮತಮಗೆ ಪೆರ್ಚಿ ಪೆಸರಿಟ್ಟು ಪೊಗಟ್ಟು ಕಾವ್ಯಕಲಾಭಿಜ್ಞರಂ ಸಾಹಿತ್ಯಸರ್ವಜ್ಞಂ ನಿಲಿಸಿ ತಾದಾತ್ವಿಕಪ್ರಸಂಗಾಂತರನಿಮಿತ್ತಂ [2] ಸುರತವಿಲಾಸನೆಂಬ ಕವಿಯ ಮೊಗಮಂ ನೋಡಿ ನೀ ಪೇಲ್ದಚಂದ್ರೋದಯವರ್ಣನೆಯೊಳತಿಶಯಮಾದುದುವನೋದೆಂಬುದುಮಾತಂ ಮಹಾಪ್ರಸಾದಮೆಂದು

ಎಳವೆಱೆ ಮೆಲ್ಲಮೆಲ್ಲನೆಳಸುತ್ತಿರೆ ಮೂಡುವ ಶೀತಭಾನುಮಂ
ಡಳದ ತೃತೀಯಭಾಗಮಿಳಿಸುತ್ತೆ ಕಳಾವೃತದೀಪ್ತಿಯೊಳ್ ಜಗ ।
ದ್ವಳಯದ ಕಣ್ಗಳಂ ಸುಖಸುಧಾರಸದಿಂ ತಣಿಪಲ್ ಮನೋಜಮಂ
ಗಳವಧು ಕಜ್ಜಲಕ್ಕೆ ಕವಿದಿಟ್ಟ ಹಿಮೋಪಲಭಾಂಡಕಾಂಡಮಂ ॥ ೭೯

ಬಿಂಬದೊಳಗಿರ್ಪ ಜಿನಪತಿ
ಬಿಂಬಕ್ಕೆಳೆಯಿಂದೆ ಪೆರ್ಚಿ ಕಣ್ಣೆಂಜಲ್ಗಿಂ ।

1 ಕ. ತಿಳಿ. 2 ಕ. ಗ. ಸುಕರ.

ದ್ರಂ ಬಿಗಿದ ಪೊನ್ನಕಾಹಳೆ
ಯೆಂಬಿನಮೆಸೆದಂ ಮೃಗಾಂಕನರ್ಧೋದಯದೊಳ್ ॥ ೮೦

ವ॥ ಅವನೀವಿಯಚ್ಚವನಸಮಯದೊಳಮರಸಿತಂಬಿನಿಯರಾಡುವ ಸಿಂಪಿಣಿಯೊಳೊತ್ತಿದ ಜೀರ್ಕೊಟವಿಗಳಿನೊತ್ತರಿಸಿ ನೂಂಕುವ ಚಂದನವಸುಧಾರೆಯಂತೆಯುಂ । ಗಗನತಟಾಕದೊಳೊಗೆದು ಪೊಳೆವ ಮೀಂಗಳೆಂಬ ಮೀಂಗಳ್ಗೆ ಬಿಂಬಮೆಂಬ ಪೊಂಬಱುಗಲ ಕಳಂಕಧೀವರನಡರೆ ಬೀಸಿದ ಜಾಲದಂತೆಯುಂ। ಜಗಮನದಟಲೆವಲರ್ವಿಲ್ಲ ಬಲ್ಲಹಂಗೆ ವಸಂತವನಪಾಲಕನಲರ್ಗಣೆಯ ದೋಣಿಯನಗೆವೊಯ್ದಂತೆಯುಂ ಕೆದಱಿ ನಾಂದಿ ಪೊದಱುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲಿವೊಯ್ದು ನಖದಿಂ ನಲಿಗೆದಱಿ ಕೋಡ ಗಱಿಯಿನೀಡಿಱಿದು ಮುಡಿಯಿಂ ಮರಲೆವಾಯ್ದು ತಿಱುಗದಿರಂ ಮಱುವಕ್ಕಿಗೆ ನೂಂಕಿ ತನಿಗದಿರನಿನಿಯಂಗೆ ನೀಡಿ ನೆರೆಗದಿರಂ ಧಾರೋಷ್ಣಂಗುಡಿದು ಮನದ ಪಸವೋಡಿ ತನು ತಣಿದು ಕೋಡಿಂ ಕಣ್ಣಾರೆ ನೋಡಿ

ಮದನದವಾಗ್ನಿತಪ್ತೆಯರ ಸುಯ್ಯ ನಖಂಪಚಮಾಗಿ ಬರ್ಪ ತ
ಣ್ಗದಿರನೆಲರ್ಚಿ ಚಂಚುವಿನೊಳೊಯ್ಯನರಲ್ದೊಲೆವುತ್ಪಲಾಗ್ರಪ।
ತ್ರದೆ ಮೊಗೆದೂಡಿ ಪಾಡಿ ನಲಿವಾಱಿಸಿ ತೋಱಿಸಿ ಸೋಂಕಿ ನೂಂಕಿ ಕಾ
ಮುದಿಯೊಳದೇಂ ಚಕೋರಿ ಹಿಳುಗಾಣಿಸಿದತ್ತೊ ನಿಜಾಗ್ರಶಾಬಮಂ ॥ ೮೧

ದಿವಿಜಾಶಾಗಿರಿಕೂಟಕೇಸರಿ ವಿಯನ್ಮಂದಾಕಿನೀಹಂಸೆ ಮಾ
ನವತೀಲೋಚನಬಾಣಚಂದ್ರಿಕೆ ಚಕೋರೀಪಾನಲೀಲಾಮೃತಾ ।
ಪ್ಲವಕಾಸಾರಮನಂಗಮಂಗಳವಧೂಟೀದರ್ಪಣಂ ತಾನಿದೆಂ
ಬ ವಿಲಾಸಕ್ಕೆ ನಿವಾಸಮಾಯ್ತುದಯದೊಳ್ ಪೀಯೂಷರುಗ್ಮಂಡಲಂ ॥ ೮೨

ಉದಯೋರ್ವೀಧರಕುಂಕುಮೋದ್ಗಮರಜಂ ಪಾಯ್ದಂತೆ ಕೆಂಪೇಱಿ ಪೂ
ರ್ವದಿಶಾಕಾಂತೆಯ ತೋಳೊಳಿರ್ದರಿಸಿನಂ ತಳ್ತಂತೆ ಪೊಂಬಣ್ಣವೇ ।
ಱಿ ದಿವೌಕಃಪ್ಲವದೊಳ್ ಮುೞುಂಕಿ ತೊಳೆದೇಟ್ತಂದಂತೆ ಬೆಳ್ಪೇಱಿ ತ
ತ್ವದೃಢಾಭ್ಯಾಸಿಯ ಚಿತ್ತದಂತೆ ತಿಳಿದಂ ತಾರಾವಧೂವಲ್ಲಭಂ ॥ ೮೩

ಉದಯಂಗೆಯ್ದೊಡೆ ಕಂಡು [1] ಕಾಮಿನಿದಿರೆಬ್ದಾಲಿಂಗನಂಮಾಡಿದಂ
ದದೆ ಚೈತ್ರಂ ತನಗಿತ್ತ ನೀಲಮಣಿಹಾರಂ ಪೇರುರಕ್ಕೇಱಿದಂ ।
ದದೆ ರಾತ್ರೀಪ್ರಿಯೆ ಸೂಚ್ಚಗವಂದು ಪದಪಿಂ ಪರ್ಯಂಕದೊಳ್ ನೆಮ್ಮಿದಂ
ದದೆ ಕಣ್ಗೇನಮೃತಾಂಜನಂ ಮೆಱೆದುದೋ ಲಕ್ಷ್ಮಂ ಮೃಗೀಲಕ್ಷ್ಮನೊಳ್ ॥೮೪

ಬಳವೈರಿಯೆಂಬ ಸಾಧಕ
ನಿಳೆಯಂ ಪೊಸಪೂಸೆಮಾಡಿ ಶಶಿಮಂಡಲಮಂ ।
ಗುಳಿಗೆಯಿಡೆ ತಿಮಿರಕಾಳಿಕೆ
ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ ॥ ೮೫

ಅವನೀವಲ್ಲಭೆ ಕೋಡ ಬೆಳ್ವಸದನಂ ನೀರೇಜಗರ್ಭಂ ವಿಯು
ದ್ಧವಳಾಗಾರದೊಳಿಟ್ಟ ಪಾಲ್ಗೊದೆಕವಳ್ ಮಿಂಚಿಂ ದಿಗಂತಂ ಮುಟುಂ ।
ಗುವಿನಂ ಪೂಸಿದ [2] ಶಂಖಮೊಲ್ದುಟಿದರಂ ಪಾದರ್ಾದಿಸಲ್ ಸಾರ್ದು ಕಂ
ತುವಸಂತರ್ ತೆರೆವೇಂಟಿಗಿಟ್ಟ ದುಗುಲಂ ಪರ್ವಿತ್ತು ಚಂದ್ರಾತಪಂ ॥ ೮೬

ಕುಸುಮಂ ಗಂಧಾನುಮೇಯಂ ಗಮನಕಮನಹಂಸಾಳಿ ಶಬ್ದಾನುಮೇಯಂ
ರಸನಾಸ್ವಾದಾನುಮೇಯಂ ಮಧು ಮಲಯರುಹಕ್ಷೌಮಕಪೂರ್ರಮುಕ್ತಾ ।
ವಿಸರಂ ಸ್ಪರ್ಶಾನುಮೇಯಂ ದಿಟಮೆನೆ ಘಟಿತಂಬೆತ್ತು ಬೆಳ್ದಿಂಗಳಂ ಭಾ
ವಿಸೆ ಲೋಕಂ ಚಂದ್ರಕಾಂತೋಪಲದ [3] ನಯನದೊಳ್ ಮಾಡಿದಂತಿರ್ದುದಾಗಳ್॥

ವ॥ ಎಂದೋದಿ ಮೆಚ್ಚಿಸುವೆಡೆಯೊಳ್ ಪರಿಹಾಸಕನೆನಗಿದೆತ್ತಣ ಕುತ್ತವೀ ಸರಸಗೋಷ್ಠಿಯೊಳಾನುಮೆಲ್ಲರಂ ನೋಡಿ ದೇವಾ ತಲೆದೂಗಲ್ ಪಡೆಯೆನಾದಪೆ ಯಿಂದಿನ ಕೌಮುದೀಮಹೋತ್ಸವದೊಳ್ ಪುರವಿಲಾಸಮಂ ತಾವೆಲ್ಲರ್ ನೋಡುವತ್ತೆಯಿಂ ನಿಮ್ಮಡಿಗಳಂ

ಕರೆಯ [4] ಲ್ಕಣ್ಮದೆ ಪೀಠಮರ್ದಕನುಮೆನ್ನಂ ಪಚ್ಚುವಂ ಮತ್ತೆ ನಾ
ಗರಿಕಂ ನೂಂಕಿದಪಂ ವಿಟಂ ಬೆರಲ ಕೊಂಕಿಂ ಸನ್ನೆಗೈದಪ್ಪನೆ ।

1 ಕ. ಕಾಮಿಸಿ. 2 ಕ. ಜ. ಸೂಸಿದಶಂಖಮೊಲ್ದುಗುಳ್ದರಂ.
3 ಮಯ ಇ. ಕಾವ್ಯಸಾರದಲ್ಲಿರುವ ಪಾಠ. 4 ಗ. ಲ್ಮಾಣದೆ.

ಲ್ಲರ ಮಾತೇಂ ಭವದಂಘ್ರಿಪಲ್ಲವಮನೀವಾತಾಯನೋಪಾತ್ತ ಶೀ
ತರುಚಿಪ್ರಾಂಶುಕರಂ ಕರಂ ಪಿಡಿದುವಿನ್ನೀಸಲ್ಗೆಯಂ ಮನ್ನಿಸಿಂ ॥ ೮೮

ಎಂದು ವಿದೂಷಕನರಸನ
ಮಂದಸ್ಮಿತಲೋಚನಾಂಶು ಮನದನುಮತಿಯಂ ।
ಮುಂದಿಡೆ ಭೋಂಕನೆ ಕೈಗುಡು
ವಂದದೊಳೆ ಪಸಾದಮೆನುತೆ ಪೊಡೆವಡುತೆಟ್ಟಂ ॥ ೮೯

ವ॥ ಅಂತು ರಾತ್ರೀವಿಹಾರಕ್ಕಭಿಮುಖಂ ಮಾಡಲೊಡಂ

ಧವಳಾಪಾಂಗಮರೀಚಿ ಮಂಡಳಿಸಿ ನಿಂದಂತಿರ್ಪ ಕರ್ಪೂರ ಕ
ರ್ಣವತಂಸಂ ಹರಿಚಂದನಂ ವಿಚಕಿಲಂ ಮುಕ್ತಾಫಲಂ ಕ್ಷೋಭಮೆಂ ।
ಬಿವಱಿಂ ಭೂಭುಜನೊಪ್ಪಿದಂ ಮೆಱೆವ ಪೌರಶ್ರೀಯನಿಂತೆಂದು ಬಿ
ನ್ನವಿಸಲ್ ಚಂದ್ರಿಕೆ ಬಂದು ಸಲ್ಗೆವಡೆದೊಲ್ದಾಲಿಂಗನಂಗೈದವೊಲ್ ॥ ೯೦

ವ॥ ತದನಂತರಂ

ಪೊಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂ
ಪುಟಿಸೆ ವಿಮಾನಮಂ ನಭದೊಳಿಟ್ಟಭಿವೀಕ್ಷಿಸಲಿಂದುಬಿಂಬದಿಂ ।
ದಿಟಿವಮೃತಾಂಶುಮೂರ್ತಿಯೆನೆ ಸಾಂದ್ರಸರೋಜ್ಜ್ವಲಚಂದ್ರಶಾಲೆಯಿಂ
ದಿಟಿದು ನರೇಂದ್ರಚಂದ್ರನೊಲವಿಂ ತಳರ್ದಂ ನಿಜರಾಜಗೇಹದಿಂ ॥ ೯೧

ಪರಿದ್ಯೈದಿ ನಗರದೊಳ್ ನಾ
ಗರಕಂತರಕೋವಿದಂ ವಿಟಂ ಪ್ರಹಸನತ ।
ತ್ಪರನೆನಿಸುವವಂ ವಿದೂಷಕ
ನರಸಂಗನು ಪೀಠಮರ್ದಕಂ ನಾಯಕರೊಳ್ ॥ ೯೨

ಅನುನಾಯಕರೀನಾಲ್ವರು
ಮನುಕೂಲಂ ದಕ್ಷಿಣಂ ಶಠಂ ದುಷ್ಟಂ ನೆ ।
ಟ್ಟನೆ ನಾಯಕ [ರಿವ] ರೆಣ್ಬರು
ಮನುಭರ್ತುಗೆ ಲಲಿತನಾಯಕಂಗೆ ಸಹಾಯರ್ ॥ ೯೩

ಅನುಕೂಲಾದಿಗಳೆಂಬ ಮಂದಪವನಂ ಚಂದ್ರಂ ವಸಂತಂ ಮುಗು
ಳ್ದ ನವಾಮ್ರಂ ಪಿಕಕೀರಭೃಂಗಕಳಹಂಸಶ್ರೇಣಿ ಕೈಕೊಂಡು ಬ ।
ರ್ಪಿನೆಗಂ ಮನ್ಮಥಚಕ್ರವರ್ತಿ ನಡೆದೀಬಂದಪ್ಪನೆಂಬೊಂದದೇ
ನೋಲವಿಂದಂ ಪೊಱಮಟ್ಟು ರಾಜಗೃಹಮಂ ಸಾಹಿತ್ಯರತ್ನಾಕರಂ ॥ ೯೪

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃ
ಕರಣ ಕವಿಚಕ್ರವರ್ತಿಬಿರುದ ಕವಿಥಾಳಲೋಚನ ಜನಾರ್ದನ
ದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್
ಜನ್ಮಾಭಿಷೇಕ ವರ್ಣನಂ ಚಂದ್ರೋದಯವರ್ಣನಂ
ಸಪ್ತಮಾಶ್ವಾಸಂ

---

# ಅಷ್ಟಮಾಶ್ವಾಸಂ

ಶ್ರೀಯಂ ಕೂರಿಸಿ ವಿಜಯ
ಶ್ರೀಯಂ ತೋಳ್ವೆರಗಿನೊಳ್ ಮನಂಗೊಳಿಸಿ ವಚ ।
ಶ್ರೀಯಂ ಮುಖಸರಸಿರುಹದೊ
ಳೋಯಿಸಿ ನೆಗಳ್ದಂ ವಿನೇಯಜನಮುಖತಿಲಕಂ ॥ ೧

ವ॥ ಅಂತು ಪೊಱಮಟ್ಟಧಿರಾಜಮಾರ್ಗಂಬಿಡಿದು ನಡೆತಂದು ವಿಪಣಿ ವೀಧಿಯಿಕ್ಕೆಲಂಗಳೊಳ್ ಕಿಕ್ಕಿಱಿಗಿಱಿದ ಕುಸುಮಾಂಗದ ಲೇಪನಾಂಗದ ಕಲ್ಪಲತೆಗಳಂತೆ ನಿಂದ ನೀಱರ ಮನಮಂ ಬೆಲೆಗೊಂಡು ಮಾಱುವ ಮಾಲೆಗಾರ್ತಿಯರ ಘಟ್ಟಿವಳ್ತಿಯರಂಗಪರಿಮಳದೊಳ್ ದಳಂಬಡೆದು ಪಡುಗಟ್ಟಿ ಪರಿವ ಮಿಾಸಲ್ವಾಸಿಗದೋಗರದಣ್ಪಿನ ಸೌರಭಸಂಗಮದೊಳೀಸುವಂತೆ ವಿಲಾಸದಿಂ ನುಸುಳ್ದು ಬರ್ಪಾಗಳ್ ಕಂಗಳಂಗಳಕ್ಕೆ ವಂದ ಕುಡುಮಿಂಚಿನ ಕುಡಿಯನ್ನಳಪ್ಪ ಚನ್ನೆಯೊರ್ವಳ್

ಗರಗರನಾದ ಬೆಳ್ಪಸದನಂ ಪೊಸಜವ್ವನದೇಳ್ಗೆ ದೇಸೆಯೊಳ್
ಪೊರೆದ ವಿಲಾಸಮೊಪ್ಪೆ ನಡೆತರ್ಪಳನಾನೃಪಕಂತು ಕಂಡು ಕ ।
ಪ್ಪುರದ ಪುರಂಧ್ರಿ ಮಲ್ಲಿಗೆಯ ಮಾನಿನಿ ಮುತ್ತಿನ ಮುಗ್ಧೆ ಚಿತ್ತಜಂ
ಕರುವಿಡೆ ಸಂದ ಚಂದನದ ಲೆಪ್ಪದ ಸುಂದರಿಯೆಂದು ನೋಡಿದಂ ॥ ೨

ವ॥ ಆಕೆಯಂ ಕಂಡು ನಾಗರಿಕಂ—ಈ ನಡೆವ ನುಡಿವ ಚಂದ್ರಕಲೆಯ ಲಾವಣ್ಯಚಂದ್ರಿಕೆಯೊಳೆಮ್ಮ ನಾಯಕರ ನಯನಚಕೋರಿಗಳ್ ಪಾರಣೆವಡೆದು ಪಟುವಾದುವು ಇನ್ನಾವ ಲೇಸುಮಂ ನೋಡಲೊಳವು ನಡೆಯಿಮೆಂದು ಬರೆವರೆ

ಸುರತಸ್ವೇದಲವಾದ್ರ್ರಭಾವಭರಮುಂ ತನ್ನಂದನೋಪಾಂತದೊಳ್
ವಿರಹಾಸಕ್ತವಿಟೀವಿಟಶ್ವಸಿತಕೀಲಾಪೀತಮಾಗುರ್ವರೇ ।

ಶ್ವರದಿವ್ಯಾಂಗದ ಶೈತ್ಯಸೌರಭಮನಂತುತ್ಕೀರಪಾರಾವತ
ಸ್ವರದಿಂ ಬೇಟ್ಪುವೊಲಾಯ್ತು ವಾರವನಿತಾಪ್ರಾಗಾರಚಾರಾನಿಲಂ ॥ ೩

ವ॥ ಅಂತು ಬಂದ ಮಂದಾನಿಲನೋಲಗಕ್ಕಾಲೋಕನದ ನಿಮಿಾಲನಮು ವಸರಂಗುಡೆ ಸೂಳೆಗೇಱಿಯಂ ಪುಗುತರ್ಪಾಗಳೊಂದು ಸುಧಾಧವಳಭವನವಾ ಕುಟ್ಟಿಮಪ್ರಘಣಾಂತರದೊಳ್ ಬೆಳ್ದಿಂಗಳ ಬಿತ್ತನಗೆವೊಯ್ದಂತೆ ಮುಗುಳ್ತು ಮೆಱೆವ ಮಾಧವಿಯ ಮಂಡಪದ ಬಳಸಿನೊಳಗೆ ಪಳುಕಿನ ಕುಂಭದೊಳಂ ತೆಱರ ಮೆಲ್ಲೆಸಳ್ಗಳೊಳಂ ಮುಗುಳ ಲಂಬಣದೊಳಂ ಮುತ್ತಿನ ಮಿಳಿಯೊಳಂ ಬಿತ್ತರಂ ಬಡೆದ ನವಿಲುಯ್ಯಲ ಪೂವಿನ ತಂಬುಲದ ಕತ್ತುರಿಯ ಕಪ್ಪುರದ ಬೀಯದ ಬಾಯಿನದ ವಿಲಾಸಮುಚ್ಚರಿಯಾಗೆ ಪಚ್ಚೆವಡಿಸಿದುಯ್ಯಲ ಮಣಿಯ ಕಡೆಯಂ ಪಿಡಿದು ಚಿತ್ತವಲ್ಲಭನೊತ್ತಿಸಾರ್ಚ ಮಾಂಗಳಿಕಮನುಗ್ಘಡಿಸೆ ತುಂಗಕುಚಭರಾಲಸ ಗಮನೆ ನಡೆತಂದು ನಿಂದು ನೋಡಿ

ತುದಿಕೊಳಿಸಿರ್ದ ವಾಮಚರಣಂ ಮಣಿಯಂ ಬಲದಂಘ್ರಿ ಮೆಟ್ಟೆ ಮಿಂ
ಚಿದ ತೊಡೆ ರಜ್ಜುವಂ ಪಿಡಿದ ತೋಳ ಮೊದಲ್ ಪೊಗರಂ ತುಳುಂಕೆ ನೂಂ ।
ಕಿದ ಮೊಲೆಯೊಡ್ಡು ಕೊಂಕಿ ನಿಮಿರ್ದೊಳ್ನಡು ಕಂಗೊಳಿಪನ್ನಮುಯ್ಯಲೇ
ಱಿದಳಮೃತಾಂಶುವಕ್ತ್ರೆ ಕುನಿದೇಱಿಸೆ ಮನ್ಮಥನಿಕ್ಷುಚಾಪಮಂ ॥ ೪

ವ॥ ಮತ್ತೊಂದೆಡೆಯೊಳೊಲೆವ ಭರದೊಳ್ ಮಲೆಪ ಮುಖಕ್ಕೆ ಚಂದ್ರ ಮಂಡಲಮುಮಂ, ಹಾರದ ಪೊಳಪಿಂಗೆ ತಾರಾವಳಿಯುಮಂ, ನಱುಸುಯ್ಯ ಸೌರಭಕ್ಕೆ ಕವ್ವರೆಗೊಂಡು ಬೆಂಬಿಡದೆ ತೂಱುವ ತುಂಬಿಯ ತುಱುಗಲಂಬರ ದೊಳುಟಿದು ಬಂಬಲ್ಗೊಳ್ವಂತೆಯುಂ ಕೀಱು ಪಾಱು ನೀಡುಮಾಡಿ ಬೆಮರ್ತ ಚಿತ್ತೇಶ್ವರಿಯ ಗಾಡಿಯಂ ನೋಡಿ ತೆಂಬೆಲರ ಸೋಂಕು ಬೆಂಬಟಿಗೊಳ್ವಂತು ಮೆಲ್ಲಮೆಲ್ಲನೊಲೆದು

ರತಿಯುಂ ಕಾಮನುಮಂಬರೇಚರವಿಲಾಸಶ್ರೀಯನಾಳ್ದಂತೆ ಹೃ
ತ್ಪತಿ ಕುಳ್ಳಿರ್ದೆಡೆಗೊಟ್ಟು ಬಟ್ಟದೊಡೆಯಂ ತಳ್ತೇಱಿ ನಲ್ಲಳ್ ಪ್ರಭಾ ।
ಪ್ಲುತನೆತ್ತಂ[1] ತೆರೆಸುತ್ತೆ ಪೀಠಮಣಿಮಂಚಂ ಚೆಲ್ವನಾದುಯ್ಯಲಂ
ರತರಾಗಾಮೃತವಾರ್ಧಿಯೊಳ್ ಮರಲೆ ಬಿರ್ದೀಸಾಡುವಂತಾಡಿದಳ್ ॥ ೫

---

1 ಕ. ನೀತಂ.

ವ॥ ಮತ್ತಮೊಂದು ಖೇಲನವಿಲಾಸವಾಸಾಂಗಣದೊಳೊರ್ವಳ್

ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತೆಂಗಾಳಿಯಂ ಜೋಲ್ದ ಪೂ
ಮುಡಿಯಿಂ ಝೋಂಪಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ದಾ।
ಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ- ನೂಂಕಲ್ಕೆ ಧೀಂ
ಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಹುಯ್ಯಲಂ ॥ ೬

ವ॥ ಅದಲ್ಲದೆಯುಮಚ್ಚರಿಯರ್ಗಚ್ಚರಿಯನೊಡರ್ಚುವ ಪೊಚ್ಚಪೊಸಜವ್ವನ ದಚ್ಚಟಿಯದೊರ್ವಳ್

ಸಿರಿಯ ವಿಲಾಸಮಂ ಶಚಿಯ ಸಂಪದಮಂ ರತಿಯೊಂದು ರಾಗಮಂ
ಗಿರಿಜೆಯ ಗಾಡಿಯಂ ಮದನ ಕೆಳ್ಕೆಳಸುತ್ತಿರೆ ಕೇಳ್ದನಿಲ್ಲ ಮೈ ।
ಸಿರಿಯೊಳಕೊಂಡೆನೇಂ ಕಱೆಯ ಚಂದ್ರಮಚಂದ್ರಿಕೆ ಚೈತ್ರೆಯೆಂದು ಪೀ
ವರಕುಚೆ ತೋರಣಂನುಗಟ್ಟು ಗೆಲ್ದಪಳೆಂಬಿನಮುಯ್ಯಲಾಡಿದಳ್ ॥ ೭

ವ॥ ಅಂತು ಪಾಡುವಾಡುವುಯ್ಯಲ ತೂಕಂ ಕೂಡೆ ತಲೆದೂಕಮನೊಡರ್ಚೆ ಮೆಚ್ಚುವೆಡೆಯೊಳ್ ವಿದೂಷಕಂ ನಾಗರಿಕಾದಿಗಳ್ಗೆ ನಿಮ್ಮ ಬಱುಮೆಚ್ಚಿನೊಳೆ ನಗೆ ಫಳಮಾಗದೀನೀಱೆಯರ ತೊಡೆಯ ಮೇಲೆನ್ನುಮನೇಱಿಸಿದೊಡಾಂ ಮೆಚ್ಚುವೆನೆನೆ ದುಷ್ಟನಾಯಕರಿಂ ಬಟಿಕೆ ನಿನ್ನನಾಕೆಗಳ ಕೂರ್ಪ ಕೋರಡಿಗರೇಱಿಸ ಲುಯ್ಯಲಾಡುವೆಯೆಂದು ನಗಿಸುತ್ತುಂ ನಡೆಯೆ ಮುಂದೊಂದು ಮೃದ್ವೀಕಾ ಲತೆಯ ಮಂಟಪದ ನಡುವೆ ಚಂದ್ರಿಕೆಯ ಚಂಪೆಯುಮನೆತ್ತಿದಂತೆ ಸೊದೆವಟಿಯದ ಲೋವೆಯ ಮುತ್ತಿನ ಲಂಬಣದ ಮಲಂಗು ಭಂಗಿವಡೆದ ಕುಸುಮದೆಸಟ ಮಸೂ ರಿಕೆಯ ಮೇಲೆ ಗೊಟ್ಟಿಗಾಯಣಿಯರ ಠಾಯೆಗಳ್ಗೆ ತಲೆದೂಗುವ ನೆವದಿಂ ಕೊಡಂಕೆಯೊಳ್ ಪಲತುಡುಂಕಲಱಿಯದ ಪಸುಳೆದುಂಬಿಗೆ ಕನ್ನವುರದ ಚೆನ್ನೆಯ್ದಿಲ ಮಕರಂದರಸಮಂ ಸಾರ್ಚುವಂತೆಯುಂ, ಕೆಂದಣದಿನಳೆವ ಕಂದುಕಮಂ ಕಂಡು ಪುರ್ಬ ಪೊಡರೆ ನೋಡುವ ನೆವದಿಂ ಮಣಿಮಂಟಪಕ್ಕೆ ನಿಕಾರವಟ್ಟೆಯ ಚಂದ್ರೋದಯಮಂ ಸಂದಿಸುವಂತೆಯುಂ, ಬೆರಲೆಡೆಯೊಳಡಸಿದ ಕಪ್ಪುರವಳುಕಿ ನೊಳೆ ನಗಿಸುವ ರೋಡಗರನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ವೆ ಳಗಿಂಗೆ ತಕ್ಕುಗುಡುವಂತೆಯುಂ, ಕೋಮಳಾಂಗುಳಿಜಾಳಕಂ ಮೆಱೆಯೆ ಕೇದ

ಗೆಯ ಗಱಿಯಂ ತೀಡುವ ನೆವದಿಂ ಸೆಳ್ಳುಗುರ್ಗಳ ಬಳ್ಳಿವೆಳಗಿಂಗೆ ಚಂದ್ರಕಳೆಯು ಕವಳಿಗೆಯುನಡರ್ಪುಗುಡುವಂತೆಯುಂ ಹಾವದ ಭಾವದ ವಿಲಾಸದ ವಿಭ್ರಮದ ದೇಸೆ ಮಾಸರಮಾಗೆ

ಕಡೆಗಣ್ ನುಣ್ಬೆಳಗಂ ಮಸಾರಿಸುಪಿನಂ ಬೆಳ್ದಿಂಗಳಿಂ ಜೋಲ್ದ ಪೂ
ಮುಡಿ ಮಂದಾನಿಳನಂ ದಳಂಗೊಳಿಪಿನಂ ಬಿಂಬಾಧರಚ್ಛಾಯೆ ಪೊಂ ।
ಗೊಡನಂ ಗೆಲ್ದ ಕುಚಕ್ಕೆ ಮಾಣಿಕದ ಪಟ್ಟಂಗಟ್ಟುವನ್ನಂ ತೊದ
ಳ್ನುಡಿ ವೀಣಾಧ್ವನಿಗೊಯ್ಯರಂಗುಡುವಿನಂ [1] ಕುಳ್ಳಿರ್ದ ತನ್ವಂಗಿಯುಂ ॥ ೮

ವ॥ ಕಂಡು ನಾಗರಿಕನರಸಂಗೆ ತೋಱುತ್ತುಮನುಕೂಲನಾಯಕಂಗೀಪದಾರ್ಥಂ ನೆಟ್ಟನನುಭವಿಗಳ್ಗನುಭವನೀಯಂ ನಮ್ಮ ದೇವನಂಗಭೋಗಪರಿಕರಕ್ಕೆ ದೇವೇಂದ್ರಂ ನಿಚ್ಚನಿಚ್ಚಮಟ್ಟುವಚ್ಚರಗಣಿಕೆಯರೊಳುಮಿನಿತಚ್ಚರಿಯ ಚೆಲ್ವಂ ಕಾಣೆನೆಂದು ಮೆಚ್ಚುತ್ತುಂ ಪೋಗೆ ಮತ್ತೊಂದೆಡೆಯೊಳ್ ವಿದಗ್ಧವಿಟನೊರ್ವಂ ತನ್ನ ತೋಳೊಳೆ ಬಳೆದು ಮುಳಿವ ತಿಳಿವ ಸೂಳೆತನದ ತೋಳುಪಲ್ಲಟಮನಱಿಯದ ಕಾದಲಳ್ಗೆ ತನ್ನ ಮಾಡಿದ ತಪ್ಪು ತನ್ನಂ ನೋಯಿಸೆ ತಾನೆ ತಿಳಿಪಲೆಂದು

ನುಡಿದಂ ದೈನ್ಯದ ಮಾತನಾತನಿದಿರೆಟ್ಟಳ್ ಮೋನದಿಂ ಮುಗ್ಧೆ ಕಾ
ಲ್ವಿಡಿದಂ ವಲ್ಲಭನೋಪಳೆಪ್ಪೊದೆದು ಪೋಗಲ್ಮೀಱಿದಳ್ ಮತ್ತವಂ ।
ಪಿಡಿದಾತ್ಮೇಶ್ವರನಿಕ್ಕಿದಂ ಕುಚದೊಳೊಂದಂ ಹಾರಮಂ ಕಾದಲಳ್
ನಡುಗುತ್ತೆಕ್ಕಸರಕ್ಕೆ ತಾಂ ದುಸರಮಂ ಬಾಷ್ಪಾಂಬುವಿಂದಿಕ್ಕಿದಳ್ ॥ ೯

ವ॥ ಆಗಳಾಕೆಯು ಮೇಲುದೋಸರಿಸೆ ಮೊಗವಡಂಗಳೆದ ಮದನಮಾತಂಗಕುಂಭಯುಗಳದಂತಿರ್ದ ನೆಲೆಮೊಲೆಯುಂ ಕಂಡು ಭರದ ಜವ್ವನದ ಸುಖಪಾಟವದ ಕುಱುಪನೀಕೆಯೊಳ್ ಕಾಣಲಾದುದೆನುತುಮರಸಂ ಕೆಳಗೆಳ ದುಷ್ಟನಾಯಕಂಗೆ ಪಿಟನಿಂತೆಂದಂ

ಬಡನಡುವೆಂಬಿದಂ ಮುಱಿಯವೇ ಭರದಿಂ ನಳಿತೋಳಮೂಲವಂ
ಕೆಡಿಸವೆ ತಮ್ಮೊಳಿಟ್ಟಣಿಸಿ ಮಣ್ಮಿಟಿಯಾಗವೆ ವಕ್ತ್ರಪಂಕಜಂ ।

---

[1] ಕ. ಜ, ತನ್ವಂಗಿಕುಳ್ಳಿರ್ದಳಂ.

ಸೆಡೆದು ಮರಲ್ವಿನಂ ಚಿಬುಕ ಕಂದಮನೆತ್ತವೆ ಮಧ್ಯಲಿಂಗಮಿಾ
ಗಡುವಿನ ಕಪ್ಪುರಕ್ಕೆವಣಿಯಾಗದೊಡೀಕೆಯ ಕರ್ಕಶಸ್ತನಂ ‖ ೧೦

ವ‖ ಎನೆ ವಿದೂಷಕನೀದಿವ್ಯಲಿಂಗಸ್ಥಾನಕ್ಕೆ ನೀನುಮಾತನುಂ ಜಡೆಗಟ್ಟಿ ಮಡವರಾಗಿಮೆಂದು ನಗಿಸುತ್ತುಂ ನಡೆಯೆ ಮತ್ತೊಂದೆಡೆಯೊಳೊರ್ವಳ್ ಮುನಿದಿನಿಯನಂ ತಿಳಿಪಲ್ ಕೆಳದಿಯುಂ ನಂಬದೆ ತೆಂಬೆಲರ್ಗೆ ಪೂಂಬಳಿಯುಂ ಬಟಿಯಟ್ಟುವಂತೆ ತನ್ನ ತಂಗಿಯನೆ ಬಟಿಯಟ್ಟಿ ತಡೆದು ಬಂದುದನೆ [1] ಸೈರಿಸಲಾಱದಳ್ಕಱಿಂ ಮಿಱಿದಿಂತೆಂದಳ್

ಬೀಸರವಾಯ್ತು ಮೆಯ್ಯ ಬೆಮರಿಂ ಘುಸೃಣಚ್ಛವಿ [2] ಸುಯ್ಯ ಗಾಡಿಯಿಂ
ಸೂಸಿದುವೊಳ್ಗುರುಳ್ ಮಿಡಿದು ಪಾಯ್ದುಪುದಳ್ಳೆರ್ದೆ ಬತ್ತೆ ತೊಂಡೆವಾಯ್ ।
ಬಾಸರವರ್ಣವಾಯ್ತುಱಿಯುತುಂ ಪಟಿಗಂಜದ ಪಾಪಿಯಲ್ಲಿಗೇ
ಕೀ ಸುಕುಮಾರಿಯಂ ಕಳುಪಿದೆಂ [3] ಸಖಿ ಪೋಗಿ ಬಟಲ್ದಟಿಕ್ಕಟಾ ‖ ೧೧

ವ‖ ಅದಂ ಕಂಡೀಕೆ ತನ್ನಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದುದೆಂದರಸನನುಕೂಲಾದಿಗಳೊಳ್ ನುಡಿಯುತ್ತುಂ ನಡೆಯೆ ಮತ್ತೊಂದೆಡೆಯೊಳ್ ಕೂರಿಸಿ ಕೂರ್ತುರ್ಮ ಕುಟಿಲವಿಟನೊರ್ವಂ ಮುಳಿದ ನಲ್ಲಳನೆಲ್ಲಾತೆಱದಿಂ ತಿಳಿಪಲಾಱದೆ ಕೆಳದಿಯಂ ಭೇದಿಸಿಕೊಂಡೊಳಪುಗಲ್ಪೊರ್ದಿರ್ಪಿನಮಾಕೆ ಮಾನವತಿಗಿಂತೆಂದಳ್

ಮುಳಿಯಲ್ವೇಡೆನ್ನನೇ ನೀಟ್ಕಲಿಸವೆ ತಿಳಿಯೆಂದೆನ್ನನೇಬಾರೆನೇ ಮೇಣ್
ತಿಳಿಪಲ್ ಬೋಳೈಸನೇ ಕಾಲ್ವಿಡಿಯನೆ ಸಿಡಿಪೆಟ್ದಪ್ಪಿಕೊಂಡಾಗದೀಗಳ್ ।
ಕೆಳದೀ ನೀಂ ಬಲ್ಲೆಯೆಂತೆಂದನುವಿಸಿದಪೆ ಬೇಸತ್ತೆ ನಾಂ ನಲ್ಲನೇಕಿ
ನ್ನೊಳಗಪ್ಪಂ ನೀನುಮಾನುಂ ಸುಟಿವ ಮದನನುಂ ಬಲ್ಲಿರಾಪೆತ್ತ ಒಲ್ಲೆಂ ‖ ೧೨

ವ‖ ಎಂದು ನುಡಿನುಡಿದು ಬೇಸಱಿಸಿದೊಡಾಕೆಯುಳ್ಕಿಬಳ್ಕಿ ಬಳ್ಕನೆ ಪೋಗಿ ಮತ್ತಮಿಂತೆಂದಳ್

ಮುಳಿಸಂ ಮೇಲ್ದೊಡೀಱಿಸೆಂ ಕಂಡೊಡೆ ಕರಕರಿಸೆಂ ಪೊಯ್ದೊಡಂ ಬಯ್ಯನೇನೆಂ
ದೊಡದಂ ಮಾರ್ಕೊರ್ಳ್ಳೆನೀಸಾವಿನ ಸವಿಯಱಿದೇಂ ಸಾಲವೇ ತಂದು ಕೂಡಾ ।

1 ಕ. ಚ. ಜ. ಕ್ಕೆ. 2 ಕ. ಸೂರ್ಯ. 3 ಕ. ಸಖ.

ತನನಾತಂಗೀವ ಮುಯ್ವಂ ನಿನಗೆ ಕೊಡುವೆನೇಟಕ್ಕ ಪೋಗೆಂಬುದುಂ ಭೋಂ
ಕನೆ ಬಂದಂ ತಳ್ಪಿದಂ ಚುಂಬಿಸಿದನೊಲಿದು ಕೇಳುತ್ತಲಿರ್ದಾತ್ಮನಾಥಂ ॥ ೧೩

ವ॥ ಅದಂ ಕಂಡರಸಂಗನುಕೂಲನಾಯಕಂ ಈಪ್ರಣಯಪ್ರಕಾರಕ್ಕೆ ಸಹ ಚರಿವಡೆವ ಸಂವಿಧಾನಂ ಸರಸಮಾದುದೆಂದು ಮೆಚ್ಚುತ್ತುಂ ಪೋಗೆ ಮುಂದೊಂದು ಸೌಧಶಾಲೆಯ ಮತ್ತವಾರಣದೊಳೊತ್ತಗೆ ಕುಳ್ಳಿರ್ದೊಡನೆಯ ಸೂಳ್ಗೆಗೆ ತನ್ನ ತಂಗಿಯ ಬೇಳಾದ ಗಾಳುತನಮನಿಂತೆಂದಳ್

ಕುರುಳೊಳ್ ಕೊಂಕಿದ ಭಂಗಿಯಂ ಸಮೆಱು ವಕ್ಷೋಜಂಗಳೊಳ್ ಚಿತ್ರಮಂ
ಬರೆದೊಪ್ಪುತ್ತಿರೆ ಪಚ್ಚೆವಾಲೆ ಮುಡಿಪಿಂಗೊಲ್ದಿಕ್ಕೆ ಮುಂಗೈಗೆ ಬೊ ।
ಪ್ಪರವಂ ಮುಟ್ಟಿ ಮುಸುಂಕಿ ದಂತವಲಯಂ ತಳ್ತೊತ್ತಿದಳ್ ಬೇಟಮಂ
ಕರೆದಳ್ ಕೂರ್ತು ಭೊಜಂಗನೊಲ್ಲದುಟಿದಂ ನೋಡಕ್ಕ ಸೌಭಾಗ್ಯಮಂ ॥ ೧೪

ವ॥ ಅದಲ್ಲದೆಯುಮೊಲ್ವ ಭೊಜಗನುಟಿದುಮ್ಮಳದಿನೊತ್ತಗೆ ಮೆಯ್ಯೊಡ್ಡಲಾಱದೆ ನೆತ್ತದ ನೆವದಿಂ ಪೊತ್ತುಗಳೆವ ಮಗಳ್ಗೆ ಕುಂಟಣಿಯೊರ್ವಳಿಂತೆಂದಳ್

ನೆತ್ತದ ಸಾರಿಯಂತೆ ಮೊಲೆ ಮೂಡಲೊಡಂ ಗುಣವೇಱು ಲಜ್ಜೆ ನಾ
ಣ್ಪತ್ತುವು ಗಾಳುಗಣ್ಬರಿದು ವಾಸೆಯವಾಸಗೆಯಂತೆ ಬೇಡಳೊಂ ।
ದೊತ್ತೆಯನಿಲ್ಲ ಪೆಣ್ತನಕೆ ಪಾವುಗೆಯುಂಗಡಿಗೆಟ್ಟ ರೇಖೆಗಳ್
ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೂಲನಾಟಮಂ ॥ ೧೫

ವ॥ ಅದಂ ಕೇಳ್ದು ನಾಗರಕನರಸಿನೊಳ್ ಮುನ್ನೆ ತಂಗಿಯುಂ ಚುನ್ನವಾಡಿದಕ್ಕನ ವಕ್ರಮೆಗೆ ಒಟಿಕೆ ಮಗಳಂ ನುಡಿದ ಕುಂಟಣಿಯ ಕೊಂಕುಸಂಗತಿವಡೆದುದೆನುತುಂ ಬರೆ ಮತ್ತೊರ್ವಳ್ಗರವೇಟಗಾರ್ತಿ ಕಲಹದೊಳಿರ್ದರಭೊಜಗನನೋಲಗಕ್ಕಲಂಕರಿಸಿ ಕಳುಹಿ ಚಿತ್ತದುತ್ತಮಳತನಮಂ ತನ್ನ ಮನದನ್ನಳಪ್ಪ ಕೆಳದಿಗಿಂತೆಂದಳ್

ನನೆಯಾಗಿರ್ದಾಂ ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರಮಾಗಿ
ರ್ದು ನಿತಂಬಾಭಾಗದೊಳ್ ಪಂಟಿಸಿದ ದುಗುಲವಾಗಿರ್ದು ಸರ್ವಾಂಗದೊಳ್ ಚಂ

ಹರಿನೀಳೋದ್ಘಟ್ಟಿತಂ ವರ್ತುಳತಳ [1] ಮಿಳೆಯಿಂ ವ್ಯೋಮದೊಳ್ನಿಂದುದೈಸಾ
ಸಿರಚಾಪೋತ್ಸೇಧದಿಂ ಮೇಗಿದೆ ಭುವನಜನಾನಂದಲಕ್ಷ್ಮೀವಧೂಭಾ ।
ಸುರರತ್ನಾಶೇಷಭೂಷಾಪಟಲಕಮೆನೆ ತಾಂ ದ್ವಾದಶಂ ಯೋಜನಾಂತಃ
ಪರಿಮಾಣಂ ದಿಕ್ಚತುರ್ವಿಂಶತಿದಶಶತಸೋಪಾನಪಙ್ತಿಪ್ರತಾನಂ ॥ ೧೬

ಅದೆ ಧೂಳೀಶಾಳಮಲ್ಲಿಂ ಜಿನಗೃಹಧರೆಯಲ್ಲಿಂ ಪಯಃಖಾತಿಯಲ್ಲಿಂ
ದದು ವಲ್ಲೀವೀಧಿಯಲ್ಲಿಂ ವಸತಿ ತರುಗಳಲ್ಲಿಂ ಧ್ವಜಾನೀಕಮಲ್ಲಿಂ ।
ತ್ರಿದಶೋರ್ವೀಜಾತಧೂಪೋದ್ಘಟಿತಘಟಗಳಲ್ಲಿಂದಮಲ್ಲಿಂ ಗಣಶ್ರೇ
ಣಿ [2] ದಲಲ್ಲಿಂ ಧರ್ಮಚಕ್ರಸ್ಥಳಿ ಬಟಿಕೆ ಮಹಾಮಂಡಪಂ ಮಧ್ಯಬಂಧಂ ॥ ೧೭

ಶಶಿಕಾಂತದ್ವಾರಕುಡ್ಯಂ ನವಮಣಿಶತಕಸ್ತಂಭರಂಗಂ ಧನುಷ್ಷ
ಷ್ಟಶತವ್ಯಾಯಾಮವಿಸ್ತಾರಿತ ನವಶತಚಾಪೋನ್ನತಂ ತೀರ್ಥಕೃದ್ದಿ ।
ವ್ಯಶರೀರಪ್ರಗ್ರಹಪ್ರಸ್ಫುರಿತಸುರಭಿಗಂಧೋತ್ಕಟಂ ಪದ್ಮರಾಗಾ
ಗ್ರಶಲಾಕಂ ಬಂಧುರಂ ಗಂಧಕುಟಿಯದೆ ಜಗಲ್ಲೋಚನಾನಂದಕಂದಂ ॥ ೧೮

(ರಗಳೆ)

ಪರಮಂಗಪ್ಪಮಹಾಪ್ರತಿಹಾರಂ ।
ದೊರೆವಡೆದೊಪ್ಪಿದುದದಱೊಳಪಾರಂ ॥

ಚಾಮರಸಮಿತಿ ಚತುಷ್ಷಷ್ಟಿಮಿತಂ ।
ಕೋಮಳಶಶಿಕರಗುಚ್ಛೋಪಮಿತಂ ॥

ಧನದಕುಮಾರರ ಕರಕಿಸಲಯದೊಳ್ ।
ತೊನೆದಪುವಂಚೆಯ ನರ್ತನಲಯದೊಳ್ ॥

ಮುತ್ತಿನ ಮುಕ್ಕೊಡೆ ನೀಲದ ಕಳಶಂ ।
ಸುತ್ತಿರೆ ಮಾಣಿಕವಟ್ಟೆಯ ವಳಯಂ ॥

ಪಚ್ಚೆಯ ಕಾವಿಂದಲರ್ದ ವಿಡಂಬಂ ।
ಮೆಚ್ಚುವ ಕಣ್ಗಳ ಸಿರಿಗಾಲಂಬಂ ॥

---

1 ಕ. ಗಳ್ಗಲಂ. 2 ಕ. ಮಿಳಯುಂ.

ನೋೞ್ಪವರ್ಗೇೞುಭವಂಗಳ ರೂಪಂ ।
ತೋರ್ಪುದು ನಿರ್ಮಳಕಾಂತಿಕಳಾಪಂ ॥

ಭಾವಳಯಂ ನಿಜತೇಜಪ್ರಭೆಯಿಂ ।
ತೀವಿ ತುಳುಂಕಿದಪುದು ಸುರಸಭೆಯಂ ॥

ಸುರುಚಿರಭಾಚಕ್ರದ ಮಿಂಚುಗಳಿಂ ।
ಸುರದುಂದುಭಿಗಳ ಪೆರ್ಮೊೞಗುಗಳಿಂ ॥

ಪರಿಮಳಮಿಳದಳಿಕಳಭಪ್ರಕರಂ ।
ಸುರಿದಪುದಲರ್ವಳೆ ಬಿಡದಾಸುಕರಂ ॥

ದೇವನ ಶಶಿಮುಖಬಿಂಬದೊಳೀಗಂ ।
ಭಾವಿಸಿದಂತಿರೆ ಸಂಧ್ಯಾರಾಗಂ ॥

ಅಸುಕೆಯ ಕೆಂದಳಿರ್ಗಳ ಬಾಳ್ಜೊಂಪಂ ।
ಪಸರಿಸಿ ಪಡೆದುದು ಚಿತ್ತದಲಂಪಂ ॥

ಕುಡುಮಿಂಚೇೞಿದ ಶರದದ ಮೇಘಂ ।
ಪಡೆಯೆನೆ ಕಡುಪಿಂ ಸುರಪಟಹೌಘಂ ॥

ಮೊೞಗುವುವಘಮೃಗವಿರದೋಡುವಿನಂ
ಮೊೞಗುಗೆತ್ತು ಕೇಕಿಗಳಾಡುವಿನಂ ॥

ದೂರಾಸನ್ನಸಮಂ ಗಂಭೀರಂ ।
ದೂರೀಕೃತ ತಾಲ್ವೋಷ್ಠವಿಸಾರಂ ॥

ಸಕಲದೇಶಭಾಷಾಪ್ರತಿಭಾನಂ ।
ಪ್ರಕಟಂ ನೆಗೆದುದು ದಿವ್ಯಧ್ವಾನಂ ॥

ಪರಿಷದ್ವಳಯಂ ತಿಳಿಗೊಳದಂತಿರೆ ।
ಹರಿಪೀಠಂ ಕನಕಾಂಬುಜದಂತಿರೆ ॥

ನಿಂದಂ ಪೀಠದ ಮೇಲೆ ಜಿನೇಂದ್ರಂ ।
ಸಂದಿಸದಿರೆ ನಾಲ್ವೆರಲನತಂದ್ರಂ ॥

ಕಂದ॥ ಸಮುದಯಸಮಾಸದಿಂ ಶಚಿ
ಗಮರೇಂದ್ರಂ ಸಮವಸರಣಮಂಡಲಮನನು ।
ಕ್ರಮದಿಂದೆ ತೋಱಿಯುಂ ವ್ಯ
ತ್ಯಮದಿಂ ವಿವರಿಸಿದನಗ್ರಪಾಲಂಬರೆಗಂ ॥ ೧೯

ಶ್ರೀಮಂಡಪನವರತ್ನನಿ
ಕಾಮಧರಾಧರದೆ ಪರಿದ ಕಲ್ಯಾಣನದೀ ।
ಸೀಮೆಗಳೆನೆ ಮೆಱೆದಪುವು ಮ
ಹಾಮಂಡಳವೀಧಿ ಸಭೆಯ ನಾಲ್ಕುಂ ದೆಸೆಗಂ ॥ ೨೦

ವ॥ ಆಗಂಧಕುಟಿಲಕ್ಷ್ಮಿಯ ಮುತ್ತಿನ ಮೇಖಲೆಯಂತೆ ತಳತಳಿಸಿ ಪೊಳೆವ ವಿಯತ್ತಳಸ್ಫಟಿಕಕೋಟಾವಳಿಯ ಮದನಮಂಡಳಾಯತ್ತಹರಿನ್ಮಣಿಮಂಡಪಚತುಷ್ಕದೊಳ್ ಬಹಿರಂತರ್ವೇದಿಕಾಧಿಷ್ಠಿತನೈಸರ್ಪಪಾಂಡುಕಪದ್ಮ ಪಿಂಗಳ ಕಾಳ ಮಹಾಕಾಳ ಮಾಣವಕ ಶಂಖ ಸರ್ವರತ್ನಮೆಂಬ ನವನಿಧಿಗಳುಮ ಪಱಿಡೆಯೆಡೆಯೊಳೆಡೆಗುಡದ ಗುಡಿಯ ಕನ್ನಡಿಯ ಸುಪ್ರತಿಷ್ಠಕದ ವಿಮಳಚಮರದ ಧವಳಾತಪತ್ರದ ಭೃಂಗಾರಘಟದ ಮಂಗಳಕಳಶದ ಮಣಿತಾಳವೃಂತದ ಪೆಸರೊಳೆಸೆವಷ್ಟಮಂಗಳಂಗಳುಂ ನವರತ್ನರಚಿತದ್ವಾರೋಪರ್ಯಧಿಷ್ಠಿತ ಗದಾದಂಡಚಕ್ರಪಾಶಫಳಕಕಲಿತಭುಜಪರಿಕಲ್ಪಿತ ಕಲ್ಪಚಾಮರಪ್ರಾತಿ [1] ಹಾರಗಾರವಮುಮನಾಶ್ಚರ್ಯಮುಮನಳಂಕೆಗೊಳಿಸಿದುದಲ್ಲಿಂ ಪೊಱಗೆ

ಸಕಳಾಶಾಕುಮತಾಂಧಕಾರಕಬಳಸ್ಫೀತಾಂಶು ಕೈಗಣ್ಮೆ ಗಂ
ಧಕುಟೀಬಾಹ್ಯತೃತೀಯವೇದಿಕೆಯ ನಾಲ್ಕುಂ ದಿಕ್ಕಿನೊಳ್ಪೊಕ್ಕು ಯ ।
ಕ್ಷಕುಭೃತ್ಕೂಟಚತುಷ್ಕದೊಳ್ ರವಿಗಳಂತೀತೋರ್ಪುವಂ ನೋಡ ಪೀ
ನಕುಚೇ ದೇವರ ಚಕ್ರವರ್ತಿಯ ವಿಭಾಸ್ವದ್ಧರ್ಮಚಕ್ರಂಗಳಂ ॥ ೨೧

1 ಕ. ಪಾತ.

ವ॥ ಆಧೂಪಸ್ತೂಪಭೂಮಿಕಾವಳಯದಿಂ ಪೊಱಗೆ ಪೂರ್ವೋಕ್ತವಿಧಾನ ಗೋಪುರಾಷ್ಟಮಂಗಳನವನಿಧಿವೇದಿಕಾದ್ವಾರಪಾಳಕನಾಟ್ಯಮಂಡಪಧೂಪಘಟೀಪಟಳದಿಂ ಮೆಱೆದು ಮೂಲಬದ್ಧಸಿದ್ಧಪ್ರತಿಮಾಪ್ರಸಿದ್ಧಂಗಳಪ್ಪ ಮಂದಾರಪಾರಿಜಾತಹರಿಚಂದನಕಲ್ಪವೃಕ್ಷಸಂತಾನಮೆಂಬ ಸಿದ್ಧಾರ್ಥಪಾರ್ಥಿವಂಗಳಿಂ ಸಾರ್ಥಕಮಾದ ದಶವಿಧಕಲ್ಪವೃಕ್ಷೋದ್ಯಾನವಳಯದೊಳಗೆ

ನನೆಯಂಬಂ ನನೆಮಾಡಿ ಚಾಪಲತೆಯಂ ನೀಳೇಕ್ಷುಗಳ್ಗಿತ್ತು ಕೇ
ತನಮಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದಿ ಚೂ ।
ತನವಾಶೋಕತಮಾಳಪಾಳಕದಳೀಜಂಬೀರನಾರಂಗಮಾ
ವನಭೂಭಾಗದೊಳಿರ್ಪುವೋಲಗಿಸೆ ತಮ್ಮಂ ಕೂರ್ತು ಸರ್ವರ್ತುಗಳ್ ॥ ೨೨

ವ॥ ಆಕಲ್ಪವೃಕ್ಷಾವನಿಯ ಪೊಱಸುತ್ತಿನೊಳ್ ಸುತ್ತಿಱಿದ ಪೊನ್ನ ಮದಿಲ ಬೆಳ್ಳಿಯ ಗೋಪುರಂಗಳ ಯಕ್ಷಕುಮಾರದ್ವಾರಪಾಲನ ಪಾಳಿವೆರಸು ನವನಿಧಿಮಂಗಳಾಷ್ಟಕದವಷ್ಟಂಭಮೆಸೆಯೆ ನಿಷ್ಟಪ್ತಕಾಂಚನಾಧಿಷ್ಠಿತಕುಂಭಸ್ತಂಭೋಜ್ಜೃಂಭಿತಂಗಳುಂ ಖಗೇಂದ್ರಮೃಗೇಂದ್ರಗಜೇಂದ್ರಗವೇಂದ್ರಚಂದ್ರಚಂದ್ರಕಚ್ಛತ್ರದ ಮರಾಳಮಾಳಿಕಾಶತಪತ್ರಚಿತ್ರಿತದಶವಿಧಾನಚೀನಾಂಚಳಚುಂಬಿತಾಂಬರಮುಖಂಗಳುಮಪ್ಪ ಪಿಂಶತ್ಯುತ್ತರತ್ರಿಚತುಸ್ಸಹಸ್ರಮುಖ್ಯಧ್ವಜಂಗಳೋರೊಂದಕ್ಕೆ ನೂಱೆಂಟಾಗೆ ಬಳಸಿದ ನಾಲ್ಕುಲಕ್ಕೆಯುಮಱುವತ್ತುಸಾಸಿರದಾಱುನೂಱಱುವತ್ತುಧ್ವಜಂಗಳಿನೇಕಯೋಜನವಿಸ್ತಾರಮಾದ ವೈಜಯಂತಿಕಾಸಂತಾನಭೂಮಿಯಿಂದೊಳಗೆ

ದುರಿತವ್ರಾತದ ಮಾತು ಸಲ್ಲದಿರವೇೞತ್ತತ್ತ ಭವ್ಯರ್ಕಳಂ
ಬರವೇಳ್ಪೆಚ್ಚರಮಿತ್ತಲಿತ್ತಲೆನುತುಂ ಕೈಸನ್ನೆಗೆಯ್ವಂತಿರಂ ।
ಬರದೊಳ್ಮಿಳ್ಮಿಸಿದಪ್ಪುವುಜ್ಜ್ವಳಪಟೀಜಾಳಂ ಧ್ವಜವ್ಯಾಜದಿಂ
ಪರಮಾರಾಧ್ಯನನರ್ಚಿಸಲ್ಕೆರೆದುದಕ್ಕುಂ ಶಾರದಂ ನೀರದಂ ॥ ೨೩

ವ॥ ಆಕೇತನವ್ರಾತಭೂತಳದ ಪೊಱಗೆ ಜಾತರೂಪವೇದಿಕಾಷ್ಟಮಂಗಳ ನವನಿಧಿಸಿಧಾನಯಕ್ಷಕುಮಾರರಕ್ಷಿತದ್ವಾರಶಾಖಾಂತರಾಳರೂಪ್ಯಗೋಪುರಚತುಷ್ಕದೊಳಂ ಆಗೋಪುರಪ್ರತಿಬದ್ಧಷೋಡಶಪ್ರಮಿತನಾಟ್ಯಮಂಡಪಭೂಮಿಕಾತ್ರಿತಯ

ದೊಳಗೆ ಬೇಱುವೇಱು ಭಾವರಸದ ಸಿರಿಯು ಸರಿವಪೆಯು ಕುಡಿಮಿಂಚಿನ ಕುಡಿಗಳಂತೆ ನರ್ತಿಸುವ ಮೂವತ್ತಿರ್ಛದೇವನರ್ತಕಿಯರೊಳಂ ಆನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ ತಳಿರ್ತಶೋಕವನದ ಮುಗುಳ್ತ ಚಂಪಕವನದ ಕಾಯ್ತ ಚೂತವನದ ಪಣ್ತ ಕದಳೀವನದ ಪುದುವಿನೊಳ್ ಕಾಳಾಗುರುಧೂಪಧೂಮಸ್ತೋಮದಿಂ ನೀಲದೆಳಲತೆಗಳಿಂ ಮಾಲೆಗೊಳಿಸುವ ಧೂಪಘಟಪಟಳದಿಂ ರೂಪುವಡೆದಷ್ಟಮಂಗಳಮಹಾಪ್ರಾತಿಹಾರ್ಯಾಷ್ಟಕಸಪರ್ಯಾಶ್ಚರ್ಯಂಗಳಪ್ಪ ಚೈತ್ಯಂಗಳ ಪೊಱಗಣಿಂ ನಿಱಿಗೆವಡೆದ ಶಾಖಾಸಹಸ್ರಂಗಳೊಳಂ ಮಂಗಳೋತ್ಸವಮನಪ್ಪುಕೆಯ್ದು

ಘನಸಾರಾಗರುಧೂಪಧೂಮಲತೆಯುಂ ಮಾಣಿಕ್ಯದೀಪಾವಳೀ
ಘನಸಾಂದ್ರಚ್ಛವಿಯುಂ ಪ್ರವಾಳಮಧುಪದ್ಯೋತೀಯಸಂವಾದಿಗಳ್ ।
ಜಿನಬಿಂಬಾರ್ಚನೆಯೊಳ್ ಪಟಂಚೆ ವಸತಿವ್ರಾತಂಗಳಂ ಕೊಂಬುಗೊಂ
ಬಿನೊಳಾಂತಿರ್ಪುಪವಿತ್ತ ನೋಡಬಲೆ ಚೈತ್ಯೋರ್ವಿಜಸಂತಾನಮಂ ॥ ೨೪

ವ॥ ಆಚೈತ್ಯವೃಕ್ಷಾವಳಿಯ ಪೊಱಗೆ ದೌವಾರಿಕಜ್ಯೋತಿರಮರಮಾಣಿಕ್ಯಮಕುಟಶೋಭಾಂಶುಪಟಳದಿಂ ರಜತಮಯಮಾಗಿಯುಂ ಮಹಾರಜತನಿರ್ಮಿತಂಗಳಂತೆ ಕೆಂಪು ಸೊಂಪುವಡೆದಷ್ಟಮಂಗಳನವನಿಧಿಸನಾಥಂಗಳಪ್ಪ ಬಾಗಿಲ್ವಾಡಂಗಳೆಂಬ ಮೊಗಂಗುಡಿಗಳೆಸೆವ ಮಂಗಳಲಕ್ಷ್ಮಿಯ ಕಳ್ಳುಂಬಳ್ಳಿವಿಡಿದ ನಳಿತೋಳ್ಗಳಿನೆತ್ತಿಬಳಸಿದ ದೀಪಪದ್ಮರಾಗದ ಪ್ರಾಕಾರದೊಳಗೆ ಮಾವಂಪುಲಂಗಿದ ಮಲ್ಲಿಕಾಲತೆಯ ಪೂಗಕರು ಕೈಗೊಟ್ಟ ನಾಗಲತೆಯ ಕೇಸರಂ ಮೇಳೈಸಿದ ವಾಸಂತಿಕಾಲತೆಯ ಮಾತುಲುಂಗಂತಳ್ತ ಜಾತೀಲತೆಯ ಸಂದಣಿಸಿದ ಕುಂದಲತೆಯ ಮೇಳೈಸಿದ ಮಾಳತೀಲತೆಯ ಪಂಪಕವಾದ ಚಂಪಕಾಲತೆಯ ಪಿಣಿಲೇಱಿದ ಕರವೀರಲತೆಯ ಮುಗುಳಿಸಿದ ವಕುಳಲತೆಯ ಬಾಳ್ಜೊಂಪದ ಬಳಸು ವಿಳಸಮಾದ ರತ್ನರಚಿತಕೃತಕಾಚಲಂಗಳೊಳ್ ಪಾಡುವಾಡುವ ಸುರನರಕಿನ್ನರಖೇಚರಾಂಗನೆಯರ ವಿಳಾಸಕ್ಕಾವಾಸಮಾಗಿ

ಪುದಿದ ಲತಾವನಾವಳಿಯ ಮುತ್ತಿನ ಬಣ್ಣದ ತುಂಬಿ ನೀಲವ
ಣ್ಣದ ಗಿಳಿವಿಂಡು ಮಾಣಿಕದ ಬಣ್ಣದ ಕನ್ನಡವಕ್ಕಿ ಪಚ್ಚೆವ ।
ಣ್ಣದ ಕಳಹಂಸೆ ಚಿತ್ರಿಸಿದರೋ ಬಿನದಕ್ಕೆನೆ ತೋಱಿ ಚೋದ್ಯಮಂ
ಸುದತಿಯರ್ಗೀವುದಲ್ಲಿ ನಡೆದುಂ ಜಡಿದುಂ ನುಡಿದುಂ ಜಿನುಂಗಿಯುಂ ॥ ೨೫

ವ॥ ಅಲತಾವೀಧಿಯಿನತ್ತಣ ಸುತ್ತಿನೊಳಿರ್ದ ಯೋಜನವಿಸ್ತಾರವಾಗಿ ವೇದಿಕಾಗೋಪುರದ್ವಾರಪಾಳಮಂಗಳಾಷ್ಟಕನವನಿಧಿವಿಧಾನಂಗಳಿಂ ಮುನ್ನೀರ ವರ್ಣದ ಕನ್ನಡಿಗಳಂತೆ ಮೆಱೆದು ಕಾರುಣ್ಯರತ್ನಾಕರದಯಾರಸಪೂರಂ ಮೇರೆ ಗಟ್ಟಿ ಮಣಿಪ್ರತಾನಸೋಪಾನಶೋಭೆಯಿನುಭಯತಟಂ ಸುಭಗವಾಗೆ ತೀವಿ ತಿಳಿದು ನಿಂದುದೆನಿಸಿ ಮುಗಿದಱಿಯದ ತಾಮರೆಗಳಿನಗಲ್ದಱಿಯದ ಜಕ್ಕವಕ್ಕಿಗಳಿ ನಲರ್ಕೆಗುಂದದ ನೀಳನೀರೇಜದಿನೋರಂತೆ ಮೆಱೆವ

ಜಳಖಾತೀವಳಯಾಭಿರಾಮತೆಯನೇನಂ ಪೇಳ್ದಪೆಂ ಬಂದು ಗೊಂ
ದಳದಿಂ ಕಿನ್ನರಖೇಚರಪ್ರಮದೆಯರ್ಪೊಕ್ಕಾಡೆ ಪೀನಸ್ತನಂ
ಗಳ ಮೇಲೊಟ್ಟಿದ ಯಕ್ಷಕರ್ದಮದ ಪಂಕಂ ನೂಂಕಿ ತೇಂಕಾಡಿ ಪಂ
[1] ಕಳಿಸುತ್ತಿರ್ಪುದು ನಿಸ್ತರಂಗತಟ ಧೂಳೀಚಿತ್ರಪತ್ರಂಗಳಂ ॥ ೨೭

ವ॥ ಆಖಾತಿಕಾವಳಯದಿಂದಿತ್ತಲ್ ಪೊಱಸುತ್ತಿನೊಳಂ ಮೊದಲ ಗಂಧ ಕುಟೀಚತುರ್ದ್ವಾರಾಭಿಮುಖರತ್ನಗೋಪುರಚತುಷ್ಟಯದಿಂ ಪೊಱಮಟ್ಟು ಧೂಳಿ ಶಾಳದ ಕಡೆಯ ಮಣಿಮಾಡಂಬರಮೇಕಗವ್ಯೂತಿಸವ್ಯಾಸಮುಮುಭಯಪಕ್ಷವಿಸ್ಫಾ ರಿತಚಂದ್ರಕಾಂತಭಿತ್ತಿವಿಸ್ತಾರಮುಮಂತರ್ವೀಧಿಮಾಳಿಕಾಪ್ರದೇಶೋಚಿತಕ್ಷುಲ್ಲಕ ದ್ವಾರಾಭಿರಾಮಮುಮಪ್ಪ ನಾಲ್ಕುಂ ಬೀದಿಗಳಾದಲೆಗಳ್ ಬಾಗಿಲ್ವಾಡದಾ ಳವಕ್ಕದೊಳ್ ಕಿಕ್ಕಿಱಿಗಿಱಿದ ಮಣಿತೋರಣನಿತಾಂತಿಕದೊಳ್ ಚತುರಸ್ರಹೇಮ ಭೂಮಿಕಾತ್ರಿತಯಪ್ರಾಸಾದವಪ್ರಾಕಾರಂಗಳೊಳಮಾಪ್ರಾಕಾರಪ್ರಥಮವೇದಿ ಕಾಚತುರಂತರ್ಭಾಗದೊಳ್ ದಿಗಂಗನೆಯರ ಜಳಕೇಳೀವಿಳಾಸಕ್ಕಂ ವಿವಿಕ್ಷುಜನ ಕರಣಚರಣಪ್ರಕ್ಷಾಳನಕ್ಕಮಕ್ಷೀಣಲಕ್ಷ್ಯಮಾಗಿ ಮಣಿಮಯಸೋಪಾನಸಂಧಾನಿತ ಮಪ್ಪ ನಂದೆ ನಂದೋತ್ತರೆ ಮೊದಲಾದ ಪದಿನಾಱುಂ ಸರೋವರಂಗಳೊಳವೊಪ್ಪ ಮನಪ್ಪುಕೆಯ್ದು

ಮಾನಿನಿ ನೋಡುಗೆ ನಾಲ್ಕುಂ
ಮಾನಸ್ತಂಭಂಗಳೆಸೆದಪುವು ಕಾಣಲೊಡಂ ।
ದಾನವಮಾನವಮಿಥ್ಯಾ
ಮಾನಸ್ತಂಭಕ್ಕೆ ತಾಂ ಜಯಸ್ತಂಭಂಗಳ್ ॥ ೨೮

1 ಕ. ಪಂಕಿಲ.

ಚತುರಸ್ರಾಷ್ಟಾಸ್ರವೃತ್ತೋದರಕುಮುದಕಪೋತಾಂಸಕಂಠಂಗಳಾಲಂ
ಬಿತಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ ಚತುರ್ವಕ್ತ್ರಸಿದ್ಧ ।
ಪ್ರತಿಕೃತ್ಯುತ್ತಂಸಿತಂಗಳ್ ಧ್ವಜಮಣಿಕಳಶಶ್ವೇತಪತ್ರತ್ರಯಾಳಂ
ಕೃತ ಮಾನಸ್ತಂಭಕಂಗಳ್ಮೆಱೆದಪುವಿವೆ ಕಲ್ಯಾಣಪೀಠೋದ್ಗತಂಗಳ್ ॥ ೨೮

ವ॥ ಆಮಾನಸ್ತಂಭಂಗಳಿಕೆಲದ ವೀಧೀಭಿತ್ತಿಭಾಗಾಭ್ಯಂತರದೊಳರ್ಧ ಯೋಜನವಿಸ್ತಾರದೊಳಂ ಸಪ್ತಭೂಮಸೌಧಸಾಮಾನ್ಯಾನೇಕರತ್ನಕದಂಬರುಚಿ ಗಳಿನೊಗೆದ ವಾಸವಶರಾಸನಂ ಧೂಳೀಶಾಳಮಂ ಬಾಸಣಿಸಿ ನಿಂದ ಚೈತ್ಯಮಂ ದಿರಂಗಳ ನಿತ್ಯನಿರತಿಶಯಭೋಗಂಗಳೊಳ್ ಪರಮೇಶ್ವರನ ಮಹಿಮಾತಿಶಯಮಂ ಗಳಂಗಳೊಳಂ ಮುಕ್ತಕಂ ಕುಲಕಂ ಕೋಶಂ ಸಂಘಾತಮೆಂಬ ರಚನಾವೈಚಿತ್ರ್ಯ ಚಿತ್ರಾಯತನವೈದಂಡಿಕಪ್ರಬಂಧಬಂಧುರಪದ್ಯಬಂಧದೊಳಮುತ್ಕಳಿಕೆ ಚೂರ್ಣಿಕೆ ಲತಿಕೆ ಖಂಡಂ ವೃತ್ತಗಂಧಿ ಚಿತ್ರಮೆಂಬ ಗದ್ಯಬಂಧದೊಳಂ ತದ್ಯುಗಳಸಮ್ಮಿಳಿತ ರಸಭಾವಸಂಪಚ್ಚಂಪೂಕೃತಿಯೊಳಮೋದಿ ಪೊಗೞ್ವ ಸುರನರಖೇಚರವಿನೇಯ ವೃಂದಪರಮಾನಂದಕಮನೇಕಸಂಕೀರ್ಣರಾಗಂಗಳಿನಿಳಾದಿಪ್ರಬದ್ಧಶುದ್ಧಮಾ ರ್ಗದೊಳಂ ಧ್ರುವಾದಿಗೀತಜಾತಮೇಳಾಪಕದ ಸೂಳ ಕ್ರಮದ ದೇಸೀಮಾರ್ಗ ದೊಳಂ ಮಾರ್ಗತ್ರಯಾನುಗತಮಾಗಿ ಪಾಡಿ ಪರಸುವ ಕಿನ್ನರಕಿಂಪುರುಷಗಂ ಧರ್ವಗೀರ್ವಾಣಭವ್ಯನವ್ಯೋತ್ಸಕರ್ಗೆ ಲಯಕಮಾಗಿ ಲೀಲೆಯಂ ತಳೆದು

ಇದೆ ಚೈತ್ಯಾವನಿ ಚೈತ್ಯಚೈತ್ಯದೆಡೆಯೊಳ್ ಪ್ರಾಸಾದಮೈದೈದು ಚೆ
ಲ್ವಿದಿರ್ಗೊಂಡಿರ್ದಪುವಿಲ್ಲಿ ದಿಕ್ಪತಿಗಳೆಲ್ಲಂ ಬಂದು ದೇವಾರ್ಚನೋ ॥
ನ್ಮ[1] ದದಿಂದಾಡುವ ಪಾಡುವಗ್ಗಳಿಕೆಯೊಳ್ ಚೂಡಾಮಣೀಜ್ಯೋತ್ಸ್ನೆಯೊ
ಳ್ಪುದುಮಾಡಂಗಳ ಮೇಲೆ ಚುಂಚುಲೊವೆಯೊಳ್ ವಿದ್ಯುಲ್ಲತಾಲಾಸ್ಯಮಂ ॥ ೨೯

ವ॥ ಆಚೈತ್ಯಾವನೀವಲ್ಲಭೆಯ ಮೇಲ್ಕೊಂಡಕಾರೋಹಣದಂತೆ ನಯನ ಕೌತುಕಾರೋಹಣಮಾದ ಧೂಳಿಶಾಳಮನಳಂಕರಿಸಿ ನವರತ್ನರಚಿತದ್ವಾರಶಾಖಾ ನುಬದ್ಧಜ್ಯೋತೀಂದ್ರದೌವಾರಿಕನಿಕಾಯಭಾಯಾಮಚ್ಛನ್ನಚತುರ್ದಿಶಾಪ್ರಸನ್ನ ಲಕ್ಷ್ಮೀಲೇಪನವಿಳಾಸಮಂ ತಳೆದು

1 ಗ. ಖದಿಂ.

ಒಳಗಣ ಹೊಱಗಣ ವೇದಿಗ
ಳೊಳಗೆಡೆಗೊಟ್ಟಷ್ಟಮಂಗಳಂ ನವನಿಧಿಗಳ್ ।
ಕೆಳೆಗೊಂಡಿವೆ ನೋಡಿವೆ ಕ
ಣ್ಗಳ ಮಂಗಳಭವನಮೆನಿಪ ಮಣಿಮಾಡಂಗಳ್ ॥ ೩೦

ಮಾನವತಿರ್ಯಕ್ಖೇಚರ
ದಾನವರ್ಗಾರೋಹಣಾವರೋಹಣಸುಖಸಂ ।
ಧಾನಂ ಶಶಿಮಣಿಮಯಸೋ
ಪಾನಂ ಪ್ರಾಕ್ಪೂರ್ವಪಾದಲೇಪವಿಧಾನಂ ॥ ೩೧

ಅಗಲಂ ದ್ವಾದಶಯೋಜನಂ ಶಿಶುವಧೂವೃದ್ಧರ್ಗದೆಂತೋಲಗಂ
ಬುಗಲುಂ ಪೋಗಲುಮೆಂಬೊಡಾರ್ಗಳಿಗೆಗಾಪುರ್ನ್ಮತ್ತಭವ್ಯರ್ಕುದೃ ।
ಷ್ಟಿಗಳಜ್ಞಾನಿಯ ಸಂಜ್ಞೆಗಳ್ಪುಗುವರಲ್ಲರ್ಪೊಕ್ಕ ಭವ್ಯಾಳಿಗಿ
ಲ್ಲ ಗಡಂ ಕ್ಷುತ್ತೃಷೆ ಜಾತಿ ಭೀತಿ ಮೃತಿ ವೇಗಂ ನಿದ್ರೆ ಶೋಕಂ ಕರಂ ॥ ೩೨

ಜಿನಕಾಯೋಚ್ಛ್ರಾಯದಿಂ ದ್ವಾದಶಗುಣಮೆನಿಕುಂ ಚೈತ್ಯಕೇಳೀಕುಭೃತ್ಕೇ
ತನಮಾನಸ್ತಂಭಚೈತ್ಯಾಂಘ್ರಿಪಸುರಕುಜಹರ್ಮ್ಯಾವಳೀಗೋಪುರಸ್ತೂ ।
ಪನಿಕಾಯಂ ಶ್ರೀಮಹಾಮಂಡಪಮಿವು ಸತಿ ಕೇಳೀಶಚಾರಂಗಳೊಳ್ತ
ಳ್ತನುವಿಂ ಪ್ರಾಕಾರವೇದೀತತಿ ಚತುರಧಿಕಂ ತೋರಣಂ ಕಿಂಚಿದುಚ್ಚಂ ॥ ೩೩

ಸಭೆಯೆಲ್ಲಂ ಹೊನ್ನನೀರಿಂದರೆಬಳಿದವೊಲಿರ್ದಪ್ಪುದೇಕೀಜಗದ್ವ
ಲ್ಲಭನಂಗಚ್ಛಾಯೆ ಪೂರಂಗವಿದ ಪಸರದಿಂದೀಲತಾಸ್ತಂಭಕಲ್ಪ ।
ಪ್ರಭವೋದ್ಯಾನಪ್ರಸೂನಾವಳಿಗೆ ನಿಜದ ಕಂಪಲ್ಲದತ್ಯದ್ಭುತಂ ಸೌ
ರಭಮೆಂತೆಂಬ್ಬೆ ಜಿನಾಧೀಶ್ವರಚರಮತನೂದಿವ್ಯಸೌರಭ್ಯದಿಂದಂ ॥ ೩೪

ವ॥ ಎಂದು ಮನೋನಯನವಲ್ಲಭೆಯ ಮನೋನಯನಂಗಳ ಸಭಾರಂಗ ದೊಳ್ಪಾಸುಂ ಪೊಕ್ಕುಂ ಬರೆದು ಪರಮಾನಂದರಸ[1] ದೋಕುಳಿಯಾಡೆ ಬೇಱೆ ವೇಱೆ ವರ್ಣಿಸಿ ತೋಱಿ ನಿಜಕಿರೀಟಮಾಣಿಕ್ಯಶೋಣಾಂಶುಪಟಲಂ ಪಟ್ಟ

1 ಕ. ದೊಳೇ.

ವರ್ಧನಗಜದ ನಿಟಿಲಪಟ್ಟದೊಳ್ ಸಿಂದುರಂಬಡೆಯೆ ಗಂಧಕುಟೀರತ್ನಕಳ ಶಂಗಳ್ಗವನತನಾಗುತ್ತುಮೆಯ್ದೆವಂದಾಧೂಳಿಶಾಳದ ಮೂಡಣ ಬಾಗಿಲ್ವಾಡದ ಮುಂದಣ ಪ್ರಾಂಗಣದೊಳವತಾರಿತಾಭ್ರಮೂವಲ್ಲಭನಾಗಿ ವಿಮಾನಯಾನವಾಹ ನಂಗಳನಿಟಿದ ಕಲ್ಪಜೇಂದ್ರವೃಂದಂ ಬೆರಸಿಂದ್ರಾಣೀಸಮೂಹಸಮೇತಂ ಪೊಕ್ಕು ದಿವಿಜೇಂದ್ರನೈಂದ್ರೀದಿಶಾವೀಧಿವಿಡಿದು ನಡೆತರ್ಪಾಗಳ್

ಘುಸೃಣರಸಂಗಳಿಂದೆ ಚಳೆಯಂಗುಡುವಂತರುಣಾಬ್ಜಪತ್ರದಿಂ
ದೆಸಳ್ವಳಿಪಂತೆ ಬರ್ಪಮರರಾಜವಧೂಜನಪಾದಪಲ್ಲವ ।
ಪ್ರಸರದ ಕಾಂತಿ ಕಾರ್ಮುಗಿಲ ಮೇ[1]ಗೆಳನೇಸಱ ಬೋರೆಗೇಂ ಬಿಸಿ
ಲ್ವಸರಿಸಿದಂತಿರಾಯ್ತು ಪರಿಷತ್ಸರಣೀಹರಿನೀಳಭೂಮಿಯೊಳ್ ॥ ೩೫

ವ॥ ಅಂತೆಯ್ದೆವಂದು ಗಗನಸ್ಫಟಿಕಪ್ರಾಕಾರಕ್ಕಳಂಕಾರವಾದ ಹರಿತಕ ಹಿರಣ್ಮಯದ್ವಾರಗೋಪುರಮಂಟಪದಿನೊಳಪೊಕ್ಕು

ಅಗರುವ ಧೂಪಧೂಮಲತೆಯಂ ಹರಿನೀಲವಿಭೂಷಣಾಂಶು ದೀ
ವಿಗೆಗಳ ಜ್ವಾಲೆಯಂ ಮುಕುಟಶೋಣಮಣಿಪ್ರಭೆ ಮೌಕ್ತಿಕಾಚ್ಛರ ।
ಶ್ಮಿಗಳುದಹಾರಮಂ ನಯನಕಾಂತಿ ಲತಾಂತಮನೀಯೆ ಮೂಮೆ ಕೈ
ಮಿಗೆ ಬಲವಂದು ಗಂಧಕುಟಿಯಂ ಮೆಱೆದಾಹರಿಧೂಮವೇಳೆಯಂ ॥ ೩೬

ಅಂತು ಬಲವಂದು ನವಮಣಿ
ಸಂತಾನದೊಳಗೆಸೆಯೆ ಬೆರಕೆಗೆಂಪು ವಿಕಸ ।
ತ್ಸಂತಾನಲತಾಂತಂಗಳ್
ಕಂತುಹರಂಗಿತ್ತ ರತ್ನಕುಸುಮಾಂಜಳಿಯಂ ॥ ೩೭

ವ॥ ಸಿಂಹಪೀಠೋಪಾಂತಮಣಿಕುಟ್ಟಿಮಲಕ್ಷ್ಮಿಗೆ ಸರ್ವಾಂಗಾಲಿಂಗಿತಮ ನಿತ್ತು ಹರ್ಷೋತ್ಕರ್ಷಪುಳಕಜಾಳಕಂ ಮುನ್ನೇಱಿ ಬಟಿಕಮೆಟ್ದು ಸಮುಚಿತಪ್ರ ದೇಶದೊಳ್ನಿಂದು ಕಿಂಚಿದವನತಕೋಟೀರಭಾರನುಂ ಮುಕುಳಿತಕರಸರೋ ಜನುಂ ವಿಕಸಿತಾಧರಪಾಣಿಪಲ್ಲವನುಮಾಗಿ

1 ಕ. ಜ. ಮೇರೆ.

ಜಯ ಜಯ ಜಯ ಪರಮೇಶ್ವರ
ಜಯ ಜಯ ಜಯ ಪರಮಪುರುಷ ಜಯ ಜಯ ಜಯ ದು ।
ರ್ಜಯ ಮನ್ಮಥ ಮದಭಂಜನ
ಜಯ ಜಯ ಜಯ ದೇವದೇವನಂತಜಿನೇಂದ್ರಾ ॥ ೩೮

ನಿನ್ನಱಿವು ನಿನ್ನ ಮಾರ್ಗಂ
ನಿನ್ನಾಗಮಯುಕ್ತಿ ನಿನ್ನ ಮಹಿಮೋನ್ನತಿಯಿ ।
ಲ್ಲೆನ್ನಮನವಱಿಯೆ ಮಿಕ್ಕರೊ
ಳೆನ್ನಂ ನಿನ್ನಂತೆ ಮಾಡನಂತಜಿನೇಂದ್ರಾ ॥ ೩೯

ನಿನ್ನನೆ ಬಿಡದಾರಾಧಿಸಿ
ನಿನ್ನಯ ಗಣಕೋಷ್ಠದೊಳಗೆ ನೆಲಸಿದ ಬಹುವಿ ।
ಧ್ಯೋನ್ನತಗರ್ಣಿಯಿಲ್ಲೆಂದೊಡೆ
ನಿನ್ನನ್ನರ್ದೇವರಾರನಂತಜಿನೇಂದ್ರಾ ॥ ೪೦

ಮುನಿದೊಸೆವ ಕೊಡುವ ಕೊಳ್ವಾ
ತನೆ ದೇವಂ ಸೇವಕಂಗಮಿಲ್ಲದ ನಿನ್ನಂ ।
ನೆನೆದನೆ ನಿಜಪದವಿಗೆ ಭಾ
ಜನನಪ್ಪನದೆಂತೊ ಪೇಟನಂತಜಿನೇಂದ್ರಾ ॥ ೪೧

ಅಱಿವೆ ತನುವಾದುದಾದೊಡ
ಮಱಿವೈ ನೀಂ ನನ್ನ ಗುಣಮನಿನ್ನಱಿವವರಾ ।
ರಱಿಯದೊಡೇಂ ನೀನಾನೆಂ
ಬಱಿವಱಿತಮೆ ಸಾಲ್ವುದೆನಗನಂತಜಿನೇಂದ್ರಾ ॥ ೪೨

ಮೆಱೆದೊಲಿಸುವಿಱಿದು ಸಲಿಸುವ
ಕುಱುಪಿಲ್ಲದ ನಿನಗೆ ದೇವನೆಂದಱಿಯದರೇ ।
ಕೆಱಗಿದಪರೆನ್ನ ಪುಣ್ಯದಿ
ನಱಿದೆಱಗಿದೆನರ್ಹನೆಂದನಂತಜಿನೇಂದ್ರಾ ॥ ೪೩

[1] ಪರಮ ಭವದೀಯಚರಣ
ಸ್ಮರಣಾಗಸ್ತ್ಯಂಗೆ ಚುಳುಕಮಾತ್ರಂ ಭವಸಾ ।
ಗರಶತಮೆಂದಪೆನಾಗಮ
ವಿರುದ್ಧಮೆನ್ನದಿರತರ್ಕ್ಯನಂತಜಿನೇಂದ್ರಾ ॥ ೪೪

ಜಿನ ನಿನ್ನಂ ಪೂಜಿಪನೊ
ಳ್ಪನವರತಂ ಪೊಗಟ್ಟು ಸುಖಮೆ ಮೋಕ್ಷಂ ಪೇಕ್ಷಂ ।
ನಿನಗಕ್ಕನಂತಕರಲೋ
ಚನಜಿಂಹಕನಪ್ಪೆನಕ್ಕನಂತಜಿನೇಂದ್ರಾ ॥ ೪೫

ವ॥ ಎಂದನೇಕಪ್ರಕಾರದಿಂ ಸ್ತುತಿಸಿ ಬಟಿಕ್ಕಂ

ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವೈಸ್ತಾಳಿ ನೀರಾಜನಂ
ವಿಳಸತ್ಕುಂಡಿಕೆ ಡೆಳ್ಳೆಯೆಂಬೆಡೆಗಳೊಳ್ಸಂಪೂರ್ಣತೋಯಾದಿ ಮಂ ।
ಗಳವಸ್ತುಪ್ರಕರಕ್ಕದೇಂ ಶಚಿಯ ಕೆಯ್ಯುಂ ಕಣ್ಣುಮೋರೊಂದನ
ಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಂಕ್ರಂದನಂ ॥ ೪೬

ಕಳೆದುಕೊಳುತ್ತುಮಿರ್ದುದು ಕರಂ ವರವಸ್ತುಗಳಿರ್ದುವರ್ಚನಾ
ವಳಿಯೊಳುದಗ್ರಭಕ್ತಿಭರದಿಂ ಜಳಮಾಯ್ತು ಸುಗಂಧಮಾಯ್ತು ತಂ ।
ಡುಳಚಯಮಾಯ್ತು ಪೂದುಱುಗಲಾಯ್ತುಪಹಾರಮಾಯ್ತು ದೀಪಮಾ
ಯ್ತೆಳಸಿದ ಧೂಪಮಾಯ್ತು ಫಳಮಾಯ್ತು ಮನಂ ಕವಿಪಾರಿಜಾತನಾ ॥ ೪೭

ನವರತ್ನದ ರಾಶಿಗಳಿಂ
ವಿವಿಧಾಂಬರಭೂಷಣಂಗಳಿಂ ಶಂಖಮಹಾ ।
ರವದಿಂ ಸಂಗೀತಸಮು
ತ್ಸವದಿಂ ಮುಕ್ತಾತಪತ್ರಚಾಮರಚಯದಿಂ ॥ ೪೮

ಭೃಂಗಾರಕಲಶದರ್ಪಣ
ತುಂಗಧ್ವಜಸುಪ್ರತಿಷ್ಠತಾಳಾಷ್ಟಮಹಾ ।

1 ಗ. ಜ. ಚರಣಭವಚ್ಚರಣ.

ಮಂಗಳದಿಂ ನವನಿಧಿಗಳಿ
ನಂಗಜಹರನಂ ಸುರೇಂದ್ರನಾರಾಧಿಸಿದಂ ‖ ೪೯

ವ‖ ಅಂತನೇಕಪೂಜಾವಿಧಾನದೊಳಂ ವಾಕ್ಪೂಜಾವಿಶೇಷದೊಳಮಾರಾಧಿಸಿ ಗಣಕೋಷ್ಠದೊಳಗಣ ವಿಶೇಷಕರನಾಗಿರ್ದ ಜಯನಾಥಗಣಧರದೇವಸಮಕ್ಷದೊಳಿರ್ದು ಪರಮಧರ್ಮಾಭಿಸೇವಾಭಿಮುಖನಾಗಲೊಡಮನಂತಜಿದ್ವಲ್ಲಭನ ವದನಮಂಡಲಮೆಂಬ ಹಿಮವದ್ವಾರಶಿಖರದಿಂ ದಿವ್ಯಭಾಷಾನಿಮಿಷತರಂಗಿಣೀಪ್ರವಾಹಂ ತಾಲುಸಂಘಟ್ಟನಮುಮಧರಸಂಘಟ್ಟನಮುಮಿಲ್ಲದೆಯುಂ ದೂರಾಸನ್ನಂಗಳೊಳವ್ಯಕ್ತಮಲ್ಲದೆಯುಂ ಗಂಭೀರಮಧುರಶ್ರವ್ಯಗುಣಾನುಪಮಾಳಂಕೃತಿ ಸಲ್ಲದೆಯುಂ ದೇವಭಾಷಾದಿಸಕಲದೇಶಭಾಷಾತ್ಮಕಮಪ್ಪುದಱಿನರ್ಧಮಾಗಧಿಯೊಳ್ ನಿಲ್ಲದೆಯುಂ (ಯಥಾಪ್ರಕಾರಮಿಂತ)ವತರಿಸಿದುದು । ಜೀವಪುದ್ಗಲಧರ್ಮಾಧರ್ಮಾಕಾಶಮೆಂಬ ಪಂಚಾಸ್ತಿಕಾಯಂಗಳುಮನೀಯಯ್ದುಂ ಕಾಲದ್ರವ್ಯಂಬೆರಸಾಱಾದ ಷಡ್ದ್ರವ್ಯಂಗಳುಮಂ ಜೀವಮಜೀವಮಾಸ್ರವಬಂಧಸಂವರೆನಿರ್ಜರೆಮೋಕ್ಷಮೆಂಬ ಸಪ್ತತತ್ವಂಗಳುಮಂ ಈಏಱು ತತ್ವಂ ಪುಣ್ಯಪಾಪಂಗಳೆಂಬೆರಡುಂ ಪದಾರ್ಥಂಗಳ್ವೆರಸೊಂಭತ್ತಾದ ನವಪದಾರ್ಥಂಗಳುಮನೊಳಕೊಂಡು ಸಪ್ತರಜ್ಜುಪ್ರಮಿತಸಮಚತುರಸ್ರಮೂಲಪ್ರದೇಶಮುಂ ಚತುರ್ದಶರಜ್ಜೂತ್ಸೇಧಮುಂ ಸಪ್ತರಜ್ಜುಪ್ರಮಾಣ ದಕ್ಷಿಣೋತ್ತರಾಯಾಮಮುಂ ಪೂರ್ವಪಶ್ಚಿಮಕ್ರಮಹೀನೈಕರಜ್ಜುಪರಿಮಾಣಮಧ್ಯಭಾಗಮುಮನುಪೂರ್ವವಿಸ್ತಾರಿತಪಂಚರಜ್ಜುಸಂಖ್ಯಾಂತರ್ಭಾಗಮುಮನುಕ್ರಮಹೀಯಮಾನೈಕರಜ್ಜುಸಮಾಸಿತಾಗ್ರಭಾಗಮುಮಾಮೂಲಚೂಳನೈರಂತರ್ಯತರುಸಾರೋಪಮಿತೈರಜ್ಜುಪ್ರಮಿತಚತುರಸ್ರತ್ರಸನಾಳಾಂತರಮುಂ ಘನೋದಧಿ ಘನನಿಳಯ ತನುವಾತ ನಾಮವಾಯುತ್ರಯಾವೇಷ್ಟಿತಮಾಗಿರ್ಪುದೀಲೋಕಸ್ವರೂಪಂ । ಈಲೋಕಮಧ್ಯದೊಳನೇಕದ್ವೀಪಕೂಪಾರವರ್ಷಧರಪರ್ವತಮಂದರಮಹೀಧರಪೂರ್ವಾಪರವಿದೇಹಭರತೈರಾವತಕರ್ಮಭೋಗಭೂಮಿಸಮಾಕೀರ್ಣಸ್ವಯಂಭೂರಮಣಸಾಗರಾವಧಿಯಾಗಿರ್ಪ ಮಧ್ಯಮಲೋಕಂ । ಈಮರ್ತ್ಯಲೋಕದಿಂ ಜ್ಯೋತಿರ್ಲೋಕಂಬೆರಸು ಮೇಗಣ ಭಾಗದೊಳ್ ಸೌಧರ್ಮೇಶಾನಸನತ್ಕುಮಾರಮಾಹೇಂದ್ರಬ್ರಹ್ಮೋತ್ತರಲಾಂತವಕಾಪಿಷ್ಟಶುಕ್ರಮಹಾಶುಕ್ರಶತಾರಸಹಸ್ರಾರಾನತಪ್ರಾಣತಾರಣಾಚ್ಯುತಮೆಂಬ ಪದಿನಾಱುಕಲ್ಪಂಗಳೊಳಮೊಂಭತ್ತುಂ ಗ್ರೈವೇಯಕಂಗಳೊಳಮೊಂಭತ್ತುಮನುದೇಶವಿಮಾ

ನಂಗಳೊಳಮಯ್ದುಮನುತ್ತರೆಗಳೊಳಂ ಸರ್ವಾರ್ಥಸಿದ್ಧಿಯೊಳುಮುತ್ತರೋತ್ತರಸುಖಾಯುರಾಧಿಕ್ಯಮುಂ ತಳೆದಿರ್ಪುದು ದೇವಲೋಕಮತ್ತಮೀಮಧ್ಯಲೋಕದಿಂ ಕೆಳಗೆ ಮಧ್ಯಭವನಮೆಂಬ ನಾಗಲೋಕದಿನತ್ತ ರತ್ನಪ್ರಭೆ ಶರ್ಕರಪ್ರಭೆ ಶಂಖಪ್ರಭೆ ಧೂಮಪ್ರಭೆ ತಮಪ್ರಭೆ ಮಹಾತಮಪ್ರಭೆಗಳುಂ ಭೇದದಿನದರೋತ್ತರದುಃಖಾಯುಷ್ಯಕಾಯೋಚ್ಛೇದಂಗಳಂ ತಳೆದಿರ್ಪುದು ನರಲೋಕಮೀಮೂಱುಂ ಲೋಕಂಗಳಂ ತೊಟ್ಟನೆ ತೊಳಲ್ದು ತಿಟ್ಟನೆ ತಿರಿವ ನರಕತಿರ್ಯಙ್ಮನುಷ್ಯದೇವಗತಿಗಳ್ಗೆ ಪುಣ್ಯಪಾಪಾಸ್ರವಂಗಳೆ ಕಾರಣಂ। ಅವಱೊಳ್ ಸಮ್ಯಗ್ದರ್ಶನ ಜ್ಞಾನ ಚಾರಿತ್ರಮೆಂಬ ರತ್ನತ್ರಯಬೀಜಪ್ರಭೂತಮಪ್ಪೇಕಾದಶಗುಣಸ್ಥಾನಸಮನ್ವಿತಸಾಗಾರಧರ್ಮದೊಳಂ ಬಾಹ್ಯಾಭ್ಯಂತರಭೇದಭಿನ್ನದ್ವಾದಶವಿಧತಪೋಮಾರ್ಗವರ್ತಿಯಪ್ಪನಗಾರಧರ್ಮದೊಳಂ ನೆಗಟ್ಟ ಚಾರಿತ್ರಪುಣ್ಯಾಸ್ರವಕಾರಣಂ ಕಾಮಕ್ರೋಧಲೋಭಾದಿಗಳಿಂ ಜ್ಞಾನಾವರಣಾದ್ಯಷ್ಟವಿಧಮಾಗಿಯುಮನೇಕವಿಧದಿನುದಯಿಸುವ ಕರ್ಮಪರಿಪಾಕಂ ಪಾಪಾಸ್ರವಕಾರಣಮೀಕರ್ಮಂಗಳೆರಡರ್ಕೆ ಜೀವಂ ತಾನೆ ಕರ್ತೃವುಂ ಭೋಕ್ತೃವುಮಪ್ಪ ರತ್ನತ್ರಯಸಾಕಲ್ಯಮುಭಯಕರ್ಮಂಗಳೊಳಂ ನಿರ್ಮೂಲನಕ್ಕೆ ಕಾರಣವಾಗಿ ಕರ್ಮನಿರ್ಮೂಲನಮೆ ಮೋಕ್ಷಮಕ್ಷಯಮನಂತಮವ್ಯಾಬಾಧಮತೀಂದ್ರಿಯಮನಿಂದ್ರಿಯಮಪುನರ್ಭವಂ ಸಿದ್ಧಪರಮೇಷ್ಠಿನಿಷ್ಠಿತನಿತ್ಯಾವಾಸಂ ಭವ್ಯಜನಪರಮೋಪಾದೇಯಮೆಂದು ಸಂಕ್ಷೇಪದಿಂ ನಿರೂಪಿಸಲೊಡಂ ಸಕಲಗಣಸಮೂಹಂ ಪರಮಾನುರಾಗರಸದಿಂ ತನ್ನೊಳ್ ತಣ್ಮಲೆದು ನಲಿದು ಪರಮಪುರುಷನನಾರಾಧಿಸುತ್ತುಮಿರ್ದುದಾಗಳ್

ಪರಮಾರ್ಹನ್ಮುಖಚಂದ್ರಮಂಡಲವಚಶ್ಚಂದ್ರಾತಪಾಸಾರದಿಂ
ತೆರೆಸೂಸುತ್ತಿರೆ ಹರ್ಷಬಾಷ್ಪಸಲಿಲಂ ಮೆಯ್ವೆರ್ಚೆ ರೋಮಾಂಚಸೀ ।
ಕರದಿಂದಂ ನಲಿದಾಡೆ ಚಿತ್ತಜಳಸತ್ವವ್ರಾತಮಾನಂದನಿ
ರ್ಭರಸಂದರ್ಭಮನಾಳ್ದನೂರ್ಜಿತಯಶೋಲಕ್ಷ್ಮೀಸುಧಾಸಾಗರಂ ॥ ೫೦

ವ॥ ಅನ್ನೆಗಮಿತ್ತಲ್

ಪರಿನಿಷ್ಕ್ರಮಣದೊಳಭವಂ
ಧರಣೀರಕ್ಷಣಮೆ ಸಕಲಪುರುಷಾರ್ಥಮಿದೆಂ ।

ದಿರಿಸಿದೊಡಯೋಧ್ಯೆಯೊಳಗಿ
ರ್ದರಸುತನಂಗೆಯ್ವನಂತು ವಿಜಯಕುಮಾರಂ ॥ ೫೧

ತಂದೆಯನಗಲ್ದ ವಿರಹಂ
ನಂದದೆ ಕಾರ್ಪಾಸಶಿಖಿಯೊಲೊಳಗೊಳಗಟಲಂ ।
ಸಂಧಿಸೆ ನಿಲಲಾಱದೆ ನಿಜ
ಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ ॥ ೫೨

ಮಂತ್ರಿಮಹತ್ತರರೊಳ್ ಸಂ
ಯಂತ್ರಿಸಿ ಸಾಮ್ರಾಜ್ಯಭಾರಮಂ ತಳೆರ್ದಂ ನಿ ।
ರ್ಮಂತ್ರಂ ನಿಸ್ಸಂಗಂ ನಿ
ಸ್ತಂತ್ರಂ ಕಾಣ್ಬಟ್ಕಱಿಂ ಜಗತ್ರಯಗುರುವಂ ॥ ೫೩

ಇನ್ನೆಡೆಯಿಂದಂ ಮಗುಟಿಂ
ತನ್ನಯ ರೂಪಿಂದೆ ನಿಂದನಂತೋಹಂ ಎಂ ।
ಬನ್ನೆವರಮೆಂದು ಪೂಣ್ದು ನಿ
ಸಂ ನಿಲ್ಲದೆ ರಾಜಭವನದಿಂ ಪೊಱಮಟ್ಟಂ ॥ ೫೪

ಅಸುಸಂಧಾರಣಮಾತ್ರಮ
ನಸಂಗದಿಂ ತಾಳ್ದಿ ಮಿಕ್ಕುದಂ ತ್ಯಜಿಯಿಸಿದಂ ।
ಕುಸುಮವಿಲೇಪನಭೂಷಣ
ವಸನಾಶನಪಾನಸುರತಶಯನಾದಿಗಳಂ ॥ ೫೫

ಕಟ್ಟಿದ ಸುವ್ರತಸೂತ್ರಂ
ಮೆಟ್ಟಿದ ಕೆರ್ಪುರ್ಟ್ಟವಲ್ಕಲಂ ಪೊಟ್ಟೆಯ ಕೂ ।
ಟ್ನಟ್ಟ ಬಿಸಿಲ್ಗೆತ್ತಿದ ಕೊಡೆ
ಕಟ್ಟಾಯತನಾಗಿ ಚಳಯದಿಂ ಪೊಱಮಟ್ಟಂ ॥ ೫೬

ಗಿರಿಗಹನದೊಳ್ ನದೀನದ
ಪರಿಸರದೊಳ್ ಬಂಜದಡವಿಯೊಳ್ ನಂದನದೊಳ್ ।

ತರುಮೂಲದೊಳ್ ಗುಹಾಗ
ಹ್ವರದೊಳ್ ಪರ್ವತನಿತಂಬದೊಳ್ ಕಂದರದೊಳ್ ॥ ೫೭

ನಾಡೊಳ್ ನಗರಗ್ರಾಮಂ
ಖೇಡಂ ಖರ್ವಡಮಡಂಬಪತ್ತನಮೆಂಬೀ ।
ಬೀಡುಂದಾಣದೊಳೆಲ್ಲಿಯು
ನೋಡುತ್ತುಮನಂತನಾಥನಂ ನರನಾಥಂ ॥ ೫೮

ಎನಿತಾನುಮಱಸಿ ಕಾಣದೆ
ತನು ತಾಱಿ ಬೞಲ್ದೆೞಲ್ದು ಬೆಂಬೞಿವಿಡಿದೊಂ ।
ದನುಮಾನದಿಂ ಸಹೇತುಕ
ವನದೆಡೆಗೆ ಮಗುೞ್ದು ಬಂದನಾವಿಜಯನೃಪಂ ॥ ೫೯

ಆವನದ ನಟ್ಟನಡುವತಿ
ಪಾವನತಳದಲ್ಲಿ ಪರಿದು ಪರ್ವಿರ್ದಶ್ವ ।
ತ್ಥಾವನಿಜಂ ಶಶಿಕಾಂತ
ಗ್ರಾವಮನೊಳಪೊಯ್ದು ಕಣ್ಗೆವಂದಿರೆ ಕಂಡಂ ॥ ೬೦

ಮಂದರದರಲುಗಳಿಂ ಹರಿ
ಚಂದನದಿಂ ಮುತ್ತಿನಕ್ಕಿಯಿಂ ಮಾಣಿಕದಿಂ ।
ನಂದದ ಸೊಡರ್ಗುಡಿಗಳಿನಾ
ನಂದಮನೊಡರಿಸುವ ಪರಿಕರಂಗಳನದಱೊಳ್ ॥ ೬೧

ಅಂತಲ್ಲಿ ಕಂಡು ಗಮನ
ಶ್ರಾಂತಿಯನಾಱಿಸುವ ಬವಸೆಯಿಂ ಕುಳ್ಳಿರೆ ಭೂ ।
ಕಾಂತಂ ಬಂದರದೊರ್ವರ್
ಶಾಂತಿಶುಭಾಚಾರ್ಯರೆಂಬ ದಿವ್ಯಮುನೀಂದ್ರರ್ ॥ ೬೨

ಆರಣ್ಯವಾಸರೇಕವಿ
ಹಾರವ್ರತಶೀಲಗುಣನಿದಾನನಿಧಾನ ।

ಕಾರುಣ್ಯಾತ್ಮರ್ಬರೆ ಕಂ
ಡಾರಾಜಕುಮಾರನೆಱಗೆ ಪರಸಿ ಬಟಿಕ್ಕಂ ॥ ೬೩

ತೊಳಪ ದಶನಾಂಶು ಜಾಹ್ನವಿ
ತೊಳೆಯೆ ತನೂದುಃಖಪಂಕಮಂ ಮೃದುಮಧುರೋ ।
ಜ್ಜ್ವಳವಾಣೀದುಂದುಭಿ ಬೆಂ
ಕೊಳೆ ದುರಿತಮೃಗಂಗಳಂ ದಯಾನಿಧಿ ನುಡಿದಂ ॥ ೬೪

ಅರಳಿಯ ಮರನಿದು ನಿನ್ನಯ
ಗುರು ನಿಂದೆಡೆಯಿಾಸುಧಾಂಶುಕಾಂತೋಪಳದೊಳ್ ।
ಪರಮಜ್ಞಾನನಿಧಾನಂ
ದೊರೆಕೊಂಡುದು ಸುರರುಮಸುರರುಂ ಪೂಜಿಸಿದರ್ ॥ ೬೫

ಇದಱಿಂ ಬಟಿಕ್ಕವೊಗೆದಂ
ಬುದಮಾರ್ಗದೊಳಿರ್ದನರ್ಕಕೋಟಿಪ್ರಭೆ ಸ ।
ನ್ನಿದವಾದ ದಿವ್ಯದೇಹದಿ
ನೊದವಿದ ನುಣ್ಬೆಳಗು ಬೆಳಗೆ ದಿಗವನಿತಳಮಂ ॥ ೬೬

ಸಮವಸರಣದಿಂ ಪೊದಟ್ಟಿ
ಷ್ಟಮಹಾಪ್ರತಿಹಾರವೈಭವಂ ಮೂವತುನಾ ।
ಲ್ಕು ಮಹಾತಿಶಯಂ ತ್ರಿಭುವನ
ರಮಣಂಗೆ ಜಿನಂಗೆ ಮೆಱೆವುವುಟಿದವಗೊಳವೇ ॥ ೬೭

ಆಗಳ್ ಧರ್ಮವಿಹಾರದಿ
ನಾಗಸದೊಳ್ನಡೆದು ಭವ್ಯಸಸ್ಯಾವಳಿಗ ।
ಳ್ಗಾಗಿಸಿ ಧರ್ಮಾಮೃತವ
ರ್ಷಾಗಮಮಂ ತೀರ್ಥನಾಥನಿರ್ದಪನಲ್ತೆ ॥ ೬೮

ನೀನತಿಭರದಿನನಂತಂ
ನಾನೆಂಬನ್ನೆವರಮುಱಸುವೈ ತಂದೆಯನೆಂ ।

ಬೀನಿಯಮದೆ ನಿನ್ನಂ ನಿನ
ಗಾನಿಯಮಂ ಸಫಳಮಪ್ಪ ನೋಂಪಿಯನುಸಿರ್ವೆಂ ॥ ೬೯

ಪುರುನಾಥದಿವ್ಯಭಾಷಾ
ವಿರಚನೆಯೊಳ್ ವೃಷಭಸೇನಗಣಧರದೇವರ್ ।
ಭರತಂಗೆ ಪೇೞ್ದಿರುತ್ತಮ
ಪುರಾಣಸಂಸಿದ್ಧಮಪ್ಪನಂತವ್ರತಮಂ ॥ ೭೦

ಪದಪಿಂದೆ ಭಾದ್ರಪದ ಶು
ದ್ಧದಾಚತುರ್ದಶಿಯೊಳಿರ್ಪುದುಪವಾಸಮನಾ ।
ಱದೊಡೇಕಭುಕ್ತಮಂ ಮಾ
ೞ್ಪುದು ಮತ್ತಂ ದೇವಪೂಜೆಯಂ ಜಾಗರಮಂ ॥ ೭೧

ಪದಿನಾಲ್ಕನೆಯ ಜಿನೇಂದ್ರಂ
ತ್ವದೀಯಗುರುವದಱನವುಳಸೂತ್ರಾಂತಿಕದೊ ।
ಳ್ಪದಿನಾಲ್ಕುಂ ಗಂಟನಿಕ್ಕು
ವುದದು ಕನಕದ ಪಟ್ಟುನೂಲ ನೂಲಭಿರಚಿತಂ ॥ ೭೨

ಅದು ಕೆಟ್ಟೊಡೆ ಕೆಡುವುದು ಸಿರಿ
ಯುದು ಪಱದೊಡೆ ಪಱಗು ಜಸಮುದಾಸೀನಂ ಮಾ ।
ಡಿದೊಡಂತೆ ತನ್ನ ಮುಂಬಗೆ
ಯುದು ಲೋಕಂ ಸೂತ್ರಮದಱನವಹಿತಪಾತ್ರಂ ॥ ೭೩

ಆಚಾರದಿನರ್ಹಂಗಭಿ
ಷೇಚನಮಂ ಮಾಡಿ ಸೂತ್ರಮಂ ಚಂದನಗೋ ।
ರೋಚನಕುಂಕುಮಕರ್ಪೂ
ರಾರ್ಚಿತದಿಂದಂ ಜಿನಾಂಘ್ರಿಗೆಱಗಿಸಿ ಬೞಯಂ ॥ ೭೪

" ಓಂ ಹ್ರೀಂ ನವೋಽರ್ಹತೇನಂತತೀರ್ಥಕೃತೇನಂತಭೋಧಾ
ಯಾನಂತದರ್ಶನಸೌಖ್ಯೋನ್ನತವೀರ್ಯಾಯ

ಹ್ರೀಂ ನಮೋಭಗವತೇ
ಯನಂತನಾಮ್ನೇ ನಮೋನಂತಜಿನನಾಥಾಯ "

ಈಮಂತ್ರದಿನಭಿಮಂತ್ರಿಸಿ
ಮೂಮೆ ಗಣಾಚಾರ್ಯಹಸ್ತದಿಂದವಶೇಷಾ ।
ಧಾಮಂಬೆರಸವನತಮುಖ
ತಾಮರಸಂ ಕೊಳ್ಗೆ ಕೇಳ್ದು ಕಥೆಯಂ ಬಟಿಯಂ ॥ ೭೫

ಕ್ರಮದಿಂ ದಾರಮನೋಂ ಹ್ರೀಂ
ನಮೋರ್ಹತೇನಂತಬಂಧನಾಶಾಯಾನಂ ।
ತಮಹಿಮ್ನೇ ಸ್ವಾಹಾ ಯೆಂ
ಬೀಮಂತ್ರಮ ಪೇಳ್ದು ಕಟ್ಟುವುದು ಬಲದೋಳೊಳ್ ॥ ೭೬

ಮಂಡಗೆ ಮೇಣ್ ಹೂರಿಗೆ ಮೇ
ಣುಂಡಲಿಗೆಗಳಕ್ಕಿಕಣಿಕದಿಂದ್ಯೆಮಾನಂ ।
ಗೊಂಡಿಪ್ಪತ್ತೆಂಟಾಗಿರೆ
ಖಂಡಿಸಿ ಕೊಡುವುದು ದೃಢವ್ರತಂಗಂತದಱೊಳ್ ॥ ೭೭

ಬಾಯಿನಮಿಾಗೋಂ ಹ್ರೀಂ ನಿ
ಶ್ರೇಯಸಮಸ್ಮೈ ದದಾತ್ವನಂತಫಲಂ ಎಂ
ಬೀಯುಚ್ಚಾರಿತಮಂತ್ರದಿ
ನಾಯುಷ್ಮಾನ್ ಭವ ಯೆನುತ್ತೆ ಕೊಳ್ವುದು ಕೊಳ್ವಂ ॥ ೭೮

ವ್ರತಶೀಲಗುಣಾಚಾರಾ
ನ್ವಿತಮುಂ ಮುನಿಪನನೊಸೆದುಂ ಪರ್ವದ ದಿನದೊಳ್ ।
ಗತನಾಗಿ ಚರಿಗೆಗುಡಮವ
ನತಿಥಿಪ್ರಿಯಪೂಜೆವೆರಸು ನಿಲಿಪುದು ಮನೆಯೊಳ್ ॥ ೭೯

ಪರಮಾನುರಾಗದಿಂದಂ
ನಿರಂತರಂ ಮಾಡಿ ಬಟಿಕೆ ತಾನುಣ್ಬುದು ಕೊ ।

ಟ್ಟರಿಸಿದ ಬಾಯಿನದರ್ಘಮ
ನರೆಗೊಱೆಯದೆ ನೋಂಪುದಿಂತು ಪದಿನಾಲ್ವರಿಸಂ ॥ ೮೦

ಶಿಲೆಯಿಂ ಲೋಹದಿನಕ್ಕು
ಜ್ಜ್ವಳಮಪ್ಪಂತಿರಲನಂತನಂ ಮಾಡಿಸಿ ತ ।
ತ್ಕಳಶಸ್ಥಾಪನವಿಧಿಮಂ
ಗಳಗೀತಾತೋದ್ಯನರ್ತನಂ ಮೆಱೆವಿನೆಗಂ ॥ ೮೧

ಪೂಜಾಭಿಷೇಕವಿಧಿಯಂ
ಯೋಜಿಸಿ ಮುನಿವರರ್ಗೆ ತಟ್ಟು ಕುಂಚಂ ಶ್ರುತರಾ ।
ರಾಜಿತವಸ್ತ್ರಂ ಮೆಱೆದಿರೆ
ಭೋಜನಮಂತೀವುದಟ್ಟೆಱಿಂ ಪದಿನಾಲ್ಕಂ ॥ ೮೨

ಕುಂದದನಂತಪುರಾಣಮ
ನೊಂದಂ ಬರೆಯಿಸಿ ಮುಮುಕ್ಷುಗೀವುದು ಕೇಳ್ದಾ ।
ನಂದಿಸುವ ವಿವೇಕಿಗೆ ತೀ
ವಿದ ಚಿತ್ರಂ ಕಂಬಿ ಕಪ್ಪಡಂ ಮೆಱೆವಿನೆಗಂ ॥ ೮೩

ಇಂತುಜ್ಜಯಿಸುವುದಾದಿಯೊ
ಳಂತರದೊಳ್ಕಡೆಯ ಬರಿಸದೊಳ್ತಾಂ ಕೊ ।
ಳ್ವಂತಿರನಂತವ್ರತಮಿದು
ನೋಂತ ಗುಣಾಧಿಕರಿಗಿಹಪರಸೌಖ್ಯಕರಂ ॥ ೮೪

ಸಿರಿ ಪಿರಿದಪ್ಪುದು ರುಜೆಗ
ಳ್ಪರಿಹರಿಪುವು ದುರಿತಮಿರದೆ ಪರೆವುದು ಪುತ್ರರ್ ।
ಪರಮಪವಿತ್ರರ್ ಪುಟ್ಟುವ
ರರಸರ್ ಮುಂ ಕೆಟ್ಟ ರಾಜ್ಯಪದಮಂ ಪಡೆವರ್ ॥ ೮೫

ಕಾಂತೆಗೆ ಸೊಬಗುಂ ಸಿರಿಯುಂ
ಸಂತಾನಮುಮೆಯ್ದೆ ತನಮುಮಭ್ಯುದಯಮುಮೋ ।

ರಂತು ನೆಲೆವೆರ್ಚೆ ಸುಖದಿಂ
ಸಂತೋಷಮನೆಯ್ದಿ ಬಾಳ್ವರಿದು ಪರಮಾರ್ಥಂ ॥ ೮೭

ಕಡೆಯೊಳಮರೇಂದ್ರಪದಮಂ
ಪಡೆದಿಂದ್ರಾಣೀವಿಳಾಸಮಂ ತಳೆದು ಸುಖ ।
ಕ್ಕೆಡೆಯಿಲ್ಲೆನೆ ಭೋಗಂಗ
ಳ್ಪಡಿಯಿಲ್ಲೆನೆ ನಲಿವರೋರ್ಮೆಯುಂ ಸ್ತ್ರೀಪುರುಷರ್ ॥ ೮೭

ನೀನುಂ ನೋಂತೀನೋಂಪಿಗೆ
ಭೂನಾಯಕರೊಳಗೆ ಕರ್ತೃವಾಗಿ ಯಶಶ್ರೀ ।
ದಾನಶ್ರೀ ವಿಭವಶ್ರೀ
ಮಾನಶ್ರೀ ವೆರಸು ತಾಳ್ದು ರಾಜ್ಯಶ್ರೀಯುಂ ॥ ೮೮

ಇಲ್ಲಿಗಿದೆ ನೂಱುಯೋಜನ
ದಲ್ಲಿ ಮಹಾಸಮವಸರಣವಿಭವದಿನರ್ಹ !
ದ್ವಲ್ಲಭನಿರ್ದಪ ನೀಂ ಪೋ
ಗಲ್ಲಿಗನಂತನನೆ ಕಂಡು ಸುವ್ರತನಪ್ಪೈ ॥ ೮೯

ಪ್ರಚುರತರಭಾದ್ರಪದಶು
ದ್ಧಚತುರ್ದಶಿನಾಳೆ ನೋನೆ ವನದೇವತೆಯರ್ ।
ಖೇಚರಗತಿಯಿಂದವೊಯ್ವರ್
ಸಚರಾಚರಗುರುವನೊಂದು ನಿಮಿಷದೆ ಕಾಣ್ಬೈ ॥ ೯೦

ಎಂದಾಮುನಿ ನೋನಿಸೆ ನೋಂ
ತಂದಾಗಳೆ ಸಮವಸರಣಮಂ ಪೊಕ್ಕತ್ಯಾ ।
ನಂದಮಯವಾಗೆ ಕಂಡಭಿ
ವಂದಿಸಿದಂ ತ್ರಿಭುವನೈಕಚೂಡಾಮಣಿಯಂ ॥ ೯೧

ನುತಿಯಿಂ ನತಿಯಿಂ ಪೂಜಾ
ತತಿಯಿಂ ಭಜಿಯಿಸಿ ಬಟಿಕ್ಕೆ ವಿಜಯಂ ನಿಜಸಂ ।

ಸೃತಿಸುಖಮುಮನಕ್ಷಯ್ಯಸು
ಖತರಸುಖಮನಾಂತಿಂತು ರಾಜ್ಯಲೀಲೆಯೊಳಿರ್ದಂ ॥ ೯೨

ಕ್ರಮದಿಂ ನೋನಿಪನಂತಜಿದ್ವ್ರತಸಪರ್ಯಾಶ್ಚರ್ಯದಿಂ ನೂತ್ನರ
ತ್ನಮಯಶ್ರೀಜಿನರಾಜಮಂದಿರಶತೋದ್ವಾರಂಗಳಿಂ ಪಾತ್ರದಾ ।
ನಮನಃಪ್ರೀಣನದಿಂದನಂತವಿಜಯೋರ್ವೀವಲ್ಲಭಂ ಶ್ಲಾಘನೀ
ಯಮನೇಂ ಮಾಡಿದನೋ ಭವದ್ವಿತಯಮಂ ಸಾಹಿತ್ಯರತ್ನಾಕರಂ ॥ ೯೩

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥಪುರಾಣದೊಳ್
ಸಮವಸರಣವರ್ಣನಂ
ದಶಮಾಶ್ವಾಸಂ
ಸಂಪೂರ್ಣಂ

---

# ಏಕಾದಶಾಶ್ವಾಸಂ

ಶ್ರೀಮುಖಪೂರ್ಣಸುಧಾಕರ
ಕೌಮುದಿವಾಗ್ಬಾಮೆ ಭುವನಮುಂ ತನ್ನ ತನೂ ।
ಧಾಮದೆ ಧವಳಿಸೆ ಮಹಿವೋ
ದ್ದಾಮತೆವಡೆದಂ ವಿನೇಯಜನಮುಖತಿಲಕಂ ॥ ೧

ಮದನಪತಾಕೆಯೆಂಬ ಖಚರಾಂಗನೆ ದಿವ್ಯಸಭಾಂತರಾಳದೊಳ್
ಮದನಹರಂಗೆ ಪೊಕ್ಕೆಱಗಿ ಮುಖ್ಯಗಣಾಗ್ರಣಿಗಳ್ಗೆ ಭಕ್ತಿಭಾ ।
ವದೆ ಗುರುಭಕ್ತಿಭಾವಮಭಿವಂದಿಸಿ ಮತ್ತೆ ಬರುತ್ತೆ ಧೂಳಿಶಾ
ಳದ ಕಡೆಮಾಡದೊಳ್ಕೆಳದಿಯಂ ಸಭೆಗೆಯ್ದೆಬರುತ್ತು ಮಿರ್ದಳಂ ॥ ೨

ವ॥ ಚಿತ್ರಲತೆಯೆಂಬ ಮತ್ತಮರಾಳಗಮನೆಯುಂ ಕಂಡು ಕೆಯ್ಯಂ ಪಿಡಿದು ನಿಲಿಸಿ ತದ್ಗೋಪುರಮಂಡಪಪ್ರಥಮಭೂಮಿಕಾರತ್ನವೇದಿಕೆಯ ಮುತ್ತಿನ ಮತ್ತವಾರಣಮುನಿರ್ವರುಂ ನೆಮ್ಮಿ ಕುಳ್ಳಿರ್ದು

ಕೇಳೆಲೆ ತಂಗಿ ಚಿತ್ರಲತೆ ನೀಂ ಪೆಱಗಿರ್ದಪೆಯೆಂದು ನಿನ್ನನಾಂ
ಕೇಳಿ ಲತಾವನೀತಳದೊಳಾಕೃತಕಾದ್ರಿಯೊಳಾಗಣಾಂಗನಾ ।
ಮಾಳೆಯೊಳಾಸರೋವರದೊಳಾವನವೀಥಿಯೊಳಾಸುನೃತ್ತಗೀ
ತಾಳಯದೊಳ್ತೊಳಲ್ದಱಸಿ ಕಾಣದೆ [1] ಪೇೞ್ದಪೆನೆಂದು ಕೇಳ್ದುದಂ ॥ ೩

ವ॥ ಎಂಬುದು ಮಾಚಿತ್ರಲತೆ ಕರ್ಣಸುಭಗಮಾದ ವೃತ್ತಕಮುಂ ಕೇಳಲಭಿಮುಖಿಯಪ್ಪುದುಂ ಮದನಪತಾಕೆಯಿಂತು ಪೇೞ್ದಪಳೆಂದು ಸಮವಸರಣಮಂಡಲಮೆಂಬ ಸನ್ಮಾರ್ಗಮಂಡಳದೊಳುದಿಸಿದ ಚಂದ್ರಮಂಡಳದಂತೆ ಮಂಡಳಿಸಿ ಪೊಳೆವ ಧವಳಕಾಯಕಾಂತಿಕೌಮುದೀಪ್ರಭೆಗೆ ಸುಪ್ರಭೆಯಂ ತೆರಳ್ಚಿ ಸುಪ್ರಭ

---

1 ಗ. ಕಾಣಿನೆ. ಕ. ಕಾಱ.

ನೆಂಬ ನಾಲ್ಕನೆಯ ಬಲದೇವಂ ಬಂದು ದೇವರ ದೇವನನನೇಕಾರ್ಚನೆಗಳಿಂದ ರ್ಚಿಸಿ ಪೊಡೆವಟ್ಟು ಜಯನಾಥಗಣಧರರೊಳ್ ತನ್ನ ಪೂರ್ವಜನ್ಮವೃತ್ತಕಮಂ ಬೆರಸು ನಿಜಾನುಜಾತಂ ತ್ರಿಖಂಡಮಂಡಳಾಧೀಶ್ವರಂ ಚತುರ್ದಶವಾಸುದೇವನೆನಿಸಿದ ಪರಮಪುರುಷೋತ್ತಮನ ವೃತ್ತಕಮಂ ಬೆಸಗೊಳಲೊಡನಾಗಣಧರಾಧೀಶ್ವರರಿಂತೆಂದು ಬೆಸಸಿದರದೆಂತೆಂದೊಡೆ

ಮೇರುವಿನರ್ಥಮಂ ಜನನಿಧಾನಮನಗ್ಗದ ಜಂಬುದೀವಮಂ
ವಾರಿಧಿಸರ್ಪನಪ್ಪಿದುದು ವಾರಿಧಿವೇಷ್ಟಿತಭೂಮಿಭಾಗದೊಳ್ ।
ಭಾರತವರ್ಷವೊಪ್ಪಿದುದು ಭಾರತವರ್ಷದ ತೆಂಕವಕ್ಕದೊಳ್
ಧಾರಿಣಿಗುಜ್ಜ್ವಲಶ್ರವಣಖಂಡಳವಾಯ್ತು ಸುರಮ್ಯಮಂಡಳಂ ॥ ೪

ಅದಟ ವಿಳಾಸಭಾಸುರಸಭಾಭವನಕ್ಕೆ ವಿತಾನಮಾಯ್ತು ಸ
ಗ್ಗದ ಸುಖದೊಳ್ಪುದಕ್ಕೆ ನೆಲಗಟ್ಟಿನ ಕೀಲ್ತೆರವಟ್ಟಮಾದುದ ।
ಗ್ಗದ ಭವನಾಮರಾಲಯದ ಮೆಯ್ಸಿರಿಯೆಂದೊಡೆ ನೋಡ ನಾಡ ಹಂ
ಸದಪರಿಯಲ್ತು ನಾಡೊಳಗುದಾರದ ಭೋಗದ ಚಾಗದಾಗರಂ ॥ ೫

ಬಳಸಿದ ನಂದನಂಗಳ ಪಸುರ್ಪಿನ ಪಣ್ತೆಱಗಿರ್ದ ಕೆಯ್ವೊಲಂ
ಗಳ ತೆನೆಗಂಪಿನೂರ ದವಳಾರದ ಬೆಳ್ಪಿನ ನೀಳನೀರಜಾ ।
ಕಳಿತತಟಾಕಮಂಗಳದ ಕರ್ಪಿನ ನೇರ್ಪಮರ್ದಂಗಜಂಗೆ ಮಂ
ಡಳಕರವರ್ಣಪೂರಪರಿಮಂಡಳವಾಯ್ತು ಸುರಮ್ಯಮಂಡಳಂ ॥ ೬

ನಗೆಗಣ್ಚಂದ್ರಿಕೆಯಂ ತುಳುಂಕೆ ಬೆಳೆಗಾವುತ್ತಿರ್ಪ ಕಾಂತಾಮುಖೇಂ
ದುಗಳಿಂ ಬರ್ಚಲ ಚಂದ್ರಕಾಂತಪಲಪೂರಂ ಕುಂದದುರ್ವೇಱ್ದು ತೆಂ ॥
ಗುಗಳೊಳ್ತಿಂಗು ಪಟಂಚೆ ಸೂಸುವೆಳನೀರೆಯ್ತಂದುದಭ್ರಾಂಗಣಾ
ಪಗೆಗಂ ಶಕ್ರನ ನಂದನಕ್ಕೆ ಮಿಗುಗುಂ ತಳ್ತಿಂಪುಮಂ ಸೊಂಪುಮಂ ॥ ೭

ನೆರೆಯುತ್ತಿರ್ಪ ರಥಾಂಗಪಕ್ಷಹತಿಯಿಂದಂ ನಿಟ್ಟೆಸಳ್ವಿಟ್ಟು ಷ
ಟ್ಚರಣಾಘಾತದೆ ಕುತ್ತೆಸಳ್ಕುಸಿದು ಹಂಸ [1] ವ್ಯಾನದಿಂ ಸೋಂಕೆ ಜೊ ।
ಲ್ದರುಣಾಂಭೋಜರಜಂ ಮುಸುಂಕೆ ಸುಟಿಗುಂ ಪಾಂಥಪ್ರಜಾಘಸ್ಮರಂ
ಸ್ಮರತೇಜಪ್ರಭೆ ರೂಪುಗೊಂಡು ಸುಟಿಪಂತುದ್ಯಾನಮಾಳಾನಿಳಂ ॥ ೮

1 ಗ. ಚ. ವ್ಯಂಸ.

ಊರೊಳಗುಯ್ಯಲಾಡುವೆಳವೆಂಡಿರ ಹೂಂಕೃತಿಯಾರ್ದುಪಾರ್ದು ಕೇ
ದಾರವನಂಗಳೊಳ್ಬೆಳಸುಗಾವ ಬೆಡಂಗಿಯರಿಟ್ಟ ಭೀಂಕೃತಂ ।
ಕೂರಿಸಿ ಕೂರ್ತು ಕಾದಲರನಾಬನದೊಳ್ಗುಱಿಮಾಡಿಯರ್ಧಕಾಂ
ತಾರಿಯ ಬಿಲ್ಲ ಜೇವೊಡೆಗೆ ಮೂವಡಿಮಾಟ್ಪುದು ಟಂಕೃತಂಗಳಂ ॥ ೯

ಜನಪತಿಯಪ್ಪ ಪೆರ್ಗುಱಿಪಿನಿಂದಿವು ಬೀಡಿವು ನಾಡೆಯೂರ್ಗಳೆಂ
ದನುಮಿಪರೆಲ್ಲರುಂತಱಿಯಬಾರದು ಭೇದಿಸಿ ಬೇಱೆವೇಱೆ ಸೊಂ ।
ಪಿನ ಸಿರಿ ಬೇಱೆವೇಱೆ ಮಣಿಮಾಡದ ತಿಂತಿಣಿ ಬೇಱೆವೇಱೆ ನಂ
ದನ ಲತೆ ಬೇಱೆವೇಱೆ ಪರಿಖಾಮಣಿತೋರಣವಪ್ರಗೋಪುರಂ ॥ ೧೦

ಪರಮಬ್ರಹ್ಮನ ನಂದನಂ ಭರತಚಕ್ರಾಧೀಶದರ್ಪಾಪಹಂ
ಚರಮಾಂಗಂ ಕುಸುಮೇಷುಬಾಹುಬಲಿದೇವಂ ಶ್ರೀಮಹಾಮಂಡಳೇ ।
ಶ್ವರನಾಳ್ದಿರ್ದುದುದಾರವೀರವಿಭವಶ್ರೀಪಾದನಂ ಪಾದನಂ
ಪುರಮುಂಟಾಪುರಮಾಸುರಮ್ಯವಿಷಯಶ್ರೀವಕ್ತ್ರಬಿಂಬೋಪಮಂ ॥ ೧೧

ಅದಱೊಳ್ಪುಟ್ಟಿದ ಗಂಡರೆಲ್ಲಮತಿವೀರರ್ಪೆಂಡಿರೆಲ್ಲಂ ವಿಳಾ
ಸದ ಸೌಭಾಗ್ಯದ ಸೀಮೆಗಳ್ಕಿಱುಬರೆಲ್ಲಂ ಪಂಡಿತರ್ಪುಟ್ಟಿವ ।
ಟ್ಟಿದರೆಲ್ಲಂ ಕಡುಚಾಗಿಗಳ್ಬಡವರೆಲ್ಲಂ ಭೋಗಿಗಳ್ಗಂಕರುಂ
ಚದುರರ್ಲೆಂಕರುಮಾಯುಗಾಱರಧಮರ್ವ್ಯಾಧರ್ಕಳುಂ ಧಾರ್ಮಿಕರ್ ॥ ೧೨

ಅರಮನೆಗಿಂಬುವೆತ್ತ ರಣಮಂಡಳಮಾರಣಮಂಡಳಕ್ಕೆ ಬಿ
ತ್ತರಿಸಿದ ಬೀದಿ ವೀಧಿಗಳ ಕಾದಲೆಗೊಪ್ಪುವ ಮಂಡಪಂ ಮನೋ ।
ಹರತರಮಂಡಪಕ್ಕೆ ಕರುವಿಟ್ಟವೊಲಿರ್ಪ ಸುಧಾಗೃಹಂಗಳ
ಚ್ಚರಿಯೆನೆ ಚೈತ್ರಚಂದ್ರಮರೆ ಚಿತ್ರಿಸಿದಂತೆಸೆದಿರ್ಪುದಾಪುರಂ ॥ ೧೩

ಭರತನನಳ್ಕಿ ಬಾಹುಬಲಿ ತುಳ್ಕಿ ಮರಳ್ಚಿದ ಪೂಗೊಳಂ ಭುಜಾ
ಪರಿಘದಿನಿಕ್ಕಿದಬ್ಬಡದ ಕೇಳಿನಗಂ ನಡೆನೋಡಿ ದಿಟ್ಟಿಗೆ ।
ಟ್ಟಿರಿಸಿದ ತಣ್ಬುಟಿಲ್ಮೆಱೆಯೆ ಮಾಡಿದ ತಂಗದಿನಾಡೆ ಸೋಲ್ವ ನ
ಲ್ಲರ ಬಿನದಂಗಳಿಂ ಮೆಱೆವುದೀಗಳುಮಾನಗರೀಬಹಿರ್ವಣಂ ॥ ೧೪

ತಿಳಿಗೊಳದೊಳ್ತಿಱಿಂಬೊಳೆದು ತಣ್ಣನೆ ಪಣ್ಣನೆ ಬಂದ ಮಾಮರಂ
ಗಳ ತಳಿರ್ಜೊಂಪದೊಳ್ನುಸುಳ್ದು ಮೆಲ್ಲನೆ ಮೆತ್ತನೆ ಮೊಗ್ಗೆಹಿಗ್ಗಿ ಪೂ ।
ಗಳ ಪೊಸಗಂಪಿನಲ್ಲಿ ಸುೞಿದಿಮ್ಮನೆ ಕಮ್ಮನೆ ತೀಡಿ ಬೇಟದೊ
ಳ್ಟಳೆವುದು ಕೂಟಮಂ ಪ್ರಿಯರ್ಗೆ ತತ್ಪುರನಂದನಮಂದಮಾರುತಂ ॥ ೧೫

ಅಸಿತೊಳ್ಪಿಸೆವ ಸುರಮ್ಯಾ
ವನಿಗಂ ಪಾದನಪುರಕ್ಕಮಧಿಪತಿ ವೀರಾ ।
ರಿನೃಪಾಲಶಿರಃಕರಪಾ
ಣಿನಿಘೃಷ್ಟಭುಜಕೃಪಾಣಕಂ ವಸುಷೇಣಂ ॥ ೧೬

ರಸೆಯಂ ಷಾಡ್ಗುಣ್ಯಮಿತ್ರಾಂಜನಪರಿವೃತೆಯಂ ತನ್ನ ತೇಜಃಪ್ರತಾಪಂ
ರಸವತ್ಕಾಶ್ಮೀರರಾಗಂ ಶಶಿವಿಶದಯಶಂ ಕ್ಷೌಮಮುದ್ಯೋತಕೀರ್ತಿ ।
ಪ್ರಸರಂ ಮುಕ್ತಾಫಲಂ ತಾಮೆನೆ ಸೊಗಯಿಸೆ ಕೈಗೆಯ್ದುಳಂ ತಾಳ್ದಿಕೊಂಡಂ
ವಸುಷೇಣಂ ಸ್ವಾಪ್ತಚಾತುರ್ಬಲಸಮರತನುತ್ರಾಣನುಕ್ತಿಪ್ರವೀಣಂ ॥ ೧೭

ಊರ್ವಶಿ ರಂಭೆ ಮೇನಕಿ ತಿಲೋತ್ತಮೆಯೆಂಬರ ಹಾವಭಾವಮುಂ
ಪುರ್ವಿನ ಕೊಂಕು ಕಣ್ಮಲರ ಕಾಂತಿ ಕದಂಪಿನ ತೆಳ್ಪು ಸಾಲ್ವುದಾ ।
ರೋರ್ವರೆ ಗೆಲ್ವುದಕ್ಕೆನಿಪ ರಾಣಿಯ ವಾಸದ ದೇಸೆಯೊಸ್ಸೆಯು
ಯ್ಯೂರ್ವರೊಳಂ ಸುನಂದೆ ಪಿರಿಯಳ್ ವಸುಷೇಣನ ಚಿತ್ತವೃತ್ತಿಯಿಂ ॥ ೧೮

ದರಹಾಸೋಜ್ಜ್ವಲಚಂದ್ರಿಕಾಪ್ರಸರದೊಳ್ ಲಾವಣ್ಯಕೇಳೀಸರೋ
ವರದೊಳ್ ಯೌವನಪುಷ್ಪಮಂಜರಿಯೊಳಂಚಚ್ಚಂಚರೀಕಂಗಳಂ ॥
ತಿರೆ ಯಾದೋಯುಗಳಂಗಳಂತಿರೆ ರಸಕ್ರೀಡಾಚಕೋರಂಗಳಂ
ತಿರೆ ಭೂಕಾಂತನ ಕಣ್ಗಳೇಂ ನಲಿವುವಾನಂದಾಮಹಾದೇವಿಯೊಳ್ ॥ ೧೯

ಜಯವಧು ಬಾಹುಪೂರಕದ ಮೇಲೆ ಮಲಂಗಿದ ತೋಳ್ಗಳಂ ಮನಃ
ಪ್ರಿಯದರಹಾಸದೊಳ್ನಲಿವ ವಕ್ತ್ರಮನೂರ್ಜಿತಲಕ್ಷ್ಮಿ ಹಾರಯು ।
ಷ್ಪಿಯೊಳೊಲೆದುಯ್ಯಲಾಡೆ ಪಿರಿದಾದರಮಂ ನಡೆನೋಡುವಂ ಸುನಂ
ದೆಯ ಮುಖಬಿಂಬಮೆಂಬ ಮಣಿದರ್ಪಣದೊಳ್ ವಸುಷೇಣಭೂಭುಜಂ ॥ ೨೦

ವ॥ ಅಂತು ಸಕಲರಾಜ್ಯಾಂಗಲಕ್ಷ್ಮಿಯೊಳಂ ವಿನೋದವಿಳಾಸಂ ದೇಸೆವಡೆ ವಿನಮಿಷ್ಟವಿಷಯಕಾಮಸುಖಾನುಭವವಿಭೂತಿಯಿಂದಮಿರ್ದೊಂದು ದಿವಸಂ

ನಿಜವೈಹಾಳೀವಿನೋದವ್ಯತಿಕರಿತಮನಂ ವಾಹಳೀಭೂಮಿಯೊಳ್ ಸಾ
ಮಜಮಂ ಬಂದೆಱತಕ್ಕಿಂಬಿಡುವ ಹಿಡಿವ ಮಾರ್ಕೊಳ್ವ ಕೈಕೊಳ್ವ ಮಾದ್ಯ ।
ದ್ಗಜಚಾತುರ್ದಂತಮೇಳಾಪದೆ ಪೆಣೆವೊಡೆವೊಟ್ಟೈಸಿ ತಟ್ಟಿಪ್ಪ ಸೂಚ್ ಭೂ
ಭುಜರಂ ದೇವೇಂದ್ರನಂ ಧಿಕ್ಕರಿಸಿ ಮೆಱೆದನಾಧೋರಣಂ ಧಾರಿಣೀಶಂ ॥ ೨೧

ಮದಧಾರಾಸಾರಜಂಬಾಳಿತಧರಣಿತಳಂ ತಾಪಕೋಪಂಗಳೊಳ್ ಪು
ಟ್ಟಿದ ಕಾಯ್ಪಿಂ ಘಟ್ಟಿಸುತ್ತಿರ್ಪನಮಿಭಪತಿಯಂ ನೀಡೆ ಬಿಟ್ಟಿಕ್ಕೆ ಕೆಯ್ಯೊಳ್ ।
ಬಿದುವಂದಾಂ ಪೊಯ್ದು ಧೈರ್ಯದಿಂದೊಡೆ ಜೆನಕನ ಭಾವಂಬೊಲಾಪೇಚಕಾಧೋ
ರದೆ ಕುಳ್ಳಿರ್ಪಂದಮಂ ತೋಱಿದನೊ ಜನಪನಾರೂಢಿಯಿಂ ಪ್ರೌಢಿಯಿಂದಂ॥೨೨

ಪೊಳೆವಲಗಿಂ ಚಳಚ್ಚಳಿಪ ಮಿಂಚಿನ ಕಾಣಿಕೆವೆತ್ತ ಕಾಯದ
ಗ್ಗಳಿಕೆಯ ನಟ್ಟು ಸೋರ್ವ ಮದಧಾರೆಯ ಮೆಯ್ಸರಿ ಕಾರಹಾರಿಗಿ ।
ಟ್ಟಳಮೆನೆ ಬಿಟ್ಟನೊಟ್ಟಯಿಸಿ ವೇಂಟೆಡೆಯೊಳ್ತಿರಿಪಲ್ಲಿ ಚಿತ್ರಾಂಗಾ
ವಳಿಯ ತೆರಳ್ಕೆವೆತ್ತ ತೆರೆ ಸುತ್ತಿದವೊಲ್ಸುಟಿದೇಱಿ ತೋಱಿದಂ ॥ ೨೩

ವ॥ ಅಂತೇಱಿ ಮೆಱೆವ ವಾಹಳೀವಿನೋದಾವಸರದೊಳೊರ್ವಂ ಪೂರ್ವಪರಿಚಿತಪ್ರಸನ್ನಾಕಾರಂ ಸುದರ್ಶನನೆಂಬೊಂ ಬಂದು ಸುರಧನುಪರಿಧಿಪಳಿತಸುಧಾಸೂತಿಬಿಂಬಾಯಿತ ಫುಲ್ಲಾಕಾರಝಲ್ಲರೀಸಮುಲ್ಲಸಿತ ಸಿತಾತಪತ್ರಂ, ಕರಕರೋತ್ತಾಳದೋಳಾಯಮಾನಕಲಾಪಗುಲುಂಚ್ಛಂ ಸ್ತಂಭಿತೋತ್ತರಂಗಖುರಪುಟಪರಾಗಪಟಲಂ. ಘರ್ಮಜಲಲುಳಿತಗಂಡಮಂಡಲತಾಂಡವೀಕೃತನಾಗಕುಂಡಳಫಣಾಮಂಡಳನುರಸ್ಥಳಸ್ಥೂಲತಾರಹಾರಗಭಸ್ತಿವಿಸ್ತಾರಿತಕಂಚುಕಾಂಚಳಂ, ಪರಿತಾನತ್ಕತಿಪಯಾಂಗರಕ್ಷಕದಂಡಫಳಗಘರ್ಘರೀನಿರ್ಘೋಷಸಂವಲ್ಗವಲದ್ವಾರಕೀಸಮಾರೂಢನೆಯ್ದೆವಂದುಮವತೀರ್ಣತುರಂಗನಾಗೆ ತನ್ನ ಬರವಿಂದವಕಾಶಮಿಾಯುತ್ತುಂ ಮತ್ತಗಜದ ಬಿದುವನಪ್ಪಳಿಸುತ್ತುಂ ನಿಂದ ವಸುಷೇಣಮಹಾರಾಜಂಗೆ ದರ್ಶನೋಪಾಯನಮನಿತ್ತು ಪೊಡೆವಟ್ಟು ನಿಂದು ದೇವರದೇವನ ಸಹೋದರಂ ಸಹಪಾಂಸುಕ್ರೀಡಾನುಬಂಧಸಂಗತಬಂಧು ಮಕರಗ್ರಾಹಪುರವರಾಧೀಶ್ವರಂ

ಚಂಡಶಾಸನದೇವಂ ದೇವರಂ ಪಲದೆವಸಮುಗಲ್ದಿರ್ದು ನೆನೆದು ನೋಡಲ್ಬರುತ್ತುಮವಸರಮನಱಿಯಲೆನ್ನನಟ್ಟಿದನೆಂಬುದುಮತಿಪ್ರೀತಿಯಿಂ ವಿಸ್ತಾರಿತವಿಲೋಚನನಾಗಿ ಬೇಗಮಿಾಗಳೆ ಬರವೇಳ್ಪೆಂದಾತ್ಮನರ್ಮಸಚಿವಂಬೆರಸಾತನಂ ಕಟಿಪಿ ಒಳಸಿ ನಿಂದ ಗಂಧಸಿಂಧೂರಘಟಾಪಟಮನಿಕ್ಕೆಲಕ್ಕೆದೆಗೆದ ಪಸಾಯಿತರತುಳುಂಗಬಳನುಮಾಸ್ಥಾನೀಕೃತರಾಜಸುತಸಮಾಜನುಮಾಗಿ ನಿಂದಾಗಳ್

ಕ್ಷಿತಿರಂಗಂ ಭಟಕೋಟಿಪಾದತುರಗಶ್ರೇಣೀಖುರವ್ರಾತಸಾ
ತ್ಕೃತಮಾಶಾವಳಿ ಭೂಷಣಾಂಶುಮೃಗನಾಭೀಸಾರಸೌರಭ್ಯಸಾ ।
ತ್ಕೃತಮಭ್ರಂ ಚಮರೀಜಕೇತುಪಟಲಶ್ವೇತಾತಪತ್ರೌಘಸಾ
ತ್ಕೃತಮೆಂಬಂತಿರೆ ಚಂಡಶಾಸನನೃಪಂ ಬಂದಂ ಮಹೋತ್ಸಾಹದಿಂ ॥ ೨೪

ವ॥ ಅಂತು ಬರಲೊಡಮಿರ್ವರುಂ ವಾಹನಂಗಳನಿೞಿದು ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ಯಿನೆಡೆ ಪೊಟ್ಟೆನೊಡೆಯೆ ಪರಸ್ಪರಾಲಿಂಗನಂಗೆಯ್ದು ತತ್ಸಮಯಸಮುಚಿತಭಾಷಣಸಂಭಾವನಾನಂತರಂ ವಸುಷೇಣಮಹಾರಾಜಂ ತನ್ನ ಪಟ್ಟದ ಮದವೇದಣ್ಡಮುಂ ಚಂಡಶಾಸನನನೇಱಿಸಿ ಬೇಱೊಂದು ಭದ್ರಗಜಮಂ ತಾನೇಱಿ ಮಹಾವಿಭೂತಿವೆರಸೊಡಗೊಂಡು ಬಂದು

ಪುರಲಕ್ಷ್ಮೀಲಲನಾಪ್ಪಶೋಭೆ ವರನಾರೀಮಂಗಳಾಚಾರಚಾ
ರುರವಂ ಪೌರಜನಾವಲೋಕನವಚಃಕೌತೂಹಲಂ ಪೆರ್ಚೆ ಮಂ ।
ದಿರಮಂ ಪೊಕ್ಕು ಸಮಸ್ತವಸ್ತುಸುಖಸನ್ಮಾನಂಗಳಿಂದಂ ಮನಂ
ಬೊರೆದಂ ಭೂಪತಿ ಬಿದ್ದು ಪಲ್ಲಟಿಸಿತೆಂಬಂತಾಮನೋಮಿತ್ರನಂ ॥ ೨೫

(ಮಲ್ಲಿಕಾಮಾಲೆ)

ಸರಸಕಾವ್ಯವಿನೋದಗೋಷ್ಠಿಯಿನೊರ್ಮೆ ನಾಟಕನಾಟಿಕಾ
ಪರಿನಟದ್ರಸಭಾವಭಂಗಿಯಿನೊರ್ಮೆ ಗೀತದ ವಾದ್ಯದ ।
ಚ್ಚರಿಯ ನೃತ್ಯದ ಕೇಳ್ವಿಯಿಮ್ಮದದೊರ್ಮೆ ಜಟ್ಟಿಗರಪ್ಪ ಮ
ಲ್ಲರ ಪೊಣರ್ಕೆಯಿನೊರ್ಮೆ ಪೊತ್ತುಮನೊರ್ಮೆ ಮೇಷವಿಶೇಷದಿಂ ॥ ೨೬

ಒರ್ಮೆ ವಾಹವಿಳಾಸಕಂದುಕಕೇಳಿಯಿಂ ಗಜಯುದ್ಧದಿಂ
ದೊರ್ಮೆ ವಾರುವದಂಕದಗ್ಗದ ಕಾಳೆಗಂಗಳಿನೊರ್ಮೆ ಮ ।
ತ್ತೊರ್ಮೆ ಚಿತ್ರವಿಚಿತ್ರಕೌತುಕದಿಂದಮಿಂತು ನೆಗಟ್ಟಿದಂ
ಕೂರ್ಮೆಯಿಂ ವಸುಷೇಣಭೂಪತಿ ಚಂಡಶಾಸನಭೂಪನೊಳ್ ॥ ೨೭

ವ॥ ಅಂತು ನಿರ್ವಿಕಲ್ಪಮುಂ ನಿರಂತರಿತಮುಮಪ್ಪ ಸೌಹಾರ್ದದೊಳ ಪ್ಪೈಕಸದನದ ಸಹಪಙ್ತಿಭೋಜನದ ಸಹವಿಳಾಸಕ್ರೀಡಿತದ ಸಮಯಂಗಳೊಳಗೆ ವಸುಷೇಣನಂಗನೆ ಸುನಂದಾದೇವಿಯ ಭಾವಂಬಡೆದ ಕುಸುಮಕೋದಂಡನ ವಶೀಕರಣಕಾಂಡಂ ಕೀರ್ತಿಸಯಿಟ್ಟು ಗಱಿಗಟ್ಟಿ ತಿರ್ದಿ ಬಣ್ಣವಿಟ್ಟಂತೆ ಕಣ್ಣತವ ಕಮಂ ಕಡೆಗೋಡಿವರಿಯಿಸುವ ರೂಪಿಂಗನುರೂಪಮಾಗಿ ತಿಳಕಿತಮಾದ ಮದನ ಮತ್ತಗಜದುತ್ತರದೇಸೆಯಂತೆ ಚಿತ್ತಮಂ ತೊತ್ತಬದುಟಿದೇಱುಂಜವ್ವನಕ್ಕಳಂ ಕಾರವಾಗಿ ಕೈಮಾಡಿ ಮೆಱೆವ ಕಾಮದೇವನ ಕರವಾಳಂತೆ ಕಣ್ಣೊಳ್ ಪೊಳೆದೆ ರ್ದೆಯೊಳುಳ್ಕಿ ಕೊಳ್ಳುಬೆಳ್ಕುಗೊಳಿಸುವ ವಿಳಾಸದೊಳಂ ವಿಳಾಸಕ್ಕೆ ದಯಂ ಬಡೆದು ಮನ್ಮಥಚಕ್ರವರ್ತಿಯ ಸಮ್ಮೋಹನಶಕ್ತಿಯಂತೆ ಭಾವಕರ ಬಗೆಯ ಬಯ್ಕೆಯನಗೆಯೆತ್ತಿ ಸೂಱೆಗೊಳ್ವ ಕಳಕಳಾಪ್ರೌಢಿಯೊಳಂ ದುರಾತ್ಮಕನಪ್ಪ ಚಂಡಶಾಸನನ ಕಣ್ಮಲರ್ ಕವಿದು ಕವ್ವರೆಗೊಂಡು ಮಂಡಳಿಸಿ ಬಳಸಿ ಸೋಲಕ್ಕಾ ಲಂಬವಂ ಪಡೆವೆರ್ದೆಗಾದದವಟಲುಂ ತನುವಿಂಗೆ ತಾಪಮುಮನೊಡನೆ ಬಳೆಯೆ ವಳೆಯೆ

ಕೆಳೆಯನ ಪಙ್ತಿಭೋಜನದೊಳೊರ್ಮೆ ವಿಳಾಸದೆ ಬಡ್ಡಿಸುತ್ತುಮಿ
ರ್ಪೆಳೆಯಳ ತೋಳ ಮೂಲದ ಪೊಗರ್ಮಣಿಬಂಧದ ಚೆಲ್ವು ಕೋಮಲಾಂ ।
ಗುಳಿಗಳ ಕೊಂಕು ಕಣ್ಗೆ ಕುಡೆ ಕೌತುಕಮಂ ಭ್ರಮೆಗೊಂಡು ಕಾಮುಕಂ
ವಳಿಗೆಯನೆತ್ತಿ ಬೊಟ್ಟಿಡಲೊಡರ್ಚಿ ಬಟಿಕ್ಕೆ ಪೊಗಪ್ತಗಿಕ್ಕಿದಂ ॥ ೨೮

ವ॥ ಅದಲ್ಲದೆಯುಂ

ನಗೆಗಣ್ಣಲ್ಲಳ ಕೂಟಮಂ ಪಡೆದುವಿಂಪಂ ಶ್ರೋತ್ರವಿಂಟಿತ್ತು ಮಾ
ತುಗಳಂ ನಾಸಿಕೆಗಾಯ್ತು ವಳ್ಸುಟಿದ ಸೂಡೊಳ್ ಸೌರಭಂ ಸ್ವಾದು ನಾ ।
ಲಗೆಗಾಯ್ತಾಕೆಯ ಹಸ್ತಪಲ್ಲವರಸಾನ್ನಾದ್ಯಂಗಳಿಂ ಸೋಂಕುವಾ
ಸೆಗೆ ಪಕ್ಕಾಗದೆ ನಿಂದ ಪಲ್ಲವಕನಂಗಕ್ಕಾಯ್ತನಂಗಜ್ವರಂ ॥ ೨೯

ವ॥ ಅಂತು ಕಂತುಸಂತಾಪಕ್ಕೆ ಪಕ್ಕಾಗಿ ಕುಕ್ಕುಳಗುದಿದುರ್ಕದೊಳಗೊಳಗೆ ಬೇವ ಹೃದಯಮಂ ಪದವಡಿಸಲಾಱದೆ ತನಗೆ ಬೀಡುಂದಾಣಮಾದ ಮಾಡದ ಪೆಱಗಣ ನಂದನವನದ ಮಾಕಂದಭೂರುಹದ ಮಂದಚ್ಛಾಯೆಯೊಳ್ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳತಳ್ಪತಳದೊಳಂ ಸೂಸುವಾಲನೀರ್ತುಱುಂತುಱೊಳಂ ಪೂಸುವ ಚಂದನಸ್ಥಾಸಕದೊಳಂ, ವಸಂತಸಮಯಾನುರೂಪಧಮ್ಮಶಿಶಿರೋಪಚಾರಚಾರುಚಾತುರತ್ವಂ ಮೆಱೆಯೆ ಮಮ್ಮಲಮಱುಗುತ್ತುಮಿರ್ದ ತನ್ನವಸ್ಥಾಂತರಮನಱಿದು ಮಱೆಯದಂತೆ ಬೆಸಗೊಂಡ ಸುದರ್ಶನನೆಂಬ ಕೆಳೆಯಂಗಿಂತೆಂದಂ

ನುಡಿಯಲ್ಬಾರದು ತೀರದು
ನುಡಿಯದೊಡೆಲೆ ಕೆಳೆಯ ನಿನಗೆ ಬೆಂದ ಮನಂ ಸಂ ।
ದೆಡೆಯೆನ್ನದೆ ಪೇೞ್ದಪೆನೀ
ಕಡುನಂಟನ ಸತಿಯ ರೂಪು ಸೋಲಿಸಿತೆನ್ನಂ ॥ ೩೦

ಭ್ರಮೆ ಪತ್ತಿತ್ತು ಮನಕ್ಕೆ ಕಣ್ತಿರಿಪಿ ಬಿಟ್ಟಂತೇನುಮಂ ಕಾಣವಂ
ಗಮನಂಗೋದ್ಭವವಹ್ನಿ ಸುಟ್ಟಪುದು ಕಾಣೆಂ ಪ್ರಾಣಸಂಧಾರಣೋ ।
ದ್ಯಮಮಂ ಪೇೞ್ಸಖ ಬಾೞ್ವುಪಾಯಮೆನಗಿನ್ನೆಂತೊರ್ಮೆ ಕಾರುಣ್ಯದಿಂ
ರಮಣೀಲೋಚನಚುಂಬನಂ ಕಳೆಗುಮೇ ನಟ್ಟಿರ್ದ ಹೃತ್ಶಲ್ಯಮಂ ॥ ೩೧

ಆಗಳುಮಾಂ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದ ಮೇಗೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್ ।
ರಾಗವಿಶೇಷಮಾಗಿ ಪೊಳೆಪೊಳ್ತೊಡೆಯೊಳ್ನಱಿಯಾಗಿ ಬಂದು ಸಂ
ಭೋಗಿಪ ಪುಣ್ಯಮಿಲ್ಲೆನಗವಾದೊಡೆ ಸಲ್ಲದೆ ಗಂಡನಿರ್ದೊಡೇಂ ॥ ೩೨

ವ॥ ಎಂದು ತನ್ನ ಹೃದಯಕವಾಟಮಂ ತೆಟ್ಟಂದೆಱೆದತ್ತಳಗಮಾದು ತ್ತುಂಡವೇಟಮಂ ಬಯಲೊಳಿಕ್ಕಿ ಬಾಯಳಿದ ನಿಜಪತಿಯ ನುಡಿಗೆ ಸುದರ್ಶನನೆಂದಂ ಮೇರೆಗಟಿದ ಬಟಿಕಾರ ಸ್ವೈರಣೆಯುಮೊರೆವೋಗದಿರವು; ಪರಿವ ಮನಕ್ಕೆ ಸೆಗ್ಗಮಿಲ್ಲಂ; ನೋಡುವ ಕಣ್ಗಳ್ಗಿಡೆಗ[1]ಟ್ಟಿಲ್ಲಮದಲ್ಲದೆಯುಂ

1 ಕ. ಟ್ಟೆಯಿಲ್ಲ.

ಒಡೆಯನ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗರೆಂ
ದೊಡೆ ಮನಮಿತ್ತು ಮಾಯ್ಯರಳವೆಂದೊಡಸಾಧ್ಯಮಿದೆಂದೊಡೊಲ್ಲಳೆಂ ।
ದೊಡೆ ಮೊಱೆಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯಮಲ್ಲಮೆಂ
ದೊಡೆ ತಲೆಹೋಗಿಯುಂ ಬಸಿದು ಬೀೞದೆ ಸೈರಿಸರಲ್ತೆ ಕಾಮುಕರ್ ॥ ೩೩

ವ॥ ಆದೊಡೇನಾದುದಾನಿತಂಬಿನಿಯೊಳ್ ನಮ್ಮ ಮನೋರಥಸಿದ್ಧಿಗವಕಾಶಮುಂಟಣದೆಂತೆಯಪ್ಪೊಡೆ

ನಯದಿಂ ಕೋಕಿಳನಾದೆ ನಿಮ್ಮರಸರಿಂತೇಕಾರಣಂ ಬಂದರಿ
ಲ್ಲಿಯ ಕಾರ್ಯಾಂತರಮೇಂ ಪ್ರಯಾಣದಿನಮಿನ್ನೆಂದೆಂತು ತಾಂ ಪೆತ್ತ ತಂ ।
ದೆಯ ಮಿತ್ರಂಗೊಡವುಟ್ಟಿದಣ್ಣನ ಸಹಾಯಂಗಾಡುವಂತೀಗಳೆ
ನ್ನಯ ಕೂಡಾಡಿದಳಿಂತಿದೇನಳಿಪೊ ಮೇಣ್ ನಿರ್ಮೋಹವೋ ಭಾವಿಸಾ ॥ ೩೪

ವ॥ ಎಂಬುದುಮರಸನಾಕೃತ್ಯೋಪಚಾರಮನೊಲವೆಂತೆಂತು ಕೈಕೊಳಲ್ಬಂದಪುದು

ಆಮದಿರಾಕ್ಷಿ ತನ್ನನಿಯನಿರ್ದಪೊಲೆನ್ನೊಡನಾಸೆಗೆಯ್ಯಳಾ
ಕೋಮಳಗಾತ್ರಮಂ ಸವಿದ ಕಣ್ಮಲರ್ಗೆನ್ನಯ ಗಂಡಗಾಡಿ ಶೋ ।
ಭಾವಹಮಾಗದೆಂದೊಡೆ ಸಖಂ ನೃಪ ನೀಂಬರೆ ಮಾಣ್ಬ ಜೋಡೆಯರ್
ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂಬರುಂಟಳೇ ॥ ೩೫

ವ॥ ಅದಲ್ಲದೆಯುಮಿಂದು ದೇವ ನೀನುಮಾತನುಮಾರೋಗಿಸಿ ಕೈಘಟ್ಟಿಗೊಳುತುಮೇಕಮರಾಳತೂಳತಳ್ಪಾಸನದೊಳ್ ಪರಸ್ಪರಂ ಮುಖಸಂಭಾಷಣಾವಿಶೇಷದಿನಿರ್ದಲ್ಲಿ ನಿನ್ನ ಪೆಱಗೆ ಕುಳ್ಳಿರ್ದೆನ್ನ ಕಣ್ಗೆ ತೆಱಪಾದುದಾಸರೋಜನಯನೆ ಭೋಜನಶಾಲಾಪವರಕಮಣಿಭಿತ್ತಿರಚಿತಶೀತಾಂಶುಕಾಂತವಾತಾಯನಾಂತರ್ವೇದಿಪ್ರಸಾರಿತಮಸೂರಿಕಾಗ್ರದೊಳಪಾಚಿ ತನ್ನಂ ಸಮೀಚೀನಪವನಪರಿಮಾಯುಮಾನನಿಟಿಲಾವಲಗ್ನಕುಟಿಲಕುಂತಳಮನೊಯ್ಯನೊಯ್ಯನೋಸರಿಸುವ ಕಬರಿಧಾರಿಣಿ ಘನಸ್ತನಮಂ ಮಲಂಗಿ ಸಹಚರೀನಿಚಯದೊಡನೆ ಬಾಹ್ಯೋಪಚಾರಚಾರುವಚನದರಹಸನಕರತಳತಾಡನಾದಿವಿನೋದವಿಳಾಸಾಭಿನಯ[1] ದೊಳಿರ್ದ

1 ಜ. ಯನ.

ಮನಮುಂ ಪುಂದಿಟ್ಟು ಪ್ರಾಣಂ ಮನದೆಗೊಳಿಸಿ ಕಂಡೂತಿಯಾದಂತಿರಾಲಿಂ
ಗನದಿಂಪಂ ಚುಂಬನಾಸ್ವಾದನಸುಖಮುಮನಂತಪ್ರವಿಷ್ಟಾಂಗಸಂಪಾ ।
ದನಮುಂ ಮೆಲ್ಪಾಯ್ದು ಮಾಡಲ್ತವಕಿಪ ನವಭಾವಾತಿರೇಕಂಗಳಿಂ ಕಾ
ಮಿನಿ ನಿನ್ನಂ ನೋಡಿದಳ್ಗಂಡನ ನೆಪದಿನದಂ ಕಂಡರಿಲ್ಲಕ್ಕುಮಾಗಳ್ ॥ ೩೬

ವ॥ ಎಂದಾಕೆ ತನ್ನ ವಲ್ಲಭಂಗಭಿನವಪುರುಷಸಂಗೋಷ್ಠಿಸಮನಿಸಿ ನಿಜಾತ್ಮವಲ್ಲಭನ ಸುಖಾನುಭವಕ್ರೀಡೆಗೆಡೆವಡೆಯದೆ ಸಿಡಿಮಿಡಿಗೊಳುತ್ತಿರ್ದ ಭಾವಮುಮಾವಿನಯಮುದಾಳಿಯಂ ಮತ್ತಿಗೆ ಪತ್ತಿಸುವಂತೆ ನುಡಿದು ಮನದ ಪಿಶಾಚಕ್ಕೆ ವಚನರಚನಾಧೂಪಮುಂ ತೋಱಿ ವಿರಹವಿಕಾರಮುಂ ಕೆಳರ್ಚಿ ನಿನ್ನೊಳಾಕೆಯಂ ಕೂಡುವುಪಾಯಮನೀಗಳೆ ಮಾಡಿದಪೆನೆಂದು ಪೋಗಿ ಒಟಿಕಮಾಧೂರ್ತನಾಡುತ್ತುಮಿರ್ದನಿತ್ತ ವಿರಹಾರ್ತಂ ಬಾಡುತ್ತುಮಿರ್ದನಲ್ಲದೆಯುಂ

ಒವೆರ್ ಸಭಾವಿಭೂಷಣಮಹಾಕವಿಲೀಲೆಗಳಿಂದೆ ತಮ್ಮುತೀ
ರ್ವರ್ಮುದದಿಂದಮಿರ್ದರಿರೆ ಕತ್ತರಿವೀಲಿಯ ಬೇಂಟೆಯಂ ಮರು ।
[1] ಳ್ಕಾರ್ಮುಕಮಂಬುದಂ ತಿಳಿಪದಂಗಿಗೆಯಕ್ಕನೆ ಕೋಲ ಮಿಂಚು ತಾಂ
ಕಾರ್ಮೊಗಮೆಂಬಿನಂ ಸತಿಗೆ ದೀವರ ಬೇಂಟೆಯ ಮುಖ್ಯನಾಯಕಂ ॥ ೩೭

ವ॥ ಒಂದು ಕೆಯ್ಯೊಳಿರ್ದಲಗಿನ ಕೋಲುಮಂ ಕಟ್ಟಿದಲಗುಮಂ ದೂರಾಂತರದೊಳ್ ಕೀಳ್ವಾಳನ ಕೆಯ್ಗೆ ನೀಡುತ್ತುಮೆಯ್ದೆವಂದು ಪೊಡೆವಟ್ಟು ನಿಂದು

ಕತ್ತುರಿಮಿಗಮುಂ ಪಂದಿಯ
ಮುತ್ತಂ [2] ಪೊಂಬುಲಿಯ ತೊವಲನಾನೆಯ ಕೊಂಬಂ ।
ಕುತ್ತಟಿಸದಡಸಿ ಪಿಡಿದುಗಿ
ದೆತ್ತಿದುವಂ [3] ಪತಿಗೆ ಕಾಣ್ಕೆಗೊಟ್ಟಂತೆಂದಂ ॥ ೩೮

ಪುಲ್ಮುಱಿದುದು ಬೆಳಸುಡುಗಿ ಬ
ಯಲ್ಮಸಗಿದುದಡವಿ ಕರಿಕುವರಿದುದು ಮೇಪಿಂ ।
ಪುಲ್ಮಿಗಮುಂ ಬೆಳ್ಮಿಗಮುಂ
ಪಲ್ಮಿಗಮುಂ ತಣಿದುವೆಯ್ದೆ ಕಾಪಿನ ಪೊಲದೊಳ್ ॥ ೩೯

---

1 ಚ. ತ್ಕಾ. 2 ಕ. ಮುತ್ತುಂ. 3 ಕ. ಪೊಡಗೆ.

ವ॥ ದೇವ ಮತ್ತಮಾಂಸಮುದುಟಿಯೆ ಪಡಹದ ಪಿಳುಕುಟಿಯೆ ಕೊಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚಿ ಸೊವಡಿಂಗೆ ಸೋಲ್ತು ಕೂಡದೆ ಕವಲ್ದು ಮೇದು ತಣಿದು ಕೊಟಕಿಟ್ಟಾಡುವ ಮೃಗಂಗಳೊಳಿಂದು ಪತ್ತಿಸಿದ ಹರಿಣನ ಗೋರಿಯ ಹರ್ಷದ ಹರವಸದ ಭಾವ ಪ್ರಪಂಚಮಂ ಭಾವಕರ ಬಲ್ಲಹನೆ ಬಂದು ನೋಡಲ್ವೇಟ್ಕುಮೆನೆ ವಸುಷೇಣ ವಸುಮತೀ ಪತಿ ಸಖನ ಮುಖಮಂ ನೋಡಲೊಡಮಾತಂ ನೋಡಲಕ್ಕುಂ ಬಿಜ ಯಂಗೆಯ್ಯಿಮೆಂದಲ್ಲಿಂ ತಳರ್ದು

ಪರಿಮಿತವಾಜಿವಾರಣಪದಾತಿವರೂಥಕದಂಬಕಾಮಿನೀ
ಪರಿಚಿತರಾಜಪುತ್ರನಿಚಯಂ ಧರಣೀಪತಿ ಚಂಡಶಾಸನಂ ।
ಬೆರಸು ವನಾಂತದೊಳ್ತೆರೆಯ ತೋಪಿನ [1] ಸೋಹಿನ ನೀರಬೆಂಟೆಯು
ರ್ವರೆಗಳನೀಕ್ಷಿಸುತ್ತೆ ಬರೆ ಮುಂತಣ ಚೂತವನಾಂತರಾಳದೊಳ್ ॥ ೪೦

ಬಿರಿದೆರ್ದೆ ಬಿಟ್ಟ ಬಾಯಲರ್ವ ನಾಸಿಕೆ ಪತ್ತಿದ ಗೋಣು ಸುತ್ತಿ ಕ
ವ್ವರಿಸುವ ದಿಟ್ಟಿ ಕೆತ್ತುವೊಡಲೆತ್ತಿದ ಕಂಠಮೆಬಲ್ವ ಕರ್ಣಮು ।
ಬ್ಬರಿಸುವ ಮೆಯ್ನವಿರ್ಪನಿವ ಮುಂಬದನೊಪ್ಪಿರೆ ದೀವದೊಳ್ಮರ
ಲ್ದಿರಲೆಯ ಭಾವಮಚ್ಚರಿಯನಚ್ಚಿಗೊಡರ್ಚಿದುದಾನೃಪೇಂದ್ರನಾ ॥ ೪೧

ವ॥ ಅದಂ ಕಂಡು ಚಂಡಶಾಸನನಂತರ್ಗತದೊಳಿಂತೆಂದಂ

ಹರಿಣೀಲೋಚನೆ ದೀವದಾಹರಿಣನೇಂ ಪೆರ್ಗಾಡಿದೀ ಬೀಡು ಬಿ
ಣ್ಬರಿಗಳ್ನೀಣ್ಬರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮು ।
ದ್ವಿರಹಾವಸ್ಥಿತಿ ಗೋರಿಗೋರಗೆಯೆನಿಪ್ಪಂತಾದುದೆಂತಾಗಿಯುಂ
ನೆರೆಯಲ್ತೀರದು ಗೋರಿ [2] ಸಾಯುದೆನವೇಡೀನೋವೆ ಸಾವಲ್ಲವೇ ॥ ೪೨

ವ॥ ಆವಿನೋದಮಂ ನೀಡುಂ ನೋಡಿ ಪೊಗಟ್ದು ಪೋಪುದುಮರಸನ ರಸಿವೆರಸು ಬೋನಮನೀನಂದನವನಕ್ಕೆ ಒರವೇಪೆಂದು ಸೂಪಾಯ್ತರನರಮ ನೆಗೆ ಕಟಿಪಿ ..ಸುವ ಪೊಳೆವ ಪುಲ್ಲೆಗಳ ಬಟಿವಿಡಿದು ಕಾಪುಗಾಡಿನೊಳ್ ಸೋಹಿನ ಬೇಂಟೆಯ ಬಿನದದಿನೀರ್ವರ ರಥಮುಂ ಬೇಱುವೇಱಾದಲ್ಲಿ ಚಂಡಶಾಸನಂ ವಸು ಷೇಣನರಸಿ ಬರ್ಪ ಬಟ್ಟೆಯತ್ತಲೆ ಸಾರ್ದುಕೊಂಡಿರ್ಪನಂ ಪರಿಮಿತಾಂಗರ

1 ಕ. ಜ. ಸೋಪ್ಪಿನ. 2 ಛ. ಫಾ.

ಕ್ಷಕಪರೀತೆಯುಂ ಪರಿಧಾವತ್ಕತಿಪಯಚೇಟಿಕಾಪುರೋಭಾಗೆಯುಂ ದೋಲಾದಂ ಡಿಕೋಭಯಭಾಗಸಂಭಾಷಿತಸಹಚರೀಯುಗಳೆಯುಮಾಗಿ ನಿಜವಲ್ಲಭನಟ್ಟಿದ ಬಟಿಗೆಬರುತ್ತುಮಿರ್ದ ಸುನಂದಾದೇವಿಯುಂ ಕಂಡು

ಕಡೆಗಣ್ಗಳ್ಪರಿದೆಯ್ದಿ ಮತ್ತೆ ಮನಮುಂಗೋಪಾಂಗಸಂಗಕ್ಕೆ ದಾ
ಟಿಡೆ ಕಾಯ್ದುಳ್ಳೆರ್ದೆಗೂಡುವಾಯೆ ಪಿರಿದೊಂದೌತ್ಕಂಠ್ಯದಿಂ ಕಂಠದೊ ।
ಳ್ಮಿಡುಕುಣ್ಮುತ್ತಿರೆ ಮೇಲೆವಾಯ್ದು ಭರದಿಂದಂ ನಲ್ಲಳಾಂದೋಳದಿಂ
ಕಡುಕೆಯ್ಯಂ ತೆಗೆದಿಟ್ಟುಕೊಂಡು ರಥದೊಳ್ಬಂದಂ ಮನೋವೇಗದಿಂ ॥ ೪೩

ವ॥ ಎಂದು ಪೇೞ್ವ ಕಥಾಂತರದೊಳಾತಂಗಾತಳೋದರಿಯೊಡಂಬಟ್ಟಂ ತಳೆಗೆತ್ತು ಚಿತ್ರಲತೆಯಿಂತೆಂದಳ್

2816

ಸುದತಿಯರೆಂಬ ಪಾಪಿಗಳು ಮಾಡದುದೇನೆನೆ ಮತ್ತ ತಂಗಿಯುಂ
ಮದನಪತಾಕೆಯೆಂದಳವಳಿಂದೆ ಪತಿವ್ರತೆಯಿಲ್ಲ ನೋಡ ಲೋ ।
ಕದೊಳದನಾಡದಿರ್ಕರುಳ ಕತ್ತರಿ ನಂಟರ ಮಾರಿ ತುತ್ತುಮಿಂ
ಚಿದೊಡೊಡನುಂಡು ಮತ್ತೆ ತೊಡೆ ಮಿಂಚಿದೊಡಾಖಳನಿಂತು ಮಾಡಿದಂ ॥ ೪೪

ವ॥ ಅಂತು ಪಿಡಿದೊಯ್ವಾಗಳುರಗಂ ಪಿಡಿದಂತೆ ಬೆದಱಿ ಪಾವು ಪಿಡಿದಂ ತಿರೊದಱಿ ಕಡುಜರ ಪತ್ತಿದಂತು ಕಳವಳಿಸಿ ಠಕ್ಕು ಪತ್ತಿದಂತೆ ಮಱಿಗೆಟ್ಟು ಸಿಡಿಲ್ ಪೊಡೆದಂತೆ ಹಮ್ಮದಂಬೋಗಿ ಸುನಂದೆಯಾಗಿಯುಮಸು ನಂದೆ ಕಿಱಿದಾನುಂ ಬೇಗದಿಂ ಬಟಿಕ್ಕೆ ಕಾಮುಕಕಾಂಡಖಂಡಿತಹೃದಯಂ ಚಂಡಶಾಸನಂ ವಿಶ್ವಾಸ ಘಾತಕಂ ಕಾತರತೆಯಿಂ ತನ್ನಂ ಪಿಡಿದುದನಱಿದು

ಇನನಂ ವಂಚಿಸಿ ಚಂಡಶಾಸನನವಂ ಕಳ್ದೊಯ್ದಪಂ ನಾಥನಂ
ಗನೆಯಿಂದೆನ್ನ ಸುನಂದೆಯಂ ಸುಭಟರಣ್ಮಿಂ ವೀರರಡ್ಡೈಸಿಮೆ ।
ನ್ನಿನೆಯಂಗೆಯ್ದಿಸಿಮೂರನಾಡಜನಮಿಾಪೆಣ್ಬುಯ್ಯಲಂ ಹಾ ಸುಷೇ
ಣನೃಪ ಹಾ ನೃಪ ನೀಱನೆಂದಬಲೆ ಬಾಯ್ವಿಟ್ಟಟ್ಟು ಹುಯ್ಯಲ್ಚಿದಳ್ ॥ ೪೫

ಪರವೆಣ್ಗಾಟಿಸಿ ಕಳ್ದ ಕಾತರನನಾರುಂ ಕಾಣರಾರುಂ ಕನ
ಲ್ದರಿದಿಕ್ಕರ್ಧರೆ ನುಂಗದೇಂ ನೋಣೆಯರೀದಿಗ್ದೇವಿಯರ್ತಿನ್ನರೇ ।
ಗಿರಿಗಳ್ಬಿಂದೆನನಾಥೆಯಾದೆನೆನಗಿನ್ನಾರಾಸೆಯಾರ್ಕಾವರಾ
ರ್ಶರಣೆಂದಾಕಳಕಂಠನಾದ ಬಸಿಱಂ ಬಾರೇೞ್ವಿನಂ ಮೋದಿದಳ್ ॥ ೪೬

ಮುನಿಸುಂಟಾದೊಡೆ ಮುಟ್ಟಿ ಮೂದಲಿಸಿ ಬಲ್ಪಿಂ ನಿನ್ನ ಬಾಳಾತನಾ
ತನಬಾಳ್ನಿನ್ನ ಕಪಾಲದೊಳ್ಮುಱಿದು ಮುಂತೆಟ್ಟುರ್ಪುದಿನ್ನೊಪ್ಪುವಾ।
ಳ್ತನಮುಂ ಗಂಡರ ಪಿಂದೆ ಕಳ್ವುದರಿದೇ ಸ್ತ್ರೀಬಾಲೆಯಂ ಬೂತೆ ಪಾ
ಟ್ಮನೆಯೊಳ್ ನಾಯ್ ಘೃತಭಾಂಡಮಂ ತೆಗೆವವೊಲ್ಕಳ್ದೊಯ್ವುದಾಳ್ಪಾಟಿಯೇ ॥

ಮನಮಿತ್ತು ಮಾತನಾಡಿದ
ಳನುವಿಸಿದಪಳೊಲ್ದಳೆಂದೊಡಂ ಕೇಳ ಪರಾಂ ।
ಗನೆಗೆ..ವಯರ್ಗಂಡ
ರ್ಮನವಱಿಯದೆ ಎಳೆಯಮನಕೆ ಸವಱುವೆ ಪೊಲೆಯಾ ॥ ೪೮

ವ॥ ಎಂದನೇಕಪ್ರಕಾರಪ್ರಳಾಪಾಕ್ರಂದನಂ ಸ್ಯಂದನವೇಗದಿಂ ದೂರಂ ಸಾರಪ್ಪ ಸಾರಂ ದೂರವಾಗಿ ಪೋತಪ್ಪಾಗಳಳಿಯೆ ಸುರಮ್ಯವಿಷಯದ ಕಡೆಯ ಕಾಪಿಂಗೆ ವಸುಷೇಣನಿರಿಸಿದ ಪೆಸರ ಸಾವಂತಂ ಸಿಂಹಚೂಡಂ ತನ್ನ ಪೊಟಲ ಪೊಱವೊಟಲ ನಂದನೋಪಾಂತದ ಗರುಡಿಯೊಳಗೆ ಪಲಕೆಲಂಬರ್ ವಲಗೆವಿನ್ನಣಂಗಳೊಡನೆ ಕಾಮನ ಪರ್ವತದಂತೆ ಮಾರಚಿತ್ರಭಿತ್ತಿಯೊಳ್ ಪಿಡಿಯುತ್ತುಮಿರ್ದ ಕಡುಗಲಿ ಕೇಳ್ದು ನರತುರಗಬಳದ ನೆರಮನೊಲ್ಲದೆ ಸೆರಗಿನೊಳಲ್ಲದೆ ಬೆರಗಿನೊಳ ಸಲ್ಲದೆ ಕೆಯ್ಯ ಪಲಗೆಯೊಳಂ ಕಟ್ಟಿದ ಕಠಾರದೊಳಂ ಪಿಡಿದ ಕೂರಸಿಯೊಳಮೆಯ್ದಿಸಿ ಪರಿದು ಹರಿಣಿಯಂ ಪಿಡಿದುಯ್ವ ತರಕ್ಷುವಿನಂತೆ ತರುಣಿಯಂ ಪಿಡಿದುಯ್ವ ಚಂಡಶಾಸನನಂ ದೂರದೊಳ್ಕಂಡು ಗಜಱಿ ಘರ್ಜಿಸಿ

ಇದಿರಾಗಿತ್ತಿತ್ತಣ್ಮಣ್ಮೆಟಿಯಿಟಿ ರಥಮಂ ಕೈದುಗೊಳ್ಕೈದುಗೊಳ್ಪೋ
ಗದಿರೆನ್ನಂ ಕಂಡು ಬೆನ್ನಂ ಕುಡುವರೆ ಸುಭಟಸಿಂಹಚೂಡಂಗೆ ಮಾಱೊ ।
ಡ್ಡಿದ ವೀರರ್ಮತ್ತೆ ಜೀವಂಬೆರಸುಟಿದವರಿಲ್ಲೆಂದು ಮುಟ್ಟಿರ್ದ ಲೇಸ
ಕ್ಕಿದೆ ಮೇಲ್ಬಿರ್ದೆನ್ನ ಬಾಹಾಪರಿಘದ ಬಲೆಯೊಳ್ಸತ್ತೆಯಿನ್ನೆತ್ತ ಪೋಪೈ ॥ ೪೯

ವ॥ ಎಂದು ಮುಟ್ಟಿ ಮೂದಲಿಸಿ ಕಟ್ಟಿದಿರ್ಗೆವಂದು ಮೆಟ್ಟಿ ತಱುಂಬಿದ ಸಿಂಹಚೂಡನಂ ಸೂತದ್ವಿತಯನಾಗಿ ಪೋಗುತ್ತುಂ ಕಂಡು ತೇರಂ ನಿಲಿಸಿ ಸಾರಥಿಯಂ ವಾರಿಜವದನೆಗೆ ಕಾಪುವೇಟ್ಟು ಕಿಟ್ಟ ಬಾಳೊಳಮುತ್ತಪರದೊಳಮುವನೀತಳಕ್ಕೆ ಲಂಘಿಸಿ ಚಂಡಶಾಸನನಿಂತೆಂದಂ

[1] ವಾನರನೇಂ ಸೆಳೆವುದೆ ಪೇ
ರಾನೆಯ ಕೈಯ್ಯಿಂ ಪಿಡಿದ ಕರ್ಬನಾಂ ಪಿಡಿದವಳೇಂ[2] ।
ನೀನೆ ಬಿಡಿಸುವೆಯೆ ಸಾಯದೆ
ಪೋ ನಿನ್ನಂ ನಿನ್ನ ಪತಿಗೆ ಪುಯ್ಯಲ್ಗಳದೇಂ ॥ ೫೦

ವ॥ ಎಂದ ನುಡಿಗೆ ಕಳ[3] ಕಳಿಸಿ ನಕ್ಕು ಸಿಂಹಚೂಡನಿಂತೆಂದಂ

ವಸುಷೇಣನೃಪನ ಮುಂದ
ಣ್ಗೆ ಸುನಂದಾದೇವಿವೆರಸು ನಿನ್ನಯ ನೆತ್ತ ।
ರ್ಬಸಿವ ತಲೆ ಕಾಣ್ಕೆಯಾಗಿರೆ
ಬಿಸುಟಲ್ಲದೆ ಸಿಂಹಚೂಡನೇಂ ಪೋದಪನೇ ॥ ೫೧

ವ॥ ಪಾದರದೊಳ್ಪುಟ್ಟಿ ಕಳವಿನೊಳ್ಸತ್ತ ತಿಚಾರದರಸುತನಂ[4] ವ್ಯಭಿಚಾರದೊಳ್ನೀಗಿದೆಯದೆಂತೆನೆ

ರಸೆ ಪೊಱುವುದೆ ಪರವೆಣ್ಗಾ
ಟಿಸಿದೊಡೆ ಕಳ್ದೊಯ್ದು ಕೂಡಿ ತಂದೈ ಪುಲ್ಮಾ ।
ನಸನಾದ ಚಂಡಶಾಸನ
ವೆಸರಂ ಚಂಡಾಲ ನೀರೊಳಿಂತರ್ದುವರೇ ॥ ೫೨

ವ॥ ಎನಲೊಡಂ ಚಂಡಶಾಸನನಿಂತೆಂದಂ

ನೀನೆನಗೆ ಬುದ್ಧಿವೇಟಲ
ದೇನಪ್ಪೈ ಬಾಳ ಬಾಯೆ ಪಲ್ಗಡಿಸಿಕೊಳ ।
ಲ್ನೀನಾರ್ದೆ ಬರ್ದುಂಕಿದ ಬಟಿ
ಕೇನಾದೊಡಮೆನ್ನ ಮುನ್ನವಾಯತಮಾಗಾ ॥ ೫೩

ವ॥ ಎಂದೊರ್ವರೊರ್ವರಂ ಮೂದಲಿಸಿ ನುಡಿಯುತ್ತುಮಿರ್ವರುಂ ಭೂಮಾನದಳವಿಯೊಳ್ ಪರಿಯಲನುಗೆಯ್ವಾಗಳ್

1 ಕ. ವನನರ. 2 ಕ. ಗ. ಳಿಂ, 3 ಗ. ವಳಿಸಿ. 4 ಗ. ಸಂತ.

ಬೆಳೆದಡವಿಯೆ ಕಳನಾದುದು
ನಳಿನದಳೇಕ್ಷಣೆಯು ಚಿತ್ತಮರಸಾಯ್ತಾ ।
ಶಾಳಲನೆಯರೆ ನೋೞ್ಪರಾದರ್
ಬಳಯುತರರಸಂಕವಾದರಂತಾಕ್ಷಣದೊಳ್ ॥ ೫೪

ವ॥ ಆಗಳೊಡವಂದು ನೋೞ್ಪ ನೋಟಕರ್ ತಮ್ಮೊಳಿಂತೆಂದರ್

ಇಳೆಯೊಳಗೆ ಸಿಂಹಚೂಡನೆ
ಫಳಕಾರಂ ಚಂಡಶಾಸನಂ ಬಗೆವೊಡೆ ಭೂ ।
ತಳದೊಳ್ಕೃತಘ್ನನಿವರತಿ
ಬಳರಿರ್ವರ ಸೋಲಗೆಲ್ಲವರಸನ ಪುಣ್ಯಂ ॥ ೫೫

ವ॥ ಇತ್ತ ಸುನಂದೆ ನಿಜಾಂತರ್ಗತದೊಳಿಂತೆಂದಳ್

ತಲೆಗಾಯಿಾಭಟನಂ ಪೊಣರ್ಚೆ ಪೊಡೆದಿಕ್ಕೀದ್ರೋಹನಂ ನೇಸಱೇ
ನೆಲನೆ ವ್ಯೋಮಮೆ ವಾಯುದೇವ ಸೆಱೆಯಿಂದಂ ತಪ್ಪಿದಂದೆನ್ನನಾಂ ।
ಬಲಿಗೆಯ್ವೆಂ ನಿಮಗೆಂದು ಮೈಕೊರಗಿ ಸುಯ್ಕೈಗಣ್ಮಿ ಕಣ್ಗೆಟ್ಟು ಕೋ
ಟಲೆಗೊಂಡಳ್ಕೆರ್ದೆಡಕ್ಕೆವಾಯ್ದು ಸತಿ ನಿಂದೌತ್ಸುಕ್ಯಮಂ ತಾಳ್ದಿದಳ್ ॥ ೫೬

ವ॥ ತತ್ಸಮಯದೊಳ್ ಸಿಂಹಚೂಡಂ

ಅಂಜದೆ ನಿಂದವಧರಿಸೆಲೆ
ಕಂಜದಳಾಯತವಿಲೋಲಲೋಚನೆ ಪಗೆಯಂ ।
ಮುಂ ಜವನೆಡೆಗೊಪ್ಪಿಸಿ ಬೞಿ
ಯಂ ಜನಪತಿಯೆಡೆಗೆ ನಿನ್ನನೊಯ್ದೊಪ್ಪಿಸುವೆಂ ॥ ೫೭

ವ॥ ಎಂದವಷ್ಟಂಭಮೆಸೆಯೆ

ತಾಳಲಯಂಗಳೊಳ್ಕಣಿದು ಲಂಘಿಸಿ ಕೂರಿಸಿ ಮಿಂಚಿನಂತೆ ಸಂ
ಚಾಳಿಸಿ ಭಾವಭಂಜನೆಗೆ ಭಂಜಿಸಿ ರೂಪಳವಟ್ಟ ರೇಖೆಯು ।
ಲ್ಲಾಳಿಸೆ ನಿಂದು ಕೀಲಿಸಿದೊಡುರ್ವರೆಯೊ ಗರ್ಗ್ಗಡಿಸಿತ್ತು ಸಾಗರಂ
ವೇಳೆಯಿ [1] ನುರ್ಕಿ ಸೂಸಿದುದು ತೊಟ್ಟುಕಟಲ್ದವು ತಾರಕಾಳಿಗಳ್ ॥ ೫೮

---

1 ಕ. ಗ. ಯಂ.

ವಹಿಲತನಂ ಪದಗತಿಯಿಂ
ಬಹುವಿಕೆ ಕೈಮಾಟ್ಪನವಣಿಯಿಂ ಸುಚರಮಿವಂ ।
ಬಹುಭಂಜನೆಯೊಡ್ಡಣದಿಂ
ದಹಮಹಮಿಕೆ ಮಿಕ್ಕುಮೆಱೆದುವಿರ್ವರ ಮೆಯ್ಯೊಳ್ ॥ ೫೯

ಪರಿದುಬ್ಬಾರಿಸಿ ಪೊಯ್ದೊಡಾಂತ ಕರವಾಳ್ಬಾಳೊಳ್ಪಗಂಡೆಟ್ಟು ಗ
ಗ್ಘರಿಲೆಂದೆತ್ತುವ ಸುತ್ತುವತ್ತಳಿಪು ಸೂಳೊಳ್ಸೀಳ್ದು ಪೊಟ್ಟಿರ್ದುಮಿ ।
ರ್ವರ ಕೆಯ್ಯಂ ಬಱಿಮುಷ್ಟಿವೋಹರದೆ ತಳ್ತೆಚ್ಚಾಡಿಸುತ್ತಿರ್ದುವಂ
ತಿರೆ ಕೀಳ್ವಾಳವರಿರ್ವರುಂ ನಿಲಿಸಿ ಕೊಟ್ಟವರ್ಪತ್ತೆ ಕೂರ್ವಾಳ್ಗಳಂ ॥ ೬೦

ಘೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚದ ಚಂಡಶಾಸನಂ
ಚಾರಣದಾಸೆಯಿಂ ನುಸುಳ್ದು ಮುಜ್ಝುಟದೊಳ್ಮಗುಳ್ದಿಕ್ಕಿ ವಟ್ಟಿ ಸ್ಕೈ ।
ಪಾರಿಸೆ ಕಂಡ ಭೂರಣದೆ ರೂಪಿಸಿದಂ ಪೊಯ್ಯೆ ಕಾಳವಟ್ಟದಿಂ
ಪೋರಗದಿಂದೆ ಪೊಯ್ದನೆರಡುಂ ಸರಿವೋದುವು ಲಾಗುಬೇಗದೊಳ್ ॥ ೬೧

ವ॥ ಅನಂತರಂ

ಬಲದೊಳ್ಪತ್ತಿದ ಮುಂಡೆ ಚಮ್ಮಟಿಗೆ ಕೈವೀಣಂ ಬೆಡಂಗಾಗೆ ಮ್ಯೆ
ಗಲಿ ಪೊಕ್ಕೆತ್ತಿದೊಡೊಡ್ಡಿದೊಡ್ಡಣದ ಕೈಗೊಂಬಾಳದಿಂ ಪೋದ ಮೆ ।
ಯ್ವಲಗಂಬೆತ್ತಿರೆ ಬಾಹು ಪೋರಗದೆ ಪೊಯ್ದಂ ಭೂಪ [1] ನಾವೀರನಂ
ತಲೆಯುಂ ಮುಂಡಮುಮೊರ್ಮೆ ದಲ್ಪಲಗೆಯೊಳ್ಬೈತಿಟ್ಟವೊಳ್ಬೀಟ್ವಿನಂ ॥ ೬೨

ವ॥ ಅಂತು ಪೊಯ್ದು ರಥಕ್ಕೆ ಪಾಯ್ದು ಸಾರಥಿಯ ಚೋದನಾವೇಗದಿಂ ಗಾಳಿಗೆ ಗಱಿಮೂಡಿದಂತೆ ಮನಕ್ಕೆ ಮಡವೊಗೆದಂತೆ ಮುಹೂರ್ತಮಾತ್ರದಿನೆಯ್ದಿ ತನ್ನ ದುರ್ಗಮಂ ಪೊಕ್ಕನನ್ನೆಗಮಿತ್ತಲ್

ತರವೇಲ್ದಟ್ಟಿದ ಬೋನಮಾಗಳೆ ರಸಾಳೋದ್ಯಾನಮಂ ಪೊಕ್ಕುದೇ
ಕರಸಂ ಬಾರನೊ ಚಂಡಶಾಸನನದೆತ್ತಲ್ಪೋದನೋ ದೇವಿಯುಂ ।
ಬರುತುಂ ತಳ್ವಿದರಂಗರಕ್ಕರಿದಿರ್ವೋಗಿನ್ನೀಮೆನುತ್ತುಂ ಮಹ
ತ್ತರರಿರ್ಪನ್ನೆಗಮೆಯ್ದೆ ವಂದನವನೀನಾಥಂ ತದುದ್ಯಾನಮಂ ॥ ೬೩

---

1 ಗ. ಭೂಪಂಪೊಯ್ದನಾ.

ವ॥ ಬಂದು ವರೂಥದಿಂದಿೞಿದು ಭೋಜನಶಾಳಿನಿಕಾಯಮಾನಪ್ರತಾನ ಸಂಫುಲ್ಲಮಲ್ಲಿಕಾಮಂಡಪದ ಮುಂದೆ ನಿಂದು

ಬಂದಳೆ ದೇವಿ ಪಜ್ಜೆಗೆಡೆಮಾಡಿಸಿದಪ್ಪಳೆ ಚಂಡಶಾಸನಂ
ಬಂದನೆ ಯೆಂದು ಮಂದಿರಮಹತ್ತರರಂ ಬೆಸಗೊಳ್ವಿನಂ ನೃಪಂ ॥
ಬಂದುದು ಚೇಟಿಕಾಸಹಚರೀಜನಮುಂ ಶರಕೇಶಪಾಶಮಾ
ಕ್ರಂದಿತವಕ್ತ್ರಮಾಹತಕೃಶೋದರಮಾಕಳಿತಾಶ್ರುಲೋಚನಂ ॥ ೬೪

ವ॥ ಅಂತು ಶೋಕರಸಮೆ ರೂಪುಗೊಂಡಂತೆ ಬರ್ಪ ನಿಜಾಗ್ರಮಹಿಷೀ ಪರಿಜನಮಂ ದೂರದೊಳ್ಕಂಡಿದೇನೆಂದತಿಚಕಿತಚಿತ್ತನುಂ ವಿಸ್ಫುರಿತವಿಲೋಚನನುಮುದ್ಬದ್ಧಭ್ರೂಲತಾಮೂಲನುಮುತ್ತಾನಿತಕರಪತಾಕನುಮಾಗುತ್ತುಮಿರೆಯಿರೆ

ಹಾ ಲಲಿತಾಂಗಿ ಹಾ ಕುಸುಮಕೋಮಳೆ ಹಾ ಕಳಹಂಸಯಾನೆ ಹಾ
ನೀಳಸರೋಜಲೋಚನೆ ಸುನಂದೆ ನೃಪೇಂದ್ರನ ರಾಜ್ಯಲಕ್ಷ್ಮಿ ಭೂ ।
ಪಾಲನ ಭಾಗ್ಯಲಕ್ಷ್ಮಿ ವಸುಷೇಣನ ಮಂಗಳಲಕ್ಷ್ಮಿ ರಾಜಚಾಂ
ಡಾಲನ ಬಾಹುರಾಹುಗಿಳನಂ ನಿನಗೆತ್ತಣಿನೆತ್ತ ಬಂದುದೋ ॥ ೬೫

ವ॥ ಎಂದು ಬಾಯಟಿಡುತ್ತುಂ ಬಂದು ಮುನ್ನಡಿಯೊಳ್ಕೆಡೆದುಂ ಪುಡಿಯೊಳ್ಪೊರಳ್ವ ವಿಳಾಸಿನೀಸಮೂಹದೊಳಗೆ ರಾರಾಜಿತರತ್ನಪಾದುಕಗ್ರಾಹಿಣಿಯಪ್ಪ ಬಾಳಕಿಯುದೊರ್ವಳ್ ದೇವರಟ್ಟಿದ ಬೞಿಗೆ ದೇವಿಯುರ್ಬರುತ್ತುಮಿರೆ ಚಂಡಶಾಸನಂ ಕಂಡೆಡೆದು ಪಿಡಿದು ಕೈಸೆಱೆವಿಡಿದು ಬಂದಿಕಾಱನಂತೆ ಕೊಂಡು ಪೋದಂ

ಪಡಲಿಡೆ ಪೊಯ್ದಂ ದೇವಿಯ
ಗೆಡೆಗುಡದಡ್ಡೈಸಿದಂಗರಕ್ಕಸರನಮ್ಮಂ ।
ಪಿಡಿದುಯ್ವಂ ಕಿಱಿದೆಡೆಯಂ
ನಡೆಗೆಟ್ಟು ಬೞಿಕ್ಕೆ ಬಿಟ್ಟನಾ ನಿಸ್ತ್ರಿಂಶಂ ॥ ೬೬

ಎನೆ ಕೇಳ್ದುಕ್ಕಿದ ಕೋಪವಹ್ನಿಗೆ ವಿಯೋಗೋದ್ರೇಕಶೋಕಪ್ರಭಂ
ಜನಸಂತಾಪಮನುರ್ಕೆಯಂ ಪಡೆಯೆ ಕಿಂಕರ್ತವ್ಯತಾಮೂಢನೊಂ ।

ದಿನಿಸಂ ಜೀವಿತಶಂಕೆ ಭೋಂಕನಳಿದಾಳ್ದಾಡುತ್ತುಮಿರ್ದನ್ಂತ್ಮನಾ
ಘನನಾಪ್ತರ್ನಚಿವರ್ನಿಜಾಂಶುಕತಿರೋಧಾನಾವಿಲಂ ಮಾಡಿದರ್ ॥ ೬೭

ಮಳಯರುಹದ ಕರ್ಪೂರದ
ಪಳಿಕಿನ ಪನಿನೀರ ಕದಲಿದಳದಿಱಿಸಿಲ ತ ।
ಣ್ಗಳಸದ ತಿಳಿನೀರ್ಗಳ ಶೀ
ತಳತೆಯಿನವನಿಪನನಾಪ್ತರುಜ್ಜೀವಿಸಿದರ್ ॥ ೬೮

ವ॥ ಅಂತು ಪರಾಮರ್ಶಿತಹೃದಯನಾದ ನೃಪಾಳನಂ ನರ್ಮಸಚಿವರಿಂ
ತೆಂದರ್

ಮದವದ್ವೈರಿಕುಳಂ ಭವದ್ಭುಜವಿಭಾಸ್ವತ್ಖಡ್ಗಧಾರಾನದೀ
ನದದೊಳ್ಮುನ್ನ ಮುೞುಂಕದುದ್ಧತರದುರ್ಗಂ ನಿನ್ನ ಕೋಪಪ್ರತಾ ।
ಪದವಜ್ವಾಳೆಗಳಿಂ ಮುೞುಂಕದೆ ವೃಥಾ ಶೋಕಾಬ್ಧಿಯೊಳ್ಧೀರರಂ
ದದಿ ನೀನಿಂತು ಮುೞುಂಕಲಪ್ಪುದೆ ಧರಿತ್ರೀಪಾಲ ಚೂಡಾಮಣೀ ॥ ೬೯

ವ॥ ಆ ಪ್ರತಿಬೋಧನವಚನಂ ವಲ್ಲಭವಿಯೋಗವೈಕ್ಲಬ್ಯವಲ್ಮೀಕಸುಪ್ತ
ಕೋಪವ್ಯಾಳಪ್ರತ್ಯುತ್ಥಾಪನದಂಡಮಾಗೆ ಧರಾಧಿನಾಥನಿಂತೆಂದಂ

ಭಂಡಣದೊಳಟಿದು ಪೆಂಡಿ
ರ್ಭಂಡಾರಂ ಪೋದೊಡದು ವಿಧಾತೃವಶಂ ಬ ।
ಲ್ಗಂಡಂಗೆ ಸಂತಸೊಕಮಾ
ಪೆಂಡತಿ ಕೋಳ್ಪಟ್ಟು ಮಗುೞೆ [1] ಪುಗುವೆನೆ ಪೊೞಲಂ ॥ ೭೦

ಪಪ್ರಾಣಪ್ರಿಯೆಯಿಲ್ಲದೆ ನಿಃ
ಪ್ರಾಣಮದೆಂತುಣ್ಬುದೀಗಳೀಯೊಡಲಹಿತ ।
ಪ್ರಾಣಾನಿಲನೆಂದೆನ್ನ ಕೃ
ಪಾಣಾಹಿಯನೂಡಿ ಬೞಿಕಮಾನುಂಡಪ್ಪೆಂ ॥ ೭೧

1 ಜ. ಪುಗದೆ.

ವ॥ ಎಂದೆತ್ತಿ ನಡೆಯಲುತ್ತ್ರವಳಿಸಿದ ಸಮಯದೊಳ್

ನೆರೆದಾಪ್ತರ್ಸಚಿವರ್ಚಮೂಪತಿಗಳಂದಾಳೋಚನಕ್ಕೆಂದು ಬಂ
ದಿರೆ ಕಂಡಿಂಗಿತಮಂ ನೃಪಂ ನುಡಿದನಿನ್ನೇವಾತೊ ಕಿರ್ಚೆದೊರ್ಡಂ ।
ಗರನಾದಂ ಗಡ ಮಾರಿ ಹೊಕ್ಕ ಮನೆಯೊಳ್ಪರ್ವರ್ಗ ಗಡಾಳೋಚಮೇಂ
ಬೆರಗೇಂ ಬೆಂಬಲಮೇಂ ಸ್ವರಾದಿಬಲಮೇಂ ನೀಂ ಪೇೞ್ವುದೇಂ ಕೇಳ್ವುದೇಂ ॥೭

ವ॥ ಎಂದು ಮುಂದನಾರಯ್ಯದೆ ಪಿಂದಂ[1] ಪಾರದೆ ಮುಂದೆ ನಿಂ
ನಿಜಸ್ಯಂದನಮನೇಱಿ ಸುತ್ತುರೆ ಮಸಗಿಟ್ಟುರಿಗೊಂಡನಾವ್ಯತಿಕರದೊಳ್

ದಟದುಟಮಾದುದಾಗಳಸಿಯೇಱಿಸಿದೇಱಿದು ಬಂದಿ ಬಂದಿದಂ
ಡುಟಮೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತ ।
ಲ್ಲಟಿಸಿ ತಡಂ ತಡಂಬರಿಯೆ ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ
ತೊಟಸಿದ ಪಾಂಗೆ ಕಿಟ್ತಲೆ ಕಿಟಂದಲೆಯಾದುದು ಕೂಡೆ ಪಟ್ಟಣಂ ॥ ೭

ವ॥ ಆ ಕೋಳಾಹಳಕ್ಕೆ

ರಣರಭಸೋತ್ಕಟಂ ಧರೆ ಪೆಡಮಂ ಮಗುಟ್ದಂತೆ ಚತುಸ್ಸಮುದ್ರಮು
ಲ್ಬಣವಿಕಟೋತ್ಕಟಂ ಮಸಗಿ ಮೇಲ್ಗವಿದಂತೆ ದಿಶಾಚತುಷ್ಟಯಂ ।
ಪ್ರಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣಿದಾನೆ ಪ
ಲ್ಲಣಿಸಿದ ವಾಜಿ ಪೂಡಿದ ರಥಂ ಕವಚಂಬಿಗಿದಾಪ್ತಸೈನಿಕಂ ॥ ೭

ವ॥ ಅಂತು ಬಂದ ಚತುರಂಗಪೃತನಾಸಮೂಹಸಹಿತಂ ಕೃತಭುಜಬಲ
ಪ್ರತಾಪನಪ್ರತಿಹತಾಲೇಪನದೀಕ್ಷಿತಾಭಿಷೇಣಂ ವಸುಷೇಣಂ ಸಾಮಂತಲಕ್ಷ್ಮೀಸಿ
ಮಂತನೆನಿಪಂ ಸಿಂಹಚೂಡಂಗೆ ಬೀಡುಂದಾಣಮಾದ ಮಾಣಿಕ್ಯಪುರಮನೆಯ್ದೆ
ಪರ್ಾಗಳ್ ಪೊಡೆವ ವೀರವಱೆಯ ಪಿಡಿವ ಬಿರುದಿನ ಕಾಳೆಯ ಸುತ್ತಿಱಿ
ಮುತ್ತಿನ ತಳೆಯ ತಲೆಗೆ ಮುಂದಲೆಯಾಗಿ ಲೆಂಕಕರ್ಡುವ ಸಿಡಿದಲೆಯ ಸ
ಗಮನಸಮುತ್ಸುಕತೆಯಂ ಕೈವಿಡಿಸೆ ಕೈಗುಡುವ ಕೈದುಬರ್ಪ ಕೈವಿಡಿ

1 ಕ. ಸಾ.

ಪೇಡಿರ ತಂಡದ ನಡುವೆ ಪೊತ್ತ ಪೊನ್ನಪರಿಯಾಣದೊಳಗೆ ಜೋಳವಾಟಿಯ ನಿರ್ವಹಣದ ನಿಬ್ಬಣಕ್ಕೆ ಬೀರಸಿರಿ ಪೊತ್ತ ಪೊಂಗಳಸದಂತೆ ತಳತಳಿಸಿ ತೋರ್ಪ ಪಂದಲೆಯಂ ಕಂಡು ನಿಂದು ನೋೞ್ಪಾಗಳ್

ಮುರಿದಣ್ಪುಕ್ಕಿದ ಗಡ್ಡಮೀಸೆ ಮುಡಿಕಟ್ಟಂ ತಳ್ತ ಕೆಂಬಟ್ಟೆ ಕ
ತ್ತುರಿಯಂ ತೂಱುವ ಚುಂಚುಮೀಸೆ ಸುಲಿಪಲ್ದಷ್ಟಾಧರಂ ಭ್ರೂಕುಟಿ ।
ಸ್ಫುರಿತಂ ಕೈಮಿಗೆ ಭೂತಳಕ್ಕೆ ಪರಿವೇಷಂಗೊಂಡು ಬೀೞ್ತಂದ ಭಾ
ಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟಿನಾಳ್ದಟ್ಟಿನೊಳ್ ॥ ೭೫

ಪಗೆಯಂ ಕಂಡಟಿಯಾಸೆಗೆಯ್ದು ಪೊರೆದಾಳ್ದಂಗಾತುರಂ ಮುಟ್ಟೆ ಮೆ
ಯ್ದೆಗೆದಾಸ್ಥಾನದೊಳಾರ್ದು ಪಾರ್ದು ನೆರವಂ ಸಂಗ್ರಾಮದೊಳ್ ಜೋಳವಾ।
ಟಿಗೆ ಕೆಯ್ಯಾಂಪಳೆ ವೇಳೆ [1] ಪಾಳಿವೆನಸುಂ ಮುಯ್ಯಾಂಪ ಸಾಮಂತರಂ
ನಗುವಂತಿರ್ದುದು ಸಿಂಹಚೂಡನ ಶಿರೋಬ್ಜಂ ದಂತುರೋತ್ಕೇಸರಂ ॥ ೭೬

ದ॥ ಅಂತು ಪೊತ್ತು ಬಂದ ವೀರಂ ವೀರಪುರುಷನ ಶಿರೋಂಬುರುಹಮಂ ಧಾರಿಣೀಪತಿಗೆ ನಿವಾಳಿಸಿ ನಿಂದು ವನಿತಾಹರಣವಾರ್ತೆಯಂ ಸೂಚಿಸಿ ಬಟಿಯುಮಿಂತೆಂದಂ

ತಾಗಿದ ಪಲವಸಿಮಸೆಯಿಂ
ಭೋಗಂಬೋಗುತ್ತುಮಿರ್ದು ಖಳನಂ ರಥದೊ ।
ಳ್ವೇಗಮಯನಾಗಿ ಪತ್ತಿದ
ಪೂಗೊಂಚಲನುಯ್ವ ತೆಱದಿನೊಯ್ದಂ ಸೂತಂ ॥ ೭೭

ವ॥ ಅಂತು ಸಾಮಂತಸಾಮಜಸಿಂಹಂ ಸಿಂಹಚೂಡಂ

ಕಾದಿದ ಕಾಳೆಗಂ ಜವನ ಜತ್ತಕುಱಕ್ಕೆ ಸಮಾನಮಾದುದೇ
ನಾದೊಡಮೇಂ ಬರ್ದುಂಕಿ ಪಗೆ ಪೋದ ಬಟಿಕ್ಕೆ ಪ್ರಥಾನುವಾದಮಿ
ನ್ನಾದ ದಯಾಜನಕ್ಕೆ ತೋಱಿದಂಕರಲೆಂಕರ ಗೊಂದಣಕ್ಕೆ ತ
ಳ್ಪಾದಪುದುರ್ವರಾಧಿಪತಿ ಬೀಡ್ಕೊಡು ಕೂಡುಗೆ ಸಿಂಹಚೂಡನೊಳ್ ॥ ೭೮

1 ಗ. ಪಳೆವೇರೆ.

ವ॥ ಎಂಬುದುಮರಸಂ ನಿಜಾಂತಃಕರಣಖೇದಕ್ಕಂ ವೀರಶಾಸನಪ್ರವಾದಕ್ಕಂ ಮೂದಲೆಯಂತಿರ್ದ ತಲೆಯಂ ನೋಡಿ ನೀಡುಮೊದವಿದಬಲಂ ಸಮುಚಿತೋಪಚಾರಂ ವಚನಕಾರುಣ್ಯಪ್ರಸಾದಪ್ರದಾನಪ್ರಸಂಗದಿಂ ಸಂತರ್ಜಿಸುತ್ತುಮಿರೆ

ತುಟಿಲಾಳ್ಮದ್ಗೋತ್ರಭವಂ
ಕಟಿದಂ ಕಲಿಸಿಂಹಚೂಡನೆಂದವಯವದೊಂ ।
ದಟಲಿಂದೆ ಕೆಂಪು ಮಿಗೆ ನೀ
ರಿಟಿವಂತಿರೆ ಸೂರ್ಯನಪರಜಲನಿಧಿಗಿಟಿದಂ ॥ ೭೯

ಆದಿವಸಾಂತಮಂ ತಗೆದವೊಲ್ ನೃಪನಲ್ಲಿಯೆ ಬಿಟ್ಟು ವಲ್ಲಕೀ
ನಾದೆಯು ತೋಳ ತಳ್ಪದಿನಗಲ್ದು ಮನೋಭವಶಸ್ತ್ರಶಯ್ಯೆಯಿಂ ।
ಪೋದಿರುಳಂ ಕಟಿಪ್ಪಿ ವಿರಹವ್ಯಥನಂ ದ್ವಿಗುಣೀಕೃತಾರ್ಕಬಿಂ
ಬೋದಯನಿರ್ಗಮಂ ತಡೆಯದೆಯ್ದಿದನಾಂತ ವಿರೋಧಿದುರ್ಗಮಂ ॥ ೮೦

ವ॥ ಆ ಸಂರಂಭದೊಳ್

ಪರವೆಣ್ಣಂ ತಂದನೋ ತಂದನೊ ಪೆಸರ್ಗಿಡೆ ಪೆರ್ವಾರಿಯಂ ನಮ್ಮದುರ್ಗ
ಕ್ಕರಸಂ ಸೇನಾಸಮಗ್ರಂ ನಿಜಗಲಿ ವಸುಷೇಣಂ ವಧೂವಿಹ್ವಲಂ ದ ।
ಳ್ಳುರಿದಾಳಿಟ್ಟಂತಿದಂ ಸುಟ್ಟುರಿಪದಿರಿಸನೇಗೆಯ್ವೆವೆಂತಿಪ್ಪೆವೆತ್ತ
ಲ್ಪರವೆಂ ನಾವೆಂದು ಪೌರರ್ಕುದಿದರರ್ದಿದರಳ್ಳಾಡಿ ತಳ್ಳಂಕಗೊಂಡರ್ ॥ ೮೧

ಪದಧೂಳೀಶಾಳದಿಂ ಪೂಟ್ದುದು ಪರಿಖೆ ಮದಿಲ್ಗೆಟ್ಟು ಗಟ್ಟಿತ್ತು ಪುತ್ತೇಱಿ
ದುದೆತ್ತಂ ಗೋಪುರಂ ಕತ್ತಲೆ ಕವಿದು ಬಿಡಲ್ಬೀಡು ಪತ್ತಿತ್ತು ಕಣ್ಗಾ ।
ಣದೆ ದುರ್ಗಂ ಕಾದಲುಂ ಕೈಮಱೆದುದನಿತು ವೈಕಲ್ಯದೊಳ್ಮುನ್ನೆ ಕಂಡಿಂ
ತಿದು ಬೀಡುಂದಾಣಮೆಂದೊತ್ತಿದ ಪಡೆವಳರಿಂ ಮುತ್ತಿ ಬಿಟ್ಟುತ್ತು ಸೈನ್ಯಂ ॥ ೮೨

ವ॥ ಅಂತು ಮೂವಳಸುವಳಸಿ ಬೀಡಂ ಬಿಟ್ಟು ಮಱುದಿವಸಂ ಲಗ್ಗೆಯ ದೆಸೆಯದಿವಸ ಸದರನಿದರಮುಮಂ ಜಂತ್ರದೊಡವಣೆಗಳುಮಂ ಭೂಮಾನಮುಮಂ ಪುಗುವ ಪೊಱಮಡುವ ನೀರಕಂಡಿಯ ಕುದುರೆಗಂಡಿಯ ತೆಱಪು

ಗಳುಮಂ ವಸುಷೇಣಂ ಬಳಸಿ ನೋಡುತ್ತುಂ, ಬರ್ಪನ್ನವಾಗಳೇಱಿಸಿದ ತಿಱು ರೊಳುಮಿಟ್ಟ ತಿಲಕದೊಳಂ, ಕಟ್ಟಿದ ದೆಂಡೆಯೊಳಂ, ಅರ್ಚಿಸಿದ ಕೊತ್ತಳ ದೊಳಂ ಅರ್ಚಿಸಿದಟ್ಟಳೆಯೊಳಂ, ಎತ್ತಿದ ಪತಾಕೆಯೊಳಂ, ಸುತ್ತಿದ ಬೇವಿನ ದೆಂಡೆಯೊಳಂ ಸೆಱೆಗೆಯ್ದ ಸಱಿಯೊಳಂ, ಪೊಱಿಸಿದ ಗಾಲಿಯೊಳಂ, ನಿಱಿಸಿದ ಬಸಿಯೊಳಂ, ಪೂಸಿದ ಡೆಂಕಣಿಯೊಳಂ, ಗುಡಿಸಿದ ಗುಂಡಿನೊಳಂ, ಪಣ್ಣಿದ ಸಾರಮಾರಿಯೊಳಂ, ಬಾಸಣಿಸಿದ ಪಾವಿನೊಳಂ, ಪುರಿದ ಮಣಲೊಳಂ, ಪೂಣಿ ಸಿದ ಗಾಣದೊಳಂ, ಬಿರ್ಚಿದ ಬೇರ್ಕೆಯೊಳಂ, ಬಯ್ದಾಡುವ ಕಹಳೆಯೊಳಂ, ಪೊಯ್ದು ಬೊಬ್ಬಿರಿವ ಪಱೆಯೊಳಂ, ತೆನೆಯುಂ ತಳ್ತ ಪರಿಗೆಯೊಳಂ, ಮೊನೆ ಯುಂ ಪೂಣಿಸಿದ ಕೊಂತದೊಳಂ, ಕೈಗೆಯ್ದು ಕಟಾಸುರಮಾಗೆ ಮಸೆದ ಜವನ ದಾಡೆಯಂತೆ ಮಸಗಿದ ರಕ್ಕಸರ ಮಾಡದಂತೆ ನೋಡಲರಿದೆನಿಸಿದ ಮಕರಮುಖ ದಾಡಾಯುಗ್ಗದಗ್ಗಳಿಕೆಯುಂ ಕಂಡು ಕಡುಮುಳಿದು

ನೊಣೆಯಲ್ಕುಂಗಲಿಳಾತಳಂ ಮುರಿದು ಮೂರಿಟ್ಟಂತೆ ದುರ್ಗಕ್ಕೆ ನಿ
ಚ್ಚಣಿ ಸಾರ್ಚುಂದೊಲೆ ವೀರಸೇತು ನಡೆ ಸಾರಂಬದ್ದರಂ ಗೆಗ್ಗಡೆಂ !
ಕಣಿ ಗುಮ್ಮಂ ಪಡಿ [1] ಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂ
ತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಪೈಸಿದಂ ‖ ೮೩

ವ॥ ಅಂತು ಸೂಪೈಸುವ ನಿಸ್ಸಾಳಭೇರೀಢಕ್ಕಾಮೃದಂಗಕೋಳಾಹಳ ಮೆತ್ತಿಪೊತ್ತು ತಂದಿಟಿಪುದುದೆನಿಸಿ ಗುಡವಿಡಂಚಿತಪಿಪೀಲಿಕಾಜಾಲದಂತೆ ಮುತ್ತಿ ಮುಸುಱಿ ಪತ್ತೆ ಪಟಂಚೆ ಕೋಟೆಯ ಕೊತ್ತಳದಾಳ್ವೇರಿಯ ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ, ಖಡ್ಗಾಖಡ್ಗಿಯುಂ, ದಂಡಾದಂಡಿಯುಂ, ಕಚಾಕಚಿಯು ಮಾಗಿ ತಳ್ತಿಱಿವ ವಸುಷೇಣನೃಪನ ವೀರಭಟಕೋಟೆಯ ಲಗ್ಗೆಯಗ್ಗಳಿಕೆಯೋ ಳಗೆಟಲಸಿಯಡುಗೆಯಂತಿರಟ್ಟಳೆಯೊಡೆದು, ಬಣಜಿಗನ ಬಳಕೆಯಂತೆ ಕೊತ್ತಳಂ ಒಱಿದಾಗಿ, ಬಟಲ್ದ ಬಡಗೊಂಡಿಯಂತಿರಾಳ್ವೇರಿಯಟಿದು, ಕಡುಗೊಯ್ಯಲಾದ ಕೆಯ್ಯಂತೆ ತೆನೆಮುಱಿದು, ಬೀಸರವಾದ ರಾಶಿಯಂತೆ ಪುಲಿಮೊಗಂಗೆಟ್ಟು ಕೆಟ್ಟುಗೊಂಡು ತಟ್ಟುತ್ತಿಱಿವ ಕಟ್ಟಾಯದ ಕಡುಗಲಿಗಳೆಲ್ಲಮಣ್ಮಿಣ್ಮಿ ನಿಂದು ಮುಮ್ಮಳಿಯಾಗೆ ಪೋಯ್ತು ಪೋಯ್ತು ದುರ್ಗಮಿನ್ನೇನೆಂದೊಳಗೆಲ್ಲಮೊಯ್ದು

[1] ಕ. ಗೋಷೆ.

ಸರಕುಗಟ್ಟಿ ಪೊರಗೆಲ್ಲಮೆಯ್ದೆ ಗುಡಿಗಟ್ಟಿ ಸೀರೆಯಂ ಬೀಸಿ ಬೊಬ್ಬಿಱಿದಾಱಿ ತೊಟ್ಟನೆ ಕಂಡು

ರಣಮಂಡಲದೊಳ್ಪೆಱತೆಗೆ
ದಣಿಯಂ ತೆಗೆ ನೆಱೆದ ಬಿಲ್ಲವೊಲಿರ್ದ ಭಟಾ ।
ಗ್ರಣಿ ಪರಿದು ದಂಡೆಗೊಂಡ
ಡ್ಡಣದಿಂದಂ ಚಂಡಶಾಸನಂ ಕೈಕೊಂಡಂ ॥ ೮೪

ವ॥ ಅಂತು ಕೈಕೊಂಡು ಪೊತ್ತೆತ್ತಿ ಪೊಯ್ವ ಕೂರ್ವಾಳ ಬೆಳಗಿನ ಕೊರ್ಬಿಸಲೆಸಕದೊಳ್ಮಸುಱಿ ಮುತ್ತಿದ ಮಾರ್ತಲೆಯೆಂಬ ಕತ್ತಲೆ ಕೂಡೆ ಕಿಟ್ಟಲೆ ಕಿಟಿಂದಲೆಯಾಗೆ ಪೊಱಗುಮೊಳಗುಂ ಕೀಳ್ಗಟ್ಟಿಯಂತೆಸೆವ ಬೆಟ್ಟಂಗೆ ಬಳೆಗವನಿಕ್ಕಿದ ಬೀಟ್ವ ಕಂಡಿಗಳಂ ಪೆಣದ ಪೇರಟ್ಟೆಯೊಟ್ಟಿಲಿಂ ಮುಚ್ಚಿ ಮತ್ತ ಪತ್ತಿ ಭಿತ್ತಿಗರವೊತ್ತಂ ಬಿಡೆ ಉರಿವೆಣ್ಣೆಯೊಳಂ ಮುರಿದುರುಳೆಯುಂ ಉರಿವ ಮಣಲೊಳ್ ಸಿಡಿಮಿಡಿಗೊಂಡು ಸುರುಳೆಯುಂ, ಕಣೆಯ ಕಲ್ಲೊರಲೆ ಡೆಂಕಣಿಯಾಗೆಯುಂ, ಸಾರಮಾರಿಯ ಪೊಯ್ಲೊಳೋರಣಿಕೆಗೆಡೆಯುಂ, ತೆತ್ತಿಸಿದ ಗಾಳದೊಳೆತ್ತಿದ ಪಾಪೆಯಂತೆಳಲೆಯುಂ, ಕುತ್ತಿದ ಕೊಂತದೊಳ್ ಕೋಲ ಸುಂಟಗೆಯಂತೆ ಸಾಲಿಟ್ಟು ಬೀಡೆಯುಂ, ಮೇಲ್ವಾಗ್ದಿ ನಿಂದು ಪೋಗದೆ ಗಱಿಗಟ್ಟಿ ನಿಂದ ರಿಪುವೀರದುರ್ಗಪಾಳ್ವೇರಿಯ ಮೇಲಲಗನೂಱಿ ತೂಗಾಡುತಿರ್ದ ಪುಣ್ಣ ಉಣ್ಣಂಗಳಿಂ ಪೂತ ಮುತ್ತದ ಪೂವುಮೊರಡಿಯಂತಿರ್ದಟ್ಟಳೆಗಳೊಳಗೆ ನಿಂದಟ್ಟಳೆಗಳ್ಳಿನೊಗೆವ ನೆತ್ತರ ಸುಟ್ಟುರೆಗಳಿಂ ಬೇಸಗೆಯುರಿಪತ್ತಿದ ಬೆಟ್ಟದಂತಿರ್ದುದು ಕೊತ್ತಳದೊಳೊತ್ತಿನ ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟಕುಣಪಂಗಳಿಂ ಪೆಣೆದ ಪೆರ್ಮೊಪೆಯಂ ಕಱಿವ ಎಳೆಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು

ಅದನಾಗಳ್ಕಂಡು ಕಣ್ಣಿಂದುರಿ ಬರೆ ಪೊಗೆ ಪುರ್ವಿಂದಮುರ್ವೇಱಿ ಭೋಂಕ
ಲ್ಮದಮಾತಂಗಾರಿ ಪೂರ್ವಾಸನದಿಸಿಟಿದು ಮೆಯ್ವೆತ್ತೆ ವಜ್ರಾಂಗಿ ಕೆಯ್ಯೆ ।
ತ್ತಿದ ಕೊಂತಂ ದಂಡೆಗೊಂಡಡ್ಡಣಮಿರೆ ವಸುಷೇಣಂ ಭರಂಗೆಯ್ದುದುಂ ಪೋ
ದುದು ಪೊತ್ತಿಂ ಕಾಲಿಡಲ್ಕತ್ತಲೆ ಕದಡಿದುದೆಂದಾಪ್ಪರಡ್ಡೈಸಿ ನಿಂದರ್ ॥ ೮೫

ವ॥ ಆಗಳೆರಡುಂ ಪಡೆಗಳ ಪಾರಿತೂರ್ಯಂ ಮೊಳಗೆ ಪೆಱ ತೆಗೆಯಲೊಡಂ ವಸುಷೇಣಂ ಬಂದು ನಿಜನಿವೇಶಿತಸ್ಕಂಧಾವಾರಮಂ ಪೊಕ್ಕನಿತ್ತ ಚಂಡಶಾಸನಂ ಮಂಡಳಿಸಿ ಪಿಡಿದ ಕೈದೀವಿಗೆಯ ಬೆಳಗಿನೊಳ್ ತೊಟ್ಟ ಗದ್ದಿಗೆಯ ಗರುಡ ವಕ್ಕದ ಕವಚದ ನವರತ್ನಕಿರಣಂಗಳ ಕಿತ್ತಕರವಾಳಬಾಯ್ದಾರೆಯೊಳ್ ಬಳ್ಳಿಗೊಂಡು ಮಿಳ್ಳಿಸಿ ಪೊಳೆಯೆಯುಂ, ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ ದೆಗೆದು ಬಿಗಿದೆಬಲ್ವ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ ಒಂದೆ ಕೆಯ್ಯೊಳಿಕ್ಕಿದೆರಡು ಕಂಕಣದ ಝುಣಝುಣತ್ಕಾರಂ ಜಡಿವ ಬಾಳ ಕುಣಿವ ಕೊಂಕಿಂಗೆ ಕಿಂಕಿಣೀರವಮನಳಂಕೆಗೊಳಿಸಿಯುಮೋದುವ ರಾಯವಾಡದುಗ್ಘಡಿಸುವ ಮಾಂಗಳಿಕದ ಚಪ್ಪರಿಸುವ ಪಡಿಯಱರ ನೆಲನನುಗ್ಘಡಿಸುವ ಪಡವಳರ ತನ್ನ ಬೀರಮಂ ಮನ್ನಿಸಿ ಪೊಗಟ್ದ ಕೈವಾರಿಗಳಾಡಂಬರಮಳುಂಬಮಾಗೆ ಸುನಂದೆಯಂ ತಂದು ಸೆಱೆಯಿಟ್ಟ ಮಣಿಮಾಡಕ್ಕೆ ಬಂದು

ಘನನಿಶ್ವಾಸತರಂಗಿತಾಳಕಿಯನಗ್ರಪ್ರಾಂತವಾರ್ಬಿಂದುಲೋ
ಚನಪಕ್ಷ್ಮಾವಳಿಯಂ ವಿಯೋಗದಹನಪ್ಲುಷ್ಟಾಧರಚ್ಛಾಯೆಯಂ ।
ವಿನತಪ್ರಾಹ್ಣಸುಧಾಂಶುಬಿಂಬಮುಖಿಯಂ ಚೀನೋತ್ತರೀಯಾವಗುಂ
ಠನನಿರ್ಭಿನ್ನಕಪೋಲಪಾಂಡುರುಚಿಯಂ ಸಾರ್ದಂ ತದುರ್ವೀಶ್ವರಂ ॥ ೭೨

ವ॥ ಆಗಳ್

[1] ಬಿದಿಯೆಂಬ ಮದಗಜಂ ನೃಪ
ಸದನಸರೋವರದೊಳೆಪೆದು ಸೆಳೆತಂದು ವನಾಂ ।
ತದೊಳಿಕ್ಕಿದ ಬಾಳಮೃಣಾ
ಳದವೊಲ್ ಸತಿ ಕೊರಗಿ ಕಣ್ಗೆ ಕರಮೆಸೆದಿರ್ದಳ್ ॥ ೮೨

ವ॥ ಅಂತು ಸಾರ್ದು ತನ್ನೊಡವಂದು ಬಾಗಿಲೊಳ್ ನಿಂದ ಪರಿಜನಮುಮಂ ಕೆಲಬಲದೊಳಿರ್ದ ಪಸಾಯಿತರುಮಂ ಪರಿಹರಿಸಿ [2] ಕೃತಕವಿನಯೋಪಚಾರಮೆಸೆಯೆ ಚಂಡಶಾಸನಂ ಸುನಂದಾದೇವಿಗಿಂತೆಂದಂ

ನಯದಿಂ ನಿನ್ನೊಳೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸ
ಲ್ಗೆಯನೀಂ ಮನ್ನಿಸು ಕಾಮಿ ಕಣ್ಣಱಿವನಲ್ತಾಂ ಗಂಡುದೊಳ್ತೆನ್ನ ರಾ ।

1 ಈ ಪದ್ಯವು ಕ. ಪುಸ್ತಕದಲ್ಲಿ ಇಲ್ಲ. 2 ಕ. ಜ. ವಿನಯಕೃತಕೋಪಚಾರ.

ಣಿಯು ವಾಸಂ ಪರಿಚಾರಕಾದಿ ನಿನಗೀಸಾಮ್ರಾಜ್ಯಲಕ್ಷ್ಮೀಸುಖೋ
ದಯದೊಳ್ವಲ್ಲಭೆಯಾಗಿ ನೀನಿರುದಲಂ ನೀಲಾಬ್ಜಲೋಲೇಕ್ಷಣೆ ॥ ೮೭

ನುಡಿಯಲೊಡಂ ಮಿಂ ಪೇಳ್ವುಡ
ನುಡಿಯಂ ತನ್ನಿದಿರೊಳಾಖಳಂ ಕಡೆಗಣ್ಣಿಂ ।
ಕಿಡಿಸೂಸೆ ಘೃತಾಹುತಿಯಂ
ಪೊಡೆವ ಶಿಖಿಜ್ವಾಲೆಯಂತೆ ಬಾಲೆ ಕನಲ್ದಳ್ ॥ ೮೯

ವ॥ ಅಂತು ಕನಲ್ದೊನಲ್ದು ಸ್ಫುರಿಸಲಾಱದೆ

ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ
ಮಱದುಂ ಕಾಣದನಾಥೆಯಂ ನುಡಿವವೊಲ್ನಿನ್ನೊಂದು ಸಂಪತ್ತಿಯಿಂ ।
ಜಱಚುತ್ತಿರ್ದಪೆ ಪಾಣ್ಬ ನಿನ್ನ ತಲೆಯುಂ ಕಾರಾಗೃಹದ್ವಾರದೊಳ್
ಮೆಱೆವಾಗಳ್ ನುಡಿ ನಾಳೆ ನೀನೆನಗೆ ಮಾಡಲ್ವೇಳ್ಪ ಸತ್ಕಾರಮಂ ॥ ೯೦

ರಮಣನಿರೆ ಪಾಣ್ಬನೊಳ್ಸತಿ
ರಮಿಯಿಸದವಳುಂ ವೃಥಾನುವಾದದೆ ಫಳಮೇಂ ।
ಕಮಳಿನಿ ದಿನಪತಿಗಲ್ಲದೆ
ಸಮನಿಸಿ ದೋಷಾಕರಂಗೆ ಮೊಗಮಿತ್ತಪಳೇ ॥ ೯೧

ವ॥ ಎಂದು ಬೆಟ್ಟವೆಟ್ಟನೆ ಬಯ್ದು ಬಿಟ್ಟು ಬಿರ್ದಿರ್ದು ನುಡಿದ ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತಮಿಂತೆಂದಂ

ಕೆಳೆಗೆಟ್ಟಾಂಪಗೆಯಾದೆನಾಗಿ ವಸುಷೇಣಂ ಪೋದನಿಂನಿನ್ನ ಕೆ
ಯ್ಯೊಳದನ್ನಂ ಬಳಿಯಾಸೆಯಿಂ ನಮೆಯದಿರ್ಬೇಡಾಗ್ರಹಂ ಸತ್ತು ಸ ।
ತ್ಪಳಮಂ ತೋಱುವ ಬಾಳೆಯಾಗದಿರು ಪಾತಿವ್ರತ್ಯದಿಂ ಬತ್ತಿ ಬಾ
ಳ್ದಳಿರಾಗುತ್ತಿರದಾಳ್ದಿರಾತ್ಮಪರಸೌಖ್ಯಶ್ರೀವಿಳಾಸಂಗಳಂ ॥ ೯೨

ವ॥ ಎಂಬುದುಮಾತಂಗೆ ಮಾತಂ ತಪ್ಪಿನಮುತ್ತರಂಗುಡುತ್ತಿರಲೇಸೆಯೆಂದಾಕೆಯಿಂತೆಂದಳ್

ಮಾವಿನ ಕೊಂಬಿನೊಳ್ನಲಿದು ನರ್ತಿಪ ಕೋಗಿಲೆ ಪತ್ತಿದಂಟಿನಿಂ
ಬೇವಿನ ಕೊಂಬಿನೊಳ್ ನಲಿವುದೇ ಪ್ರಿಯನಿರ್ದವೊಲಪ್ರಿಯರ್ಗೆ ಸಂ।
ಭಾವನೆಗೆಯ್ವರೇ ಸತಿಯರೇಂ ಗಡ ವೀರನ ತೋಳ ಬಾಳುಮಂ
ನಾವಿದ ಬಾಳುಮಂ ಸಮನೆ ಪತ್ತಿಪ ಸಾಣೆಯೊ ಮದ್ಭುಜಸ್ರಜಂ ॥ ೯೩

ವಸುಷೇಣನೃಪನೆ ಕೈವಿಡಿ
ದಸುವಿಂಗೊಡೆಯಂ ಚಿತಾಗ್ನಿಗೊಡೆಯಂ ಒಡಲಿಂ ।
ತೆಸೆದೀ ಪಾತಿವ್ರತ್ಯದ
ಮಿಸುಗುವ ಜಸವೆಣ್ಣ ತಲೆಗೆ ತಪ್ಪೆನು ಪುಲ್ಲಂ ॥ ೯೪

ವ॥ ಎಂಬುದುಮಾಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು ಮಾಣದೆ ಮತ್ತಮಿಂತೆಂದಂ

ಬಿಡೆನಾಂ ನೀಂ ಸಯೆ ಸಾವೆ ನಲ್ಲದುಟಿಯಿಂ ನೀನೊಲ್ವಡೇನೊಲ್ಲದಿ
ರ್ದೊಡಮೆನ್ನಾನೆರಡಿಲ್ಲದೊಲ್ಲೆನದಱಿಂ ಬೇಱೂರ ಬೇಟಕ್ಕೆ ಬಾಯ್ ।
ಬಿಡಲಾಱೆಂ ಸೆಱೆಯಿಂದಮೆನ್ನ ಮನೆಯೊಳ್ನೀನಿರ್ದೆಯೆಂಬಾಸೆಯು
ಳ್ಳೊಡೆ ಸಾಲ್ಗುಂ ಬಟಿಕಪ್ಪುದಕ್ಕೆ ರಿಣದಿಂದಂಭೋಜಪತ್ರೇಕ್ಷಣೆ ॥ ೯೫

ವ॥ ಎಂದು ತನ್ನಿಟಿಪನಡರೆ ಚಾಳಿಸಿ ನುಡಿದು ಪೋಗುತ್ತುಂ

ಪರಿಚಿತೆ ನೀಂ ತಳೋದರಿಗೆ ಮೆಯ್ವಳಿಯಿಂ ಮನಮಂ ತೊಡಂಕೆ ನಾಂ
ತ್ವರಿಪದಿನಿರ್ದು ನಿಂದಬಲನಾಱಿಸು ತೋಱಿಸು ಭೀತಿಯಂ ಮನಂ ।
ಕೊರಗದೆ ಮತ್ತೆ ಸಂತಮಿಡು ಗಂಡನ ಪಂಬಲನೊಯ್ಯನಾಗಿಯೆಂ
ಧರಣಿಕೆಯುಂ ಬಳಂ ನಿಱಿಸಿ ಕಾಂತೆಯ ಕಾಪಿನೊಳಾನೃಪಾಳಕಂ ॥ ೯೬

ಅರೆವೆಣನಾದೊಡಂ ಬಿಡದೆ ಮಾಡುವ ದೀವಿಗೆಯಾಸೆಯುಳ್ಳ ಬೀ
ರರಬಗಿಯೇಱಬಾಯುಗಿಲುಸಿಂಕಿಪ ಕೆಂಡದ ಸತ್ತ ರಾಜಪು ।
ತ್ರರ ವನಿತಾಜನಂ ತೊಱೆದು ತೋಳ್ಗುದಿಬಾಳ್ಗುದಿಯಾಗಿ ಬೇವ ದ
ಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತುರಣಂ ಬಲ್ಲಂಗಳೊಳ್ ॥ ೯೭

ಪರನಾರೀನಯನೋತ್ಪಲಂ ಮುಗಿವಿನಂತುರ್ಚಿರ್ದ ವಿದ್ವಿಟ್ತಮಂ
ಪರೆಯುತ್ತಿರ್ಪಿನೆಗಂ ನಿಜಾಶ್ರಿತಮಹೀಲೋಕಾವಲೋಕಕ್ಕೆ ಬಿ।
ತ್ತರದಿಂ ಸತ್ಪಥವರ್ತನಂ ನೆಗಟ್ಟಿನಂ ತೇಜಃಪ್ರತಾಪಪ್ರಭಾ
ಕರನುದ್ಯೋತಿಸಿದಂ ನಿಜಾಭ್ಯುದಯದೊಳ್ ಸಾಹಿತ್ಯರತ್ನಾಕರಂ ॥ ೯೮

ಗದ್ಯ॥ ಇದು ಪರಮಜಿನಸಮಯ ವನವಸಂತ ಸಂತಾನಾರಾಮ
ರಾಮಚಂದ್ರಮುನೀಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣ
ಕಿರಣ ಪ್ರಸನ್ನಾಂತಃಕರಣ ಕವಿಚಕ್ರವರ್ತಿ ಬಿರುದ ಕವಿ
ಭಾಳಲೋಚನ ಜನಾರ್ದನದೇವ ವಿರಚಿತಮಪ್ಪ
ಅ ನಂ ತ ನಾ ಥ ಪು ರಾ ಣ ದೊ ಳ್
ಪುರುಷೋತ್ತಮಕಥಾವತಾರಂ
ಏಕಾದಶಾಶ್ವಾಸಂ
ಸಂಪೂರ್ಣಂ.

---

# ದ್ವಾದಶಾಶ್ವಾಸಂ

ಶ್ರೀರಮಣಿಗೆ ನಿತ್ಯನಿಜಾ
ಗಾರಮಿದೆನಿಸುವ ಜಿನೇಂದ್ರಪದಪಂಕರುಹ ।
ಸ್ಮೇರತೆಯೊಳಾಳ್ದನಧಿಗಮ
ಸೌರಭರುಚಿಯಿಂ ವಿನೇಯಜನಮುಖತಿಲಕಂ ॥ ೧

ವ॥ ಅಂತು ನೇಸರ್ಮೂಡಲೊಡಂ ಮುನ್ನೆ ಮುನ್ನೆ ಮೂಡಿರ್ದ ವಿರಹಪರಿತಾಪಂ ಶೀರದೆಯುಮೇತೞೊಳಮಾತಳೋದರಿಯನೊಡಂಬಡಿಸಲಾರ್ಬರದೆಯುಮಾಕಿತವಂ ತನ್ನ ಕೈತವದೊಳ್

ಪತಿಯಿರೆ ಪಿಂಗದಾಸೆ ಮನದೊಂದಟಿಯಾಸೆಯಿನೆನ್ನನೊಲ್ಲಳೀ
ಸತಿಯಿವಳಂ ಮರಳ್ಚಿದಪೆನೆಂದು ಬೆಸಂಗುಡೆ ಚಂಡಶಾಸನಂ ।
ಪ್ರತಿಬಳಮೆಯ್ದೆ ಕೆಟ್ಟುದಟಿದಂ ವಸುಷೇಣನೃಪೇಂದ್ರನೆಂಬ ಸಂ
ಗತಿಯನೊಡರ್ಚಿದಂ ಜನದ ಕಣ್ಬಿರಗಪ್ಪಿನಮಿಂದ್ರಜಾಲಿಗಂ ॥ ೨

ವ॥ ಆ ವ್ಯತಿಕರಮಂ ಕಂಡು ನಮ್ಮರಸನಿರುಳಿನಕಲಿಯುಕಾಳೆಗದೊಳ್ ಮುತ್ತಿದ ಬೀಡಂ ತೊತ್ತಳದುಟಿದು ಪಗೆಯ ಪಂದಲೆ ಕೆಯ್ಗೆವಂದುದಿನ್ನೇನಿನ್ನೇನೆಂದು ಕೋಟೆಯೊಳಗೆ ಜನಂ ಕೋಟಿತೆಱದಿಂ ನಾಟಕಂ ನಲಿದು ಬೊಬ್ಬಿಱಿಯುತ್ತಿರೆ ಸುನಂದಾದೇವಿಯಿರ್ದ ಸೆಜ್ಜೆವನೆಗೆ ತಾನೆ ವಂದು

ವಸುಷೇಣನೆ ಪತಿಯೆನಗೆಂ
ದು ಸುನಂದೆ ಸಿಡಿಲ್ವೆಮಾಟ್ಪಸೋವಡಿಕೆಯನೀ ।
ಬಸಿವ ತಲೆಗೆನುತುಮಿಡಾ
ಡಿಸಿದಂ [1] ಮಾಯಾವಿ ಪತಿಯ ಮಾಯದ ಶಿರವಂ ॥ ೩

---

[1] ಕ. ಮಾಯಾವಿಪರ್ಯಯ.

ವ॥ ಅಂತು ತಂದಿಟಿಪಿದ ಶಿರಮುಮಂ ಕಳ್ದು ತಱಿದ ವಲ್ಲಭನ ಮಣಿ ಮಕುಟ ಕೇಯೂರಮಂಡಳಾದೀಪನಮಂಡನಮುಮಂ ಪೇರುರದೊಳೋರಂತೆ ಮೆಱೆವತೋರಮುತ್ತಿನ ಹಾರಮುಮಂ ಕಾಣಲೊಡಂ

ಹೃದಯದೊಳಿರ್ದವಲ್ಲಭನನಾಕ್ಷಣಭೀತಿಯಿನೀಕ್ಷಿಪಂತೆ ಮು
ಚ್ಚಿದುವಲರ್ಗಣ್ ಪೊಣರ್ತಡವಿ ನೋಡುವವೋಲ್ಕುಚಮಧ್ಯದಲ್ಲಿಗಾ ।
ದುದು ಕರಪಲ್ಲವಂ ಸರಮನಾಲಿಸುವಂತೆ ಮೊಗಂ ಮಲಂಗಿಕಂ
ಗದೊಳಿರ್ದೆ ಶೂನ್ಯಮಾಗಱಿಸುವಂತಸು ಪೋಯ್ತುಸಿತಾಬ್ಜನೇತ್ರೆಯಾ ॥ ೪

ಬಟಿಯಟ್ಟಿ ಬಂದು ಮುನ್ನಂ
ಪುಟುಪಗೆಗೊಳಗಾದಳೆಂದು ಸಾಪಾಸಿಗಳಂ ।
ಕಟಿಪಿದನೆಲ್ಲಂ ತಲೆಯಂ
ಬಟಿಯಟ್ಟಿದನೆಂದು ಪೋದುದಸು ಶಶಿಮುಖಿಯಾ ॥ ೫

ಇನಿಯನಿರೆ ನೋಡ ಮತ್ತೊ
ರ್ಬನ ಕಣ್ಗಂ ಬಗೆಗಮೊಪ್ಪಿದಪುದು ಸುಡಲೀ ।
ತನುವನಿದನೆಂದು ಜೀವಂ
ಮುನಿದಂತಿರೆ ಬಿಟ್ಟು ಪೋಯಿತಸು ಶಶಿಮುಖಿಯಾ ॥ ೬

ವ॥ ಆಗಳಾವ್ಯತಿಕರಮಂ ಕಂಡತಿಚಕಿತಹೃದಯನುಮಾಕುಳಿತವಿಳೋಕನುಮಾಗಿ

ಸ್ಮರನೊಳ್ದಾಯಿಗನಾಗಿ ಬೆಂದ ವಿಧಿಯೊಂದಂ ಮಾಡಿದಂ ಕೂಡುವೆಂ
ಬೆರಗಿಂದಿಂದಿದನಿಂತು ಮಾಡೆ ಮರಣಂ ಮೂಡಿತ್ತು ಹೋ ಬೆಂದೆನಾ ।
ನುರಿದೆನ್ನಂದಿದೆನೆಂದು ಬಂದು ಭರದಿಂ ತಪ್ಪೆ ೖಸೆ ತಳ್ತಂತು ತ
ತ್ತರುಣೀಗಾತ್ರದ ಸೋಂಕು ಸಮ್ಮನಿಸೆ ಮೂರ್ಛಾಪನ್ನನಾದಂ ಖಳಂ ॥ ೭

ಅವನಂ ಚಾಮರದಡಪದ
ಡವಕೆಯ ಕೀಲ್ವಾಳ ಮೇಳದಂಗನೆಯರ್ಬೀ ।
ಸುವ ಬಿಜ್ಜಣಿಗೆಯ ಮಳಯಜ
ನವಜಳಕಣದೆಲರ ಸೋಂಕಿನಿಂ ನಿಲೆ ಪಿಡಿದರ್ ॥ ೮

ವ॥ ಅಂತು ಮೂರ್ಛೆಯಿಂದೆಚ್ಚತ್ತು ಬೆಚ್ಚನೆ ಸುಯ್ದು ಬೆದೆಬೆದೆ ಬೆಂದು ನೊಂದು ನಿಂದಿಸಿ ಕೊಂಡು ಮಾಣದೆ

ನೋಡಿ ಕನಲ್ದು ಬಾಯ್ಮನಿದು ಮೋನದಿನೇಕೆಲೆ ದೇವಿ ನಿಮ್ಮನಂ
ನೋಡುವೆ ಸಾವಿನಿಂ ಸರಸವಾಡುವರೀ ಮಱುಮೆಯ್ಯೊಳಾದೊಡಂ ।
ಕೂಡದೆ ಮಾಣೆನಬ್ಜದಳಲೋಚನೆ ನಿನ್ನೊಡನೆಂದು ಮೆಯ್ಗೆ ಮೆ
ಯ್ಗೂಡುವೆ ಧೂಮಸೌಧಗೃಹದೊಳ್ ಶಿಖಿಪಲ್ಲವರಾಗತಳ್ಪದೊಳ್ ॥ ೯

ವ॥ ಎಂದು ಬಾಯಱಿದು ಪಱಯಿಸಿ ಬಸಮಱಿದಸುವೊಱೆಯಾಗಿ ಮನ ಮನಱಿದು ಕಳವಳಿಸಿ

ಎನಗಿನ್ನೋಲಗಸಾಲೆಯೇಕಿದು ವಿಮಾನಂ ನಂದೆಯುಂ ಲೋಲಲೋ
ಚನೆಯುಂ ಕುಳ್ಳಿರಿಸಿಲ್ಲಿ ಕೂಡೆ ಬಱಿಸಲ್ವಂತಃಪುರಸ್ತ್ರೀಯರಾ ।
ಳ್ತನಮಂ ತೋಱುವ ಲೆಂಕರೊಳ್ನುಡಿಯವೇಟ್ಪಿದ್ವ್ಯಾಜನಂಬರ್ಕೆ ಚಂ
ದನಗಂಧಾವಿಧದಿಂದಮೆನ್ನವಿರಹಜ್ವಾಲಾಗ್ನಿಯಂ ನಂದಿಪೆಂ ॥ ೧೦

ವ॥ ಎಂದು ತನ್ನ ಲಕ್ಷ್ಮೀಭವನಮೆನಿಸುವುಪರಿಮಂಡಪಮನೆ ಚಿತ್ತಕ್ಕೆ ಮಾಡಿ ಸುನಂದಾದೇವಿಯುಂ ತಾನುಮೇಕಾಸನದೊಳ್ಕುಳ್ಳಿರ್ದು ರಾಣಿಯವಾಸದ ಪೆಂಡವಾಸದ ಭಾಷೆಯ ಲೆಂಕರ ಭಾರತಿಕನಿಕರದೋಲಗದ ಕೇಳೀವಿಳಾಸಮಂ ಕೆಳಗೆ ತಗುಳ್ಚಿದ ಹುತವಹಜ್ವಾಲಾಕಲಾಪಮಂ ಮೆಚ್ಚಿದಂತೆ ಮೂರ್ಛೆ ಗೊಳ್ವಿನಮೊಡನಱಿಯಲ್ಪರಿಚ್ಛೇದಿಸಿದ ಕುಲಸ್ವಾಮಿಯವಸಾನಸಮಯಮಾಗೆ

ಊದುವ ಕಾಳೆ ವೀರವಱೆಯೆತ್ತುವ ಪುಷ್ಪಕಮೊರ್ವರೊರ್ವರಂ
ಮೂದಲೆಗೆಯ್ವ ಸೂಳ್ನೆರೆದವಂದಿಗೆ ಸಬ್ಬವಮಪ್ಪ ಭಾಗಮೊ ।
ಲ್ದೋದಿಪ ಗಾಹೆ ಪಾಡೆ ಪದಮಂ ಪೊಸಮಾಪಿನ ಹೊನ್ನ ಪಚ್ಚಮಂ
ದಾದುರಿ ಚಂಡಶಾಸನನ ಬಾಲೆಯ ಲೆಂಕರ ಕೇರಿಕೇರಿಯೊಳ್ ॥ ೧೧

ವ॥ ಅದಲ್ಲದೆಯುಂ

ತಡುಗೆಯನಾಯ್ದು ಕೊಂಡುಱಿದವಂ ಸಖಿಯುರ್ಗಿರವೇಟ್ದು ಬಂಧುಗ
ಳ್ತೊಡರ್ದಿರೆ ಮೋಹಮಂ ಬಿಡಿಸುವಾಶ್ರಿತರ್ಗಾದೆಡರಂ ಕಬಲ್ಚಿ ಬೀ ।

ಪ್ಕೊಡಿಸುವ ಪೊನ್ನ ಮಾಣಿಕದ ಬಾಯಿನಮಂ ಸಮುಕಟ್ಟುವಟ್ಟೆಬಂ
ದೊಡೆ ಹಿಡಿಹಾರಮಿಾವಳವಿಯುಚ್ಚರಿಯಾದುದು ಪೆಂಡವಾಸದೊಳ್ ॥ ೧೨

ವ॥ ಅಂತುಮಲ್ಲದೆ ತಂತಮ್ಮ ಮನದ ಮಚ್ಚರದ ಮಚ್ಚಿನ ಕಾದಲ್ಮೆ ಮೂದಲ್ಮೆಯಾಗಿ ಕೈಗೆಯ್ದು ಮೆಯ್ಗಯ್ಯದೆ ಪರಿಚ್ಛೇದಿಸಿ ಪೊಱಮಟ್ಟು ನೆಱೆದಂತಃಪುರಪುರಂಧ್ರಿಯರೊಳಗೆ ತನ್ನ ಕುಚಕಂಭದಂತಿರುದ್ವೃತ್ತತೆಯುಂ ಒಲ್ದೊಲಸಿದೊಲವಿನೊಳುನ್ಮತ್ತೆಯಾದ ಮಾನಿನಿಯಿಂತೆದಳ್

ನಗೆಗಂ ನಾಚದೆ ನಮ್ಮನೊಲ್ಲದೆ ಪರಸ್ತ್ರೀಗೊಲ್ದವಳ್ಸತ್ತೊಡಾ
ಕೆಗೆ ತಾಂ ಪ್ರಾಣಮನಿತ್ತಪಂ ಗಡರಸಂ ನೋಡಕ್ಕ ಮಾವಿಂಗೆ ಮ
ಲ್ಲಿಗೆಗಳ್ಕೂರ್ತೊಡೆ ಮಾವು ಕೂರ್ತುದು ವಸಂತಶ್ರೀಗೆನಿಪ್ಪಂತೆ ಲ
ಜ್ಜೆಗೊಡಲ್ನಂಮಳೆವೋಪದಿನ್ನುಟಿವಿಡಕ್ಕೇಗೆಯ್ವುಮಬ್ಜೇಕ್ಷಣೇ ॥ ೧೩

ವ॥ ಆ ಮಾತಂ ಮಾರ್ಕೊಂಡು ಕುಲವತಿಯುಂ ಶೀಲವತಿಯುಮೆನಿಸಿದ ವಿದಗ್ಧೆಯೊರ್ವಳಿಂತೆಂದಳ್

ಪಟಿಗೇವಯ್ಸುವ ಪಾಪವೆಂಬ ಪೆಱವೆಣ್ಗಾಟಿಪ್ಪುದಾವಾಯದೊಂ
ದಟಿವೆಂಬೋಜೆಯಧೀಶವೃತ್ತಿಯಧಿಪಂಗೇನಾದುದಾದಲ್ಲಿಮೆ ।
ಯ್ನೆಟಲಂತಪ್ಪುದು ನಮ್ಮಪಿತ್ತ ನಮಗಿನ್ನಾಮಾತದೇಕೆಂದು ಪಿಂ
ಡುಟಿವೊಂದಾಸೆಯನೊಲ್ಲದೆಯ್ದೆ ನೆಱಪಿತ್ತಂತಃಪುರಸ್ತ್ರೀಜನಂ ॥ ೧೪

ವ॥ ಅಂತು ತಮ್ಮೊಳ್ತಱಿಸಂದು

ಪ್ರಾಣೇಶ್ವರನೊಳ್ ಮನ್ನಣೆ
ಗಾಣೆಗೆ ಗೋಸನೆಗೆ ಸೂಟಪಾಟಿಗೆ ನಮ್ಮೊ ।
ಳ್ಮಾಣದೆ ಮಚ್ಚರಿಪಂತಿರೆ
ಹೂಣಿಸಿ ಮುಂಚಲ್ಕೆ ವೇಟ್ಕುಮೊರ್ವರಿನೊರ್ವರ್ ॥ ೧೫

ವ॥ ಅದಲ್ಲದೆಯುಂ

ಪ್ರಮದವನಂಗಳೊಳ್ತರುಲತಾವಳಿಗಂಚೆಗೆ ಕೋಕಿಳಕ್ಕೆ ವಿ
ಶ್ರಮಿಸುವ ತಣ್ಬುಟಿಲ್ಗೆ ಕೃತಕಾದ್ರಿಗೆ ಕೋಡುವ ಪೂಗೊಳಕ್ಕೆ ತ ।

ದ್ರಮಣಿಯರಟ್ಟಿ ಕೈಮುಗಿವ ಕೈಲೆಡೆಮಾಡುವ ಪೊಲ್ಲಕೆಯ್ವುದಂ
ಕ್ಷಮಿಯಿಸಿಯೆಂಬ ಬೀಡ್ಕೊಡುವ ಕೊಳ್ವ ರವೋತ್ಕಟಮಾಯ್ತು ಸಂಕಟಂ ॥ ೧೬

ವ॥ ಅಂತುಮಲ್ಲದೆಯುಂ

ದರಹಾಸಾಮೃತದಿಂದಮೇಂ ಮಧುರಕುಂಭಾಂಭಂಗಳಿಂ ನೀರನುಂ
ಡ ರಸೋದ್ಯತ್ಫಳಪಲ್ಲವಪ್ರಸರದಿಂದೀನಂದನಶ್ರೀಗೆ ಸೀ ।
ಗುರಿಯಾಗಿರ್ದಪಳೀಗಳೆಮ್ಮ ಚಿತಕಾಗ್ನಿಜ್ವಾಲೆಯೊಳ್ಸೀದು ಸೀ
ಕರಿವೋದಪ್ಪಿರೆ ನಾಳಿಕೇರಕದಳೀಪೂಗದ್ರುಸಂತಾನಮೇಂ ॥ ೧೭

ನಿಮ್ಮೊಡನಾಡಿ ನೋಡಿ ಬಟಿಕೆಂಮ್ಮುರದೊಳ್ಮೊಲೆಗಳ್ತಗುಬ್ಬುವೊ
ಲ್ದೆಮ್ಮ ಮನಂಗಳುಳ್ಳಲರ್ದುದೆಮ್ಮ ಸುಖಂ ಫಳಮಾದುದಂತೆ ನೀ
ಮುಮ್ಮುಗುಳಿಂದರಲ್ದುಱುಗಲಿಂ ಫಳದಿಂ ಸಮಸಂದಿರಯ್ಯೊ ಮಿ
ನ್ನೆಮ್ಮರಿಣಂಗಳಿಂದು ಪಱಪಟ್ಟವೊಲಾಸಹಕಾರಷಂಡಮೇ ॥ ೧೮

ಕ್ರಮದಿಂ ಕೈಲೆಡೆಗೊಟ್ಟೆನೀಹರಿಣಯುಂ ಕೊಂಡಾಡಿಸಿ ರಾಜಕೀ
ರಮನೋವೀಕಳಹಂಸನಂ ಸಲಹುನೀನೀಸೊಗೆಗಾಗೆಲ್ಲಮಂ ।
ನಮಗಿನ್ನೆಮ್ಮ ಸಮಾನಮೆಂದು ಕೆಲರಾಳೀಜಾಲಮಂ ಬೇಡಿ ತ
ಪ್ತೆಮೆಯಿಂದಂ ಕರೆಗಣ್ಮಿ ಸೂಸಿ ಕಱೆದಳ್ ಕೆಯ್ಯೊಡ್ಡಿ ಕಣ್ಣೀರ್ಗಳಂ ॥ ೧೯

ವ॥ ಅಂತು ನಿರಂತರಶೋಕರಸಾವೇಗದೊಳ್

ನೆರೆದುದು ಲೆಂಕತಂಡಮೊಡವಂದುದು ರಾಣಿಯವಾಸವೊಲ್ದಳಂ
ಕರಿಸಿದನಾಧರಾಧಿಪತಿಯೋಲಗಸಾಲೆಗೆ ವಂದುದಾತನೂ ।
ದರಿಯ ವಿಶೇಷಭೂಷಿತಶರೀರಮನೇಕವಿಮಾನಯಾನಮು
ಬ್ಬರಿಸಿದಾದುದಿಂತು ಕರುಣಾದ್ಭುತರೌದ್ರರಸಾಕರಂ ಪುರಂ ॥ ೨೦

ವ॥ ಅನ್ನೆಗಮಿತ್ತಲ್

ವಸುಷೇಣಂ ಲಗ್ಗೆಮಾಡಲ್ಮೊಗಸಿ ಪೊಗಿಸೀ ದುರ್ಗಕ್ಕಿಭವ್ರಾತಮಂ ಪ
ಣ್ಣಿಸಿ ವಾಹವ್ಯೂಹಮಂ ಪಲ್ಲಣಿಸಿ ಸುಭಟರಂ ಕೈದುಕೊಳ್ವಂತಿರಾಳೋ ।

ಚಿಸಿ ರಾಜಾವಾಸದಿಂ ತಾಂ ಪೊಱಮಡುತಮಿರ್ದೆಂ ಕೋಟಿಯೊಳ್ಕಾಮಿನೀವೀ
ರಸಮೂಹೋದ್ರೇಕಶೋಕಾಕುಳಬಹುಳರವಂ ತಿಣ್ಣಮಾಯ್ತೆಂದನಾಗಳ್ ॥ ೨೧

ಚರನೆಯ್ತಂದೋರ್ವನಾವೃತ್ತಕಮನುಸಿರ್ದೊಡುರ್ವೀಶ್ವರಂ ಪ್ರಾಣನಾಥಾ
ಮರಣೋದಂತಾಭ್ರವಹ್ನಿಸ್ಫುಟಿತಹೃದಯನುಚ್ಛ್ವಾಸನಿಶ್ವಾಸಮೂಢಾಂ ।
ತರಿತಂ ಬಾಷ್ಪಾಂಬುನಿಷ್ಪಂದಿತನಯನಯುಗಂ ಖೇದದಿಂ ಕೀಲಿಸಿರ್ದ
ರ್ಕರುವಿಟ್ಟಂತಿರ್ದಮಿಟ್ಟಪರ್ಱೆದು ಕರಿಯುಮೇಲಿಟ್ಟರೆಂಬಂತಿರಿರ್ದಂ । ೨೨

ವ॥ ಅಂತು ಕಿಱಿದು ಬೇಗಮಿರ್ದಂತೆ ತಾನುಂ ತನ್ನ ತಾನಱಿದು ಬಾಯ
ಟಿದುದಾಕಾಶವಚನನಿಂತೆಂದಂ

ಅನಟಿದೆನೆಂದು ಪುಸಿದೊಡೆ
ಮಾನಿನಿ ನೀಂ ಕಟಿದೆ ನಿನ್ನ ಸಾವನೆ ಕಂಡಂ ।
ತಾನುಟಿರ್ದೆಂ ನಿರ್ಲಜ್ಜರ್.
ದೀನಕೃಪಾಣರ್ ಕೃತಘ್ನರಾರೆನ್ನಿಂದಂ ॥ ೨೩

ವ॥ ಅನಂತರಂ ಪಾರ್ಷ್ಣಿಕಗ್ರಾಹಕನಾಗಿ ತನ್ನಂ ನೆಮ್ಮಿಸಿಕೊಂಡಿರ್ದ
ದಯಿತಸಾಮಂತನೊಳಿಂತೆಂದಂ

ಇನಿಯಳ್ ಪೋದಬಟಿಕ್ಕಮೆನ್ನಿರವು ತಾರಾಮಂಡಲಂ ಪೋದ ಲೋ
ಚನಮಿರ್ಪಂತೆ ಸುಗಂಧ ಪೋದ ಕಳಿವೂವಿರ್ಪಂತೆ ತೀವಿರ್ದ ಜೀ ।
ವನಮೆಲ್ಲಂ ನೆಱೆಪೋದ ಹೊಟ್ಟುಗೆಱೆ ತಾನಿರ್ಪಂತೆ ದೈನ್ಯಕ್ಕೆ ಭಾ
ಜನಮಿರ್ದೆ ನಸು ಪೋದ ಬಾಷ್ಪಣನಿದಕ್ಕಾನಿರ್ದೊಡೇಂ ಬೀಡ್ದೊಡೇಂ ॥೨೪

ವ॥ ಅಂತು ಮಲ್ಲದೆಯುಂ

ಇದಱೊಳ್ವಲ್ಲಭೆ ಕಾದಿ ಕೊಳ್ವಧನಮಾಪ್ರಾಣೇಶ್ವರೀರತ್ನಮಿ
ಲ್ಲದ ಬಾಳ್ಗೋಟೆ ಗಡೇಕೆ ಕೋಟಲೆಗಳೇಳಲ್ಕಾಶತ್ರುಸಾಯಲ್ಕಡಂ ।
ಗಿದಪಂ ತಾಂ ಗಡ ಕೊಲ್ವುದಾರನಕಟೀಬೇಳಂಬಮಿನ್ನೇಕೆ ಸಾ
ಯದೊಡಂ ತೀರದೆ ಕಾಯಮುಂ ತೊಱೆಯಲಿನ್ನುಂ ರಾಜ್ಯದೊಳ್ಬಾಟ್ಟುವೇಂ॥೨೫

ಮುನಿಸಯ್ದುಂ ತೆಱದಿಂದಲಪ್ಪುದದಱೊಳ್ ಸ್ತ್ರೀಸಂಭವಂ ತಿಣ್ಣಮಾ
ಮುನಿಸಂ ತಂದನ ಕಂಠಪೀಠತಳದೊಳ್ತಂದಿಟ್ಟು ರಕ್ತಾಂಬುಮ ।
ಜ್ಜನಮಂ ಮಾಡಿಸಿ ಮಸ್ತಕಾಂಬುರುಹದಿಂದಂ ಪೂಜೆಗೆಯ್ದಾಂತೊಡಾ
ತನ ಕೂರ್ವಾಳ್ಕರವಾಳ್ದಲುಂತು ಮರವಾಳ್ವಾಬೂರ ಮೈಲಾರನಾ ॥ ೨೬

ವ॥ ಎಂದು ಕೊಕ್ಕರಿಸಿ ಮಾಣದೆ

ಏಱು ಬರೆಗೊಂಡ ಜೂದುಂ
ಗಾಱಿನವೊಲ್ ಲಗ್ಗೆಮಾಡಲೊಲ್ಲದೆ ಪಡೆಯಂ ।
ಸಾಱಿಸಿ ಮುಂದುಂ ಪಿಂಗುವ
ನೀಱೆಯವೊಲ್ ತೆಗೆಯವೇೞ್ದನಾವಸುಷೇಣಂ ॥ ೨೭

ವ॥ ಅಂತು ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ಬಾಳ್ವಲಮುಮೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮಗುೞ್ದುಬರ್ಪಾಗಳ್

ಬಿರುದಿನ ಕಾಳೆ ಬಾರಿಸುವ ಬೀರದ ಡಾಡೆ ತೆರಳ್ವ ಕೇತನೋ
ತ್ಕರದ ವಿಡಂಬವೊಲ್ಲನುಲಿತಪ್ಪ ಚತುರ್ಬಲದುರ್ವು ಕೂರ್ಪಿನಿಂ ।
ದುರಿವರಿವಸ್ತ್ರಶಸ್ತ್ರಕಿರಣಂ ವಸುಷೇಣನೊಳಾದುವೆಯ್ದೆ ಕೊ
ಕ್ಕರಿಕೆಗೆ ದುಃಖಿತೇ ಮನಸಿಸರ್ವಮಸಹ್ಯಮೆನಿಪ್ಪನೀತಿಯಂ ॥ ೨೮

ವ॥ ಅಂತು ನಿರ್ವೇಗಪರನಾಗಿ ಮಗುೞ್ದು ಬಂದಸ್ತಂಗತಪ್ರಭೆಯಂತೆ ನಿಜ ಮಂಡಲಮಂ ಪೊಕ್ಕು

ನಡುನಾಡ ತೀರ್ಥಮೆನಿಸ
ಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂ ।
ಬಿಡಿದು ನಿಜಕಟಕಮಂ ತಾಂ
ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ ॥ ೨೯

ಸಮಭಾಗಂ ಬರೆ ಹಸ್ತಿವಾಜಿಸಹಿತಂ ಭಂಡಾರಮುಂ ಪರ್ಚುಗೊಂ
ಡು ಮಗಂಗರ್ಧಮನಿತ್ತು ಚೈತ್ಯನಿವಹೋದ್ಯಾನಕ್ಕೆ ತಾಂ ಬಂದು ಧ ।

ರ್ಮಮನುದ್ಯೋಗಿಸೆ ಸಂಯಮೋಪಕರಣಕ್ಕರ್ಹತ್ವದಾರ್ಢ್ಯರ್ಜನ
ಕ್ಕೆ ಮನೋರಾಗದಿನಿತ್ತನಿತ್ತುಗಜವಾಜಿಸ್ತ್ರೀಸಮಾಜಂಗಳಂ ‖ ೩೦

ವ॥ ತದ್ಗಿರೀಂದ್ರವಿಶೇಷಕಮಪ್ಪ ಭುವನಭೂಷಣಜಿನಾಲಯಮಾದಿಯಾಗಿ

ಇವು ಘಟಿಕಾಸ್ಥಾನಂ ಮ
ತ್ತಿವು ತೀರ್ಥಸ್ಥಾನಮೆಂಬ ರೂಢಿಯ ಭಗವ ।
ದ್ಭವನಕ್ಕಲಂಘ್ಯಮಟಲುಂ
ತವೆ ಮುಕ್ಕೊಡೆಯೆತ್ತಿ ಬಿಟ್ಟನಾವಸುಷೇಣಂ ‖ ೩೧

(ಹರಿಣೀ)

ಪಲರುಮವನೀಪಾಲರ್ತಮ್ಮೊಳ್ಸಮಾನಸುಖಂಗಳಿಂ
ಬಳೆದ ಕೆಳೆಯರ್ದೀಕ್ಷಾಚಾರಕ್ಕೆ ಬಂದು[ರೆ]ಕೂಡೆ ತ ।
ನ್ನಳವು [ಮವರ್ಗಂ] ಸಾಕ್ಷೀಭೂತತ್ರಯಂ ವಸುಷೇಣನ
ಗ್ಗಳಿಪ ತಪಮಂ ಶ್ರೇಯೋ..ಮುಮುಕ್ಷುಸಮಕ್ಷದೊಳ್ ‖ ೩೨

ವ॥ ಅಂತಾನೃಪಾಲನೊಂದೆ ಮನದೊಳೆತ್ತಿಕೊಂಡ ತಪದೊಳೆರಡುಂ ಪರಿಗ್ರಹಮಂ ತೊಱೆದು ಮೂಱುಂ ಗುಪ್ತಿಯೊಳ್ನೆಱೆದು ನಾಲ್ಕುಂ ಕ್ರೋಧಾದಿಗಳನೊಕ್ಕಯ್ದುಂ ಸಮತೆಯೊಳ್ಪೊಕ್ಕು ಆಱುಂ ಕ್ರಿಯೆಗಳೊಳ್ನಿಟ್ಟೆವಟ್ಟೇೞುಂ ಭಯಂಗಳಂ ಬಿಟ್ಟೆಂಟುಂ ಮದಮನುಟಿದೊಂಬತ್ತುಂ ಕಷಾಯಮಂ ಕಳೆದು ಪತ್ತುಂ ಧರ್ಮದೊಳ್ನೆಱೆದು ಪನ್ನೊಂದು ಗುಣಸ್ಥಾನಮಂ ನೆಱೆದು ನೆಗಟ್ದ ಸಾಗಾರಧರ್ಮಮೂಲಮಾದ ಪನ್ನೆರಡುಂ ತಪೋಮಾರ್ಗದೊಳ್ ಪ್ರಾಯಶ್ಚಿತ್ತಂ ಮೊದಲಾದಾಭ್ಯಂತರತಪಮನಾಚರಿಸುತ್ತುಂ ಅನಶನಂ ಮೊದಲಾದ ಬಾಹ್ಯತಪಕ್ಕೆ ಪೊಕ್ಕೆಡೆಯೊಳ್ ಸಾಕಾರ ನಿರಾಕಾರ ಭೇದಮುಮಪ್ಪ ಮಾರ್ಗದ್ವಯಮನೆತ್ತಿಕೊಂಡು ಚಾಂದ್ರಾಯಣದೊಳತಂದ್ರನುಮವಮೋದರ್ಯದೊಳವಾರ್ಯನುಂ ಆಚಾಮ್ಲವರ್ಧನದೊಳನುವರ್ಧನನುಂ ಸಿಂಹನಿಃಕ್ರೀಡಿತದೊಳ್ಪೀಡಿತೇಂದ್ರಿಯನುಮಾಗಿ

ಗಿಡಿಗಿಡಿಜಂತ್ರಮಿದೆನೆ ತ
ನ್ನೊಡಲುಂ ಉನ್ಮೀಲನೇತ್ರಮೆನೆ ತನ್ನ ಮೊಗಂ ।
ಗುಡಿಯುಂ ತಪದಿಂ ಕ್ಷಪಿಯಿಸಿ
ಕಡುಬಡತನದಂದಮಾದನಾ ಮುನಿಮುಖ್ಯಂ ‖ ೩೩

ಲಲನಾವಿಯೋಗಹೇತು
ಚ್ಛಲವೆರ್ದೆಯೊಳ್ನಟ್ಟ ಶೂಲದಂತಿರೆ ತಪದಿಂ ।
ಗೆಲೆ ಜೀರ್ಣಮಾಗೆ ತನು ಕೂ
ರಲಗಿನ ಪಱಿದೊವಲೊಳಿರ್ದನಂತಾ ಮುನಿಪಂ ॥ ೩೪

ವ॥ ಅಂತು ತಪಸ್ತಪ್ತಶರೀರನಾಗಿ ನಿಜಾಯುರವಸಾನದೊಳೊಂದು ತಿಂಗಳ್ ವರಂ ಮರುಮಂಡಲದಂತಿರನಶನಕ್ಷೇತ್ರನಾಗಿ ನೋಂತು ಕಡೆಯೊಳೆನ್ನ ತಪದ ಫಲಮುಂಟಪ್ಪೊಡಾನನ್ಯಜನ್ಮದೊಳಾರ್ಗಮಜೇಯನುಮತಿಸುಭಗರೂಪ ಸೌಂದರ್ಯನುಮಶೇಷಧರಾವಲ್ಲಭಪ್ಯಾಯನುಮಾಗಿ ಪುಟ್ಟುಪನಕ್ಕೆಂದು ನಿಶ್ಚಯಿಸಿ



ತೋಱಿ ನಟಿಯಿಸುವ ಜೋಹಮ
ನೇಱಿಸಿ ಕೊಳದಿರ್ದ ಜೋಹದುದ್ದೆಸದಿಂದೆಂ ।
ಜಾಱಿಸುವಂತಿರೆ ತಪದಿಂ
ತಾಱಿದ ತನುವಂ ನಿಧಾನದಿಂ ಮುಂಬಿಟ್ಟಂ ॥ ೩೫

ವ॥ ಅಂತು ಮುಡುಪಿ

ಕಟ್ಟಿತನಾರ್ಗಂ ಕಳೆಯ
ಲ್ಕೆಟ್ಟನೆ ಬಾರದವೊಲಂತು ನೆಗಟ್ದುಗ್ರತಪಂ ।
ಕಟ್ಟಿದ ಪುಣ್ಯದ ಫಳದಿಂ
ಪುಟ್ಟಿ ಸಹಸ್ರಾರಕಲ್ಪದೊಳ್ಸುರನಾದಂ ॥ ೩೬

ಮದನೋದ್ದೀಪನಪಿಂಡದಿಂ ಕಡೆದರೋ ಕಣ್ಣಿಟ್ಟರೋ ಚಂದ್ರಬಿಂ
ಬದ ಸೌಂದರ್ಯದೆ ಬಣ್ಣಮಿಟ್ಟರೊ ವಸಂತಶ್ರೀವನಾಮೋದಸಾ ।
ರದಿನೆಂಬಂತಿರೆ ಕಂಪು ಸೊಂಪು ಸೊಬಗಿಂಪಂ ಪೆತ್ತ ವೃಂದಾರಕಂ
ಪದಿನೆಂಟಬ್ಧಿಮಿತಾಯು ನಾಲ್ಕುವೊಳನುದ್ದಂ ಕೂಡೆ ಕಣ್ಗೊಪ್ಪಿದಂ ॥ ೩೭

ತೆಱೆದುವು ಮುನ್ನಮಿಕ್ಕಿದ ವಿಮಾನದ ಮುಚ್ಚುಳಲಂಪಿನಿಂದೆ ಬಂ
ದೆಱಗಿದರಪ್ಸರಪ್ರಮದೆಯರ್ಪರಿಚಾರಮಹತ್ತರಾಮರರ್ ।
ಪೊಱಗೊಳಗೆನ್ನದೋಲಯಿಸಿದರ್ದಶಭೇದದ ಕಲ್ಪವೃಕ್ಷಮಾ
ಗಱಿಕೆಯನೀಯಲಾಟಿಸಿದುದಾವಸುಷೇಣಚರಾಮರೇಂದ್ರನಾ ॥ ೩೮

ಪದಿನೆಣ್ಛಾಸಿರವರ್ಷಮಾದೊಡುಣಿಸಂ ಭಾವಿಪ್ಪನೊಂಬತ್ತು ಮಾ
ಸದಿನುಚ್ಛ್ವಸಿಸುವಂ ಶ್ರವಸ್ಸುಭಗಲೀಲಾಲಾಪಸಮ್ಮಿಶ್ರದಿಂ ।
ಮದನೋನ್ಮಾದಸುಖಂಗಳಿಂದೆ ನಲಿವಂ ವಾಚಪ್ರವೀಚಾರನಾ
ತ್ರಿದಸಾಮಂ ಸವಿಳಾಸದೊಳ್ತಣಿವ ರೂವಾದಂ[1] ಸಹಸ್ರಾರಜಂ ॥ ೩೯

ನವರತ್ನವಿಮಾನಚ್ಛವಿ
ದಿವಮಂ ಬಾಸಣಿಸಿ ಧವಳತನುರುಚಿಯಿಂ ವಾ ।
ಸವಚಾಪದ ಮಂಡಪದೊಳ್
ನವೇಂದುವಿರ್ಪಂತಿರಿರ್ದನಾದಿವಿಜೇಂದ್ರಂ ॥ ೪೦

ಪಾಡುವ ಸುರಗಣಿಕಾಜನ
ಮಾಡುವ ದೇವಾಂಗನಾಜನಂ ಭಾಜನೆಯಂ ।
ಮಾಡುವಮರೀಜನಂ ತೀಂ
ಕಾಡಿಸುವುದು ರಾಗರಸದೊಳಮರನ ಸಭೆಯಂ ॥ ೪೧

ವ॥ ಅಂತಾದೇವಂ ದೇವಲೋಕಸುಖಾನುಭವಸುಧಾಂಬುಧಿಯೊಳೋಲಾಡುತ್ತುಮಿರ್ದಲ್ಲಿ ತನ್ನಿಂ ಮುನ್ನಂ ಪ್ರತೀಂದ್ರನಾಗಿ ಪುಟ್ಟಿರ್ದ ಮಹಾಬಲಚರಾಮರೇಂದ್ರಂ ಪ್ರಾಕೃತಜನ್ಮದೊಳ್ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ವತ್ಸಕಾವತೀವಿಷಯದೊಳಾನಂದಪುರಮನಾಳ್ವ ಮಹಾಬಳನೆಂಬ ಮಹೀವಳಯವಲ್ಲಭನಾಗಿರ್ದು

ರಸೆಗೆಲ್ಲಂ ಶ್ರೀಪ್ರಭಾಪಾಲನ ಜಿನರ ಸಭಾನವ್ಯದಿವ್ಯಾಂಬುದಂ ಧ
ರ್ಮಸುಧಾಂಭೋವರ್ಷಮಂ ಮಾಣದೆ ಕಱೆವೆಡೆಯೊಳ್ ತನ್ನಹೃಚ್ಚಾತಕಂ ಸೇ।

1 ಕ. ರೂವಾರಂ.

ವಿಸೆ ಸಮ್ಯಕ್ತ್ವಮಂ ನಿರ್ಮಲಘನರಸಮಂ ನಿರ್ಭರಾನಂದದಿಂ ತೋ
ಱಿಸಿ ಕೊಂಡುತ್ತುಂಗಭೋಗಾವನಿಚರಣತೃಷಾಕ್ರೀಡೆಯಿಂ ಪೀಡೆಯಿಂದಂ॥ ೪೨

ವ॥ ಅಂತು ತಿಳಿದ ತತ್ವವಿಚಾರಂ ಸಂಸಾರಮನಸಾರಂಮಾಡೆ ನಿರ್ವೇಗಪರನಾಗಿ

(ಸ್ವಾಗತ)

ಈತನೆಂದು ತೊಱೆದಂ ಭವದಿಂದಂ
ಜಾತರೂಪಧರನಾದನೆನುತ್ತುಂ ।
ಭೂತಳಂ ನುಡಿಯೆ ನಿಶ್ಚಲಚಿತ್ತಂ
ವೀತರಾಗಮುನಿಮಾರ್ಗಮನಾಂತಂ ॥ ೪೩

ವ॥ ಅಂತು ಶೀಲಗುಣವ್ರತಾಚಾರಂಗಳುತ್ತರೋತ್ತರಮಾಗೆ ಸಿಂಹನಿಃಕ್ರೀಡಿತಾದ್ಯುಗ್ರೋಗ್ರತಪದೊಳ್ನೆಗಱ್ದು ಕಾಲಾಂತರದೊಳೊಂದು ತಿಂಗಳ್ ಸನ್ಯಸನ ವಿಧಿಯಿಂ ದಂಡಿತಕರಣನಾಗಿ ಪಂಡಿತಮರಣದಿಂ ಮುಡುಪಿದಂತಿರಾಕಲ್ಪದೊಳುದಯಿಸಿರ್ದನಾಮುಹಾಬಳಚರೇಂದ್ರನುಮಿತರೇತರಪ್ರೀತಿಯಿಂ ಸಮನಿಸಿದ ಸೌಹಾರ್ದದೊಳ್ ದೇವಲೋಕಶೇಖರರಾಗಿರ್ದರ್. ಇತ್ತ ಜಂಬೂದ್ವೀಪದ ಭರತಕ್ಷೇತ್ರದೊಳಖಿಳಸುಖಮುಖದ್ವಾರಂ ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆಸ [1] ಗೊಂಡಂತೆ ಮೆಱೆದಿರ್ಪುದಲ್ಲಿ

ಸುರರಾಜರ್ಪದಿನಾಱು ಕಲ್ಪದವರ್ಗಂ ಸ್ತ್ರೀರತ್ನಮಂ ಸಾರ್ಚುತಿ
ರ್ಪಿರವಿಂ ಮನ್ಮಥಸೃಷ್ಟಿಯಂತೆಸೆವ ಮಾಹೇಂದ್ರಾಗ್ರದಿಂ ಬಂದ ನಿ ।
ರ್ಜರನಾನಿರ್ಜರೆಯರ್ಜಯಾಪತಿಯುಮಂತಾಸ್ನೀತೆಯುಂ ಪೆಂಡಿರಾ
ಗಿರೆ ತೇಜಃಪ್ರಚುರಪ್ರಭಂ ಧರೆಯನಾಳ್ದಂ ಸಂದ ಸೋಮಪ್ರಭಂ ॥ ೪೪

ತನುವಯ್ಯುತ್ತೊಂದು ಬಿಲ್ಲುದ್ದದ ತನು ಬರೆಯಲ್ಬರ್ಚಿಸಲ್ಬಾರದಾರ್ಗಂ
ತನಿಬಂದಂ ನಾಲ್ವತೆಣ್ಬಾಸಿರಬರಿಸಮದಂತೇಕೆನಲ್ಬಾರದಾಭೂ ।
ಪನ ಶೌರ್ಯಾಟೋಪಮಾಭೂಪನ ಭುವನಜನೋದ್ಧಾರಕತ್ಯಾಗಮಾಭೂ
ಪನ ಸತ್ಯೋದಂತಮಾಭೂಪನ ಸಕಲಗುಣಂ ಬಣ್ಣಿಸಲ್ಬಾರದಾರ್ಗಂ ॥ ೪೫

---

1 ಗ. ಸೇಸೆ.

ವಿತತೋರಸ್ಸ್ಥಳವಕ್ತ್ರಪಂಕರುಹದೊಳ್ತಮ್ಮಿರ್ವರುಂ ಶ್ರೀಸರ
ಸ್ವತಿಗಳ್ಗಳವಟ್ಟ ವೀರವಿಜಯಶ್ರೀಭಾಮೆಯರ್ಸಂದ ದೋ ।
ರ್ದ್ವಿತಯಸ್ತಂಭದೊಳೆಂಬಿನಂ ಮೆಱೆದು ತಮ್ಮೊಂದಾನುಕೂಲ್ಯಂ ಜಯಾ
ಪತಿಯುಂ ಸೀತೆಯುಮಿರ್ಪಿನಂ ಸೊಬಗನಾಳ್ದಂ ತಾಳ್ದಿ ಸೋಮಪ್ರಭಂ ॥ ೪೬

ಎರಡುಂ ಪಕ್ಕದೊಳೊಪ್ಪೆ ಕಲ್ಪಲತೆಗಳ್ಕೈಕೊಂಡ ಮಂದಾರಭೂ
ಮಿರುಹಂ ತಾನೆನೆ ಪೂರ್ವಜನ್ಮಜನಿತಸ್ನೇಹಂಗಳಿಂ ಬಂದ ಷ ।
ಟ್ಚರಣಾಲೋಲವಿನೀಲಕುಂತಳೆಯರಿರ್ವರ್ಲೀಲೆಯಿಂದಪ್ಪಿ ಮೂ
ರ್ತಿಯುಮಂ ತಾಳ್ದಿದ ಕಾಮದೇವನಲರ್ವಿಲ್ಲಂತಿರ್ಪನಾಭೂಭುಜಂ ॥ ೪೭

ವ॥ ಅಪ್ರಚಂಡಮಂಡಲವಲ್ಲಭನಾವಲ್ಲಭಾದ್ವಿತಯಸಮೇತಂ ನಾಕಲೋಕಾನೇಕಸಖಮೆ ಬೆಂಬಟಿಬಂದಂತಿರಾದ ರಾಜ್ಯಸುಖದೊಳಿಷ್ಟವಿಷಯಕಾಮಸುಖಭೋಗಸಂಪದಮನನುಭವಿಸುತ್ತುಮಿರೆಯಿರೆ

ಏತೆಱಧಿನೆಂದುಮುಱಿಯೆಂ
ಸೀತಾದೇವಿಗೆ ತನೂಜದೋಹಳಚಿಂತಾ ।
ಪಾತಂ ತಂದುದು ಘರ್ಷಿತ
ಜಾತೀಮಾಳಿಕೆಯ ದೊರೆಗೆ ತನ್ಮಾಳಿಕೆಯಂ ॥ ೪೮

ಪದೆದಮರ್ದಪ್ಪಿಕೊಂಡು ಬಿಗಿಯಪ್ಪಿ ತನೂಜನ ಮೆಯ್ಯ ಧೂಳಿ ಪ
ತ್ತದ ನಳಿತೋಳ್ಗಳೇಕೆ ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ ।
ಪುದಿಯದುರೋಜಮೇಕೆ ಪರಿಚುಂಬಿಸೆ ಕಂದನ ಕೈದೊಡಂಕೆ ಸೂ
ಸದ ಕುರುಳೇಕೆ ಬೇಱೆ ಪೊಱೆಯೇಕಿವಱಿಂ ಕುಲವೆಣ್ಗೆ ಲೋಕದೊಳ್ ॥ ೪೯

ಮಗನಂ ತೊಟ್ಟಿಲೊಳಿಲ್ಬು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ನಗೆಯಿಂ ಮುದ್ದುಮೊಗಂ ತುಳುಂಕೆ ಪರಸುತ್ತುಂ ನೋಡಿ ಬಾ ದೇವ ಬಾ ।
ಜಗತೀವಲ್ಲಭ ಬಾರ ಮಾಣಿಕವೆ ಬಾರೆನ್ನಾನೆಯೆಂದೆತ್ತಿ ಮೆ
ಯ್ದಗೆವನ್ನಂ ಮೊಲೆಯೂಡಿ ತೂಪಿಱಿವ ಪುಣ್ಯಂ ನೋನದಳ್ಗಕ್ಕುಮೇ ॥ ೫೦

ಅರಸನ ಕರತಳಲೀಲಾ
ಸರೋಜಮಂ ಬೇಡಿ ಕುಡದೊಡೀಸಿ ಕುಡಲ್ಕಾ ।

ತುರಿಸಿ ಪಿಡಿದೆನ್ನ ತೋಳಂ
ಬರೆತೆಗೆವ ಕುಮಾರನೆಂದು ತೊಡೆಯೇಱದಪಂ ॥ ೫೧

ಮೊಲೆಯುಣುತುಮುತ್ತರಿಯಾಂ
ಚಲದಿಂದೆ ಮುಸುಂಕಿಕೊಂಡು ಬೂಜೂಚೆಂದ |
ಗ್ಗಲಿಸಿದೊಡಾನಂಜುವೆನ
ವ್ವಲವ್ವಲೆನೆ ನಗುವ ಮಗನನೆಂದೆತ್ತಿದಪೆಂ ॥ ೫೨

ಉದಯಾದ್ರಿಶಿಖರದೊಳ್ಬಾ
ಲದಿವಾಕರನಂತೆ ತೋರ್ಪನಂಕದೊಳಿಭಕುಂ |
ಭದ ಮೇಲೆ ಬರ್ಪನಂ ಪರಿ
ದಿದಿರ್ಗೊಂಡಣುಗನನದೆಂತು ನಿವಳಿಸಿದಪೆನೋ ॥ ೫೩

ಅರಸನುಮಾನುಂ ಕೈಗೊ
ಟ್ಟಿರೆ ದಟ್ಟಡಿಯಿಡುತೆ ಮಣಿಕುಟ್ಟಿಮದೊಳ್ |
ಬರೆ ಪಿಂದೆ ನಿಲಿಸಲೊಲ್ಲದೆ
ಮುರಿದೆತ್ತಿಸಿಕೊಳ್ವ ಕಂದನೆಂದಾದಪನೋ ॥ ೫೪

ವ॥ ಎಂದಿಂತನಂತಚಿಂತಾಕ್ಷುಭಿತಸಂಕಲ್ಪಶರಧಿಕಲ್ಲೋಲತರಂಗಿತಾಂತೆಯುಂತಾಗಿರ್ದ ವಲ್ಲಭೆಯುಲ್ಲಿಗರಸಂ ಬಂದು ಬಾಷ್ಪೋದಬಿಂದುಸಂತಾನದಂತುರಿತಪಕ್ಷ್ಮಾವಳೀವಿಲೋಚನಯುಗಳೆಯುಂ, ಕವೋಷ್ಣನಿಶ್ವಸನಸಂತಾಪಸಂತಪ್ಯಮಾನಪಾಟಳಪ್ರಸೂನಾಯತಪಲ್ಲವಾಧರೆಯುಂ, ಚರಣನಖದರ್ಪಣಪ್ರವೇಕ್ಷ್ಯಮಾಣದಿವಸಪಂಕಜಾತೆಯುಂ ಭೋಂಕೆನೆ ಕಂಡತಿಚಕಿತಚಿತ್ತನಾಗಿ ಮೆಲ್ಲನೆ ಪೊರ್ದಿತಳ್ಕಿಸಿಕೊಂಡು ಕಂಬನಿಗಳಂ ತೊಡೆಯುತ್ತುಮಾಗಳಿಂತೆಂದಂ

ದೊರೆವೆತ್ತಿರ್ಪುದು ನಿಮ್ಮ ನೆಣ್ಪು ಸಪತಿತ್ವಾಭಾವದಿಂದೊರ್ವರೊ
ರ್ವರಜಾತಕ್ಷುಧೆಗೊಂಡು ನಿದ್ರೆಗೊಱಗುತ್ತಿರ್ದಪ್ಪಿರಂತಿಲ್ಲ ಮ |
ಚ್ಚರಮಾಂ ನಿಮ್ಮವಿಲೋಕಮಾಗಿ ನಡೆಯುತ್ತಿರ್ದಪ್ಪಿನಂತಿಲ್ಲನಾ
ದರಮಿಂತೀಪರಿಖೇದಮೇತೆಱದಿನಾಯ್ತುತ್ತಾನಪೀನಸ್ತನೀ ॥ ೫೫

ನೀನಿಂತು ನಿರ್ನಿಮಿತ್ತ
ಗ್ಲಾನಿನಿವಾಫುದೊಳೆ ಮಱುಗಿ ಬಱಿದಾದೊಡೆ ಮ ।
ನ್ಮಾನಸಮರಾಳಲೀಲೆಗ
ದೇನಾಸೆ ಸರೋಜಕುಮುದದಳಮುಖನಯನೇ ॥ ೫೬

ಮೃಗಮದತಿಲಕಕಲಂಕಂ
ಮೊಗಸಿದುದಿಲ್ಲೇಕೆ ನಿಟಿಲಮೃಗಧರಖಂಡ ।
ಕ್ಕೊಗಸುಗಮದಿಲ್ಲದೇಕೆಲೆ
ಮೃಗಲೋಚನೆ ಬಂದುದಳಕರಾಹುಗ್ರಹಣಂ ॥ ೫೭

ವ॥ ಅದಲ್ಲದೆಯುಮೀಗಳ್

ಕುರುಳಮದಾಳಿಮಾಳಿಕೆಗದೇಕೊಳಗಾಗವು ಚಿನ್ನಪೂ ಮುಖಾಂ
ಬರುಹದಿನೇಕೆ ಸೂಸದು ಲತಾಂಗಿ ವಚೋಮಕರಂದಮಂಗುಲಿ ।
ಸ್ಮರಶರಮಂಗುಲೀಯಮಣಿರಶ್ಮಿಗಳಿಂ ಗಱಿಗಟ್ಟವೇಕೆ ಪೀ
ವರಕುಚಕೋಕಮೇಕೆಳಸಲೊಲ್ಲವು ಹಾರಮೃಣಾಳನಾಳಮಂ ॥ ೫೮

ಬಾಳೆ ನೆಲೆವೊಲೆಗಳಂ ನೀ
ನೇಳಿಸಿದೆಯಿದೇಕಿವಕ್ಕೆ ತಾಮುಮ್ಮಳದಿಂ ।
ದಾಳೋಕಮೆಂಬ ಪೊಳೆವೆಳೆ
ವಾಳೆಗಳಿಕ್ಕಿದಪುವಶ್ರುಮುಕ್ತಾಫಲಮಂ ॥ ೫೯

ಕರಪಲ್ಲವಶಯನೀಯಂ
ದೊರೆಕೊಂಡುದಿದೆಂಬವೊಲ್ ಕಪೋಳಶ್ರೀಗೀ ।
ವಿರಹವ್ಯಥೆಯಂ ತಂದುದು
ತರುಣಿಯಿದೇಂ ಸುಭಗಮಕರಿಕಾಪತ್ರಚಯಂ ॥ ೬೦

ವ॥ ಎಂದು ನೊಂದು ಮನಮಂ ಮುಂತಿಟ್ಟು ಬಹುಪ್ರಕಾರದಿಂ

ನುಡಿಯಿಸಿದೊಡೆ ಮತ್ತನಿಯು
ಳ್ನುಡಿಯದೆ ಮಱುಮಾತನಶ್ರುವಿಹಿತವಿಲೋಕಂ ।

ಜಡಚರಿತಕುಮುದದಳವೆನೆ
ಕಡೆಗಣ್ಣಿಂ ನೋಡಿದಳ್ ವಯಸ್ಯೆಯ ಮುಖಮಂ ॥ ೬೧

ವ॥ ಅಂತು ನೋಡಿದ ಕಣ್ಣಱದಾಕಾಂತೆ ಮಹೀಕಾಂತನೊಳ್ ದೇವರ ದಯೆಯಿಂ ದೇವಿಯುಗರ್ಭವುದಱೊಳಂ ಕೊಱತೆಯಿಲ್ಲ ನಿನ್ನೆ ಬಂದ ನಂದೀಶ್ವರಾಷ್ಟಮಿಯೊಳಷ್ಟಮಲೋಕಚೂಡಾಮಣಿಯ ವಂದನಾಭಿಷವಣಪೂಜಾನಿಮಿತ್ತಂ ಚಾರಣರವತಾರಂ ಮಹೀಧರಕ್ಕೆ ನಿಮ್ಮೊಡನೆ ಬಿಜಯಂಗೆಯ್ದು ಮಗುಳ್ವಾಗಳಾಂಬೆರಸು ಪುಷ್ಪರಥಾರೂಢೆಯಾಗಿ ತದ್ಧರಾಧರದ ಪರಿಸರಪ್ರದೇಶದೊಳ್ ಮರಾಳಿಮರಾಳ ಶಿಖಿನಿಮಯೂರ ಹರಿಣಿಹರಿಣ ಮಹಿಷಿಲುಲಾಯ ಕರಿಣಿಕರೀಂದ್ರ ಸಿಂಹಿಮೃಗೇಂದ್ರ ಕ್ರೀಡೆಗಳಂ ನೋಡುತ್ತುಂ ಬರೆವರೆ

ಕಡವಾಯಂ ಬಿರ್ಚಿ ಬೆನ್ನಂ ಕುಸಿದು ನೆಗಪಿ ವಾಳಾಗ್ರಮಂ ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಕಕ್ಕುಱಿಸಿ ಮುಱುಕದಿಂದೀಂಬ ಸಿಂಹಿಕಿಶೋರಂ ।
ನಡುಸೂಲೊಳ್ಸರ್ಕಿ ಕಣ್ಣಂ ತೆಱೆದಿಭಪತಿಯುಂ ತಾರಲೊಳ್ಕಂಡು ಕಾಯ್ಪಿಂ
ನಡುಪಾಯ್ದ್ದಾತಾಯ್ಗೆ ದುಃಖಪ್ರಸವಸಮಯದೊಳ್ತಂದುದಂತೊಂದಲಂಪಂ॥೬೨

ವ॥ ಅದಂ ಕಂಡು ನೀಡುಮಚ್ಚರಿವಟ್ಟು ನೋಡಿ ಮಾಣದೆನ್ನಂ ನೂಂಕಿ ತೋಱಿ ಕೌತುಕಂಬಟ್ಟು ತಲೆಯಂ ತೂಗಿ

ಪಡೆವೊಡೆ ಸಿಂಹಿವೊಲ್ಪಡೆವುದಾತ್ಮಜರಂ ಬಱಿದೇಕೆ ಮಕ್ಕಳಂ
ಪಡೆದಪೆನೆಂದು ಹಿಗ್ಗುವರೊ ಪುಟ್ಟದ ಮುನ್ನಮೆ ಜಾತಿವೈರದಿಂ ।
ಸಿಡಿಲೆಱಪಂದದಿಂದೆಱಗಿದಪ್ಪುದು ಹಸ್ತಿಗೆ ಶತ್ರುಸಿಂಹನಂ
ಪೊಡವಿಗಧೀಶನಂ ಪಡೆಯದಾಕೆಯ ಜೀವನಮಲ್ತೆ ನಿಷ್ಫಲಂ ॥ ೬೩

ಇಂತೆನ್ನ ಕೂಡೆ ನುಡಿದಳ್
ದಂತಾವಲಗಮನೆ ಬಂದು ರಾಜಾಲಯದೊಳ್ ।
ಚಿಂತಾಸಹಚರಿಯೊಡನೇ
ಕಾಂತಮನಾಡುತ್ತುಮಿರ್ಪಳಾನದನಱಿವೆಂ ॥ ೬೪

ವ॥ ಎಂದು ನುಡಿದ ಕೆಳದಿಯ ಮಾತು ಭೂತಳಾಧಿಪನ ಚೇತೋಭೂಮಿಯೊಳ್ ಪುತ್ರಲಾಭೋದ್ಯೋಗಬೀಜಾವಾಪಮನೊಡರ್ಚಿ ಬಿಚ್ಚನೆ ಸುಯ್ದು ಘನರವಹಿತಹೃದಯಂ ವಲ್ಲಭೆಯನಿಂತೆಂದಂ

ಅದು ಸುಕೃತಾನುರೂಪಮದು ನಮ್ಮ ಮನೋರಥದಂತೆ ತಿರ್ದಿ ಬ
ರ್ಪುದೆ ದೊರೆಕೊಳ್ವುದಕ್ಕೆ ದೊರೆಕೊಳ್ಳದುದಕ್ಕಧಿಕರ್ವಿವೇಕಿಗ ।
ಳ್ಪದೆವರೆ ದೇವಿ ಪ್ರಾಣ ಪುನದುಂಮುಟಪುಂ ಭವದೀಯದಾನಧ
ರ್ಮದ ಸುದೃಢವ್ರತಾಚರಣವೃತ್ತಿಗೆ ಕೂಡದುದೇಂ ಮನೋರಥಂ ॥ ೭೫

ವ॥ ಅದಲ್ಲದೆಯುಮಿಾಗಳ್

ಅವಿರಳಪಕ್ಷ್ಮನೇತ್ರೆ ನಿನಗೀದಿವಸಂ ಮೊದಲಾಗಿ ಮುಂದೆ ಸಂ
ಭವಿಸುವ ಸತ್ಫಲೋದಯನಿಮಿತ್ತಮನಿಲ್ಲಿ ಬರುತ್ತೆ ಕಂಡೆನೀ ।
ಭವನದ ರತ್ನಮಂಡಪದ ಶಾಂತವಿಭಾಗದೊಳಿರ್ದು ತತ್ತ್ರಿಯಿ
ಕ್ಕುವ ಗೃಹಕೋಕಿಲಾಂಗನೆ ನಿಜಪ್ರಿಯನಂ ಕರೆಯುತ್ತುಮಿರ್ದುದಂ ॥ ೭೬

ವ॥ ಎಂದು ನುಡಿದ ಚಿತ್ತವಲ್ಲಭನ ಸಂತರ್ಪಣ ವಚನಮೆಂಬೆರಲ ತೀಟದಿಂ ಮನದುಮ್ಮಟಮೆಂಬ ಘರ್ಮೋದ್ರೇಕಮುಂ ಘರ್ಮನಾಜಿಸೆ ಕಣ್ಮಲರೆಂಬ ಕಮಲದೊಳಾನಂದಾಶ್ರುಬಿಂದುಮಕರಂದಮುಂ ಸಂಧಿಸಿಯನಂತರಮಾ ಪಲ್ಲವ ಪಾದಯುಗಳೆಯಲ್ಲಿಂ ತಳರ್ದು ಮಾಡದ ಬಹಿರ್ವಣಕ್ರೀಡಾಸರೋವರದೊಳೇಕ ಕ್ಷಣಂ ತಡೆದು ಕಂಜ ಕುಬ್ಜ ವಾಮನ ಕಿರಾತ ವಾರವನಿತಾಸಹಚರೀಜನ ಮನತಿದೂರಪರೀತರಾಗಿ ಬರೆ

ಪರಮಪ್ರಸಾದಿತಚೇಟಿಕಾಕರಸ್ಕಂಧಾವಲಂಬಿತವಾಮಹಸ್ತಪಲ್ಲವೆಯುಂ, ಭ್ರೂಲತಾಸ್ಪರ್ಧಿನೀಲತಮಾಲಶಲಾಕಾಂದೋಳಿತತದಿತರಕರಸಿಜೆಯುಮಾಗಿ ವಿಳಾಸದಿಂ ನಡೆತರ್ಪಲ್ಲಿ

ಬರುತುಂ ಕೈಗೊಟ್ಟಳಂ ಮುಟ್ಟಿದೆಯೆನೆ ನಗುತುಂ ಚೇಟಿಯರ್ಸೋವಿ ದಲ್ಲಂ
ದರಹಾಸಂ ದೇವಿಗಾಗುತ್ತಿರೆ ಕೆಳರ್ದಳುರ್ದು ಪ್ರಸ್ಫುರದ್ವೇತ್ರಹಸ್ತೋ ।
ದ್ಧರಣಂ ಧೂಕಾರಗಾಳಿಪ್ರದರವಮುಖರಂ ಲುಂಭಿತಶ್ಮಶ್ರುಕೂರ್ಚಾ೦
ತರಲೋಮಂ ದಷ್ಟದಂತಂ ಧ್ವನಿವಿಧೃತಮುಖಂ ಕಂಪಿತಾಶೇಷಗಾತ್ರಂ ॥ ೭೭

ವ॥ ಆ ವೃದ್ಧಕಂಚುಕಿಯ ರೋಷಾವೇಶಂ ಪ್ರಾಣಪ್ರಿಯನ

ತನಿರಸದಿಂಪು ಕಂಪಮರೆ ಮಾಣಿಕದೊಳ್ಕತಖಂಡಮಾಗೆ ಮು
ತ್ತಿನ ಪುಡಿಯುಂ ಪೊರಳ್ಚಿ ಪೊಸಪೊಂದಗಡಂ ತಱದಿಕ್ಕಿದಂತೆ ತೋ ।

ರ್ಪಿನಿಯುನ ಬಾಯ ಕರ್ಪುರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದ
ಳ್ತನುಲತೆ ಕೊಂಕೆ ಪುಷ್ಪವತಿ ಲಜ್ಜೆಯ ಪಜ್ಜೆ ತೊಡಂಕಿ ಕೊಂಕಿನೊಳ್ ॥ ೬೮

ವ॥ ಅಂತು ನಲ್ಲಳಾಂತ ಪಲ್ಲವಪಾಣಿತಳದೊಳ್ ಮಂದಸ್ಮಿತಪಲ್ಲವ ಚಂದನರಸಾಭ್ಯುಕ್ಷಣಮುಂ ಮುನ್ನಮಾಗಿಸೆ ಬಟಿಕ್ಕೆ

ಅನುರಾಗರಸಂ ತಾಂಬೂ
ಲನಿಬದ್ಧರಸಕ್ಕೆ ಕುಡೆ ಸುಧಾರಸಪರಿಷೇ
ಚನಮುಂ ಸುತಜನ್ಮಶ್ರೀ
ವನಿತೆಗೆ ಸೇಸಿಕ್ಕುವಂತಿರಿಕ್ಕಿದನರಸಂ ॥ ೬೯

ವ॥ ಅಂತು ಕಂಡು ಶುಭನಿಮಿತ್ತಕ್ಕೆ ಋತುಸಮಯಮೆ ನಿದರ್ಶನಮೆಂದು ಸಂತಸದಿನಿರ್ಪಿನಮಾಚತುರಕಲಭಾಷಿಣಿ ಚತುರ್ಥದಿನದೊಳ್ ಮಂಗಳ ಮಜ್ಜನಪವಿತ್ರೀಭೂತಲತಿಕೆಯುಂ ಧವಳಪ್ರಾಸಾದನದಿಮುಲ್ಲಾಸವಿಲಾಸೆಯು ಮಾಗಿ ಪಾಲ್ಗಡಲ ತೆರೆಯೊಳಗೆ ಮುಟುಂಗಿ ನೆಗೆದ ಚಂದ್ರಕಳಾಲಕ್ಷ್ಮಿಶಾರದ ನೀರದಂ ಪದವನೇಱುವಂತೆ ಸೆಜ್ಜೆಯುಜ್ಜ್ವಲಿಪ ದವಳಾರಮನೇಱಿ ನಿಜವಲ್ಲಭನ ಸೂಳ್ಗೆವಂದು ಸುರತಸುಖಯಾಮಿನೀವಿರಾಮಸಮಯದೊಳ್

ಕಳಶಂ ಕನ್ನಡಿ ಬಾಸಿಗಂ ತಿಳಿಗೊಳಂ ಸಿಂಹಾಸನಂ ಚಾಮರಂ
ಕಳಭಂ ಪೂರ್ಣಸುಧಾಂಶು ಕೇಸರಿ ಗವೇಂದ್ರಂ ಭಾನು ರತ್ನಾಕರಂ ।
ಬೆಳಿಗೆಯ್ಬೆಳ್ಗೊಡೆ ಲಕ್ಷ್ಮಿ ರತ್ನತತಿಯೆಂದೊಪ್ಪಿರ್ದುವಂ ಸೀತೆ ಕಂ
ಡಳಿರುಳ್ಪಿಂಗಲೊಡರ್ಚಿ ಷೋಡಶಶುಭಸ್ವಪ್ನಂಗಳಂ ಮಂಗಳಂ ॥ ೭೦

ವ॥ ಅಂತು ಕಂಡ ಕನಸುಗಳನಾಸೀತಾದೇವಿ ನಿಜಕಾಮಪ್ರೇಮಭೂಮಿ ಯಪ್ಪ ಸೋಮಪ್ರಭಮಹಾರಾಜಂಗೆ ಪೇೞ್ವುದುಮಾನೃಪೇಂದ್ರಂ ಪರಮಾನಂದ ಸಂದರ್ಶಿತಹೃದಯನಾಗುತ್ತುಮವಱ ಫಲಮನಿಂತೆಂದು ನುಡಿದಂ

ಪರಮಫಲಪ್ರದಮಿಂತಿವು
ಸರಸಿಜಮುಖಿ ನಿನ್ನಗರ್ಭದೊಳ್ಪುಟ್ಟಿದಪಂ ।
ಪುರುಷೋತ್ತಮಂ ಶಲಾಕಾ
ಪುರುಷಂ ರಿಪುದನುಜಮರ್ದನಂ ಚಕ್ರಧರಂ ॥ ೭೧

ವ॥ ಎಂದು ನುಡಿದ ಚಿತ್ತಪ್ರಿಯನ ಪರಮಪ್ರಮೋದದಿಂ ತನ್ನ ನಿಜ ಸ್ವಾಂತದೊಳ್ನೆಲಸೆ

ಪದಪಿಂ ಬಂದು ಜಯಾವತೀಜಠರದೊಳ್ಮುನ್ನಂ ಸಹಸ್ರಾರಕ
ಲ್ಪದೊಳೊಪ್ಪಿರ್ದಮರಂ ಮಹಾಬಳಚರಂ ಪೊರ್ಕಿರ್ದು ಕೈಸನ್ನೆದೋ ।
ಱಿಚವೊಲ್ಬೆಂಬಿಡಿದಟ್ಟಱಿಂ ನೆಲಸಿದಂ ತತ್ಕಲ್ಪದಿಂ ಬಂದು ತ
ತ್ರಿದಶೇಂದ್ರಂ ವಸುಷೇಣಭೂಭುಜಚರಂ ಸೀತಾಂಬಿಕಾಗರ್ಭದೊಳ್ ॥ ೭೨

ವ॥ ಅಂತು ನೆಲಸಿದ ಗರ್ಭಾವತಾರದೊಳ್

ಆ ದೇವಿಯ ಬಡನಡುವಿನೊ
ಳಾದ ರಸಾಯನದ ಸೇವೆಯಂತಿರೆ ವಳಿಯೇಂ ।
ಪೋದತ್ತೊ ಕೆಟ್ಟ ನಾಟ್ಗಿರ
ಸಾದಂತಿರೆ ಮಧ್ಯದೇಶಮೇಂ ತೀವಿದುದೋ ॥ ೭೩

ಲಲನೆಯ ಬಾಸೆಯ ಕರ್ಪೇಂ
ಗೆಲೆವಂದುದೊ ವಿಷ್ಣು ಗರ್ಭದೊಳ್ನೆಲಸಲೊಡಂ ।
ಮೊಲೆಯೆಂಬ ಜವಳಿಗೊಡೆಗ
ಳ್ಗಲರಂಬಂ ತಿರ್ದಿ ಪಿಡಿದ ನೀಲದ ಕಾವಂ ॥ ೭೪

ಹೆಟ್ಟುಗೆಗೆ ಗುಜ್ಜುಗರೆದುದು
ಮೆಟ್ಟುವ ಮೆಲ್ನಡೆ ಮೊಗಂ ಬೆಳರ್ತುದು ಹಗೆ ೞಂ ।
ದಿಟ್ಟಳಿಸಿದ ಪಂದೆಯವೊ
ಲ್ಕೊಟ್ಟು ಕಱಂಗಿದುವು ಲೋಭಿಯಂತಿರೆ ಮೊಲೆಗಳ್ ॥ ೭೫

ಕನ್ನಡಿಯಿರ್ದವೊಲೊತ್ತಿಳಪ ಚಕ್ರದ ಬೆಳ್ಮಸೆಯುಲ್ಲಿ ನೋಡುವ
ಳ್ತನ್ನಮುಖಾಬ್ಜಮಂ ಸರಸಖಾದ್ಯಸುವಸ್ತುಗಳಿರ್ದ ಹಾಂಗೆ ಮ ।
ಣ್ದಿನ್ನದೆ ಸ್ವೈರಿಸಳ್ನಿಜಕೃಶೋದರದೊಳ್ನೆಲಸಿರ್ದನೆಂಬುದಂ
ಕನ್ನಡಿಪಂತೆ ಪಂಕರುಹಲೋಚನೆ ಚಕ್ರಧರಂ ಧರಾಧರಂ ॥ ೭೬

ವಳಿ ಕಿಡುವಂತೆ ತಂಬುಲದ ಬಾಯ್ಸುಪಿಗೆಟ್ಟುದು ಕಣ್ಗಳಂತೆ ಬೆ
ಳ್ಪೆಳಗನಳಂಕೆಗೊಂಡುವು ಕಪೋಲದಳಂ ಸರದಂತೆ ಮೆಲ್ಪನ ।

ಗ್ಗಳಿಸಿದುದಂ..ರಮನಾಗಿಪ ಮೆಲ್ಲಡೆ ಗರ್ಭಚಿಹ್ನದೊಳ್
ಒಳೆದುದು ಕೆಯ್ಯ ಸೆಳ್ಳುಗುರ್ಗಳಂತೆ ಲತಾಂಗಿಯ ಕುಂತಳೋತ್ಕರಂ ‖ ೭೭

ವ‖ ಆಸಂತೋಷವರ್ಧನಾವಸರದೊಳ್

ಸುತಲಾಭಾನುಭವಕ್ಕೆ ವಲ್ಲಭರತಪ್ರೇಮಾನುಭೋಗಕ್ಕೆ ತ
ತ್ಪತಿಪತ್ನೀದ್ವಯಮೇಕಮೆಂಬಿನೆಗಮಂತರ್ವರ್ತ್ತಿಯಾಗಿರ್ದು ಗ ।
ರ್ಭತನೂಜಂ ಪೊಱಮಟ್ಟನೆಂದು ನಲಿವನ್ನಂ ಧಾತ್ರಿ ಮುನ್ನಂ ಜಯಾ
ವತಿ ಪೆತ್ತಳ್ಬಲದೇವನಂ ರಿಪುಕುಲಾರಣ್ಯಾವನೀದಾವನಂ ‖ ೭೮

ವ‖ ಅಂತು ಶುಭಮುಹೂರ್ತೋದಿತಪುತ್ರಜನ್ಮೋತ್ಸವದೊಳ್

ಪುರಲಕ್ಷ್ಮೀಲುಳಿತಾಳಿಕಾಳಿ ಪುರಲಕ್ಷ್ಮೀಕೇಕರಾಲೋಕನಂ
ಪುರಲಕ್ಷ್ಮೀಮುಖಬಿಂಬಮೆಂಬಿನೆಗಮೆತ್ತಂ ಪ್ರತ್ಯಗಾರಂ ನಿರಂ ।
ತರಮುತ್ಪಲ್ಲವತೋರಣಂ ಸಿತಪತಾಕಶ್ರೇಣಿ ಪೂರ್ಣಾಂಭಸಂ
ಕರಕಾದರ್ಶಮದೇಂ ಬೆಡಂಗಮದುದೋ ದ್ವಾರಾವತೀಶೋಭೆಯೊಳ್ ‖ ೭೯

ವ‖ ಅಲ್ಲಿಂಮುನ್ನಮಾಸ್ಥಾನಮಂಟಪದೊಳಿಟಿಪಿದ ಶಂಕುವಿನೊಳಮಿಟ್ಟ ಗಳಿಗೆವಟ್ಟಲೊಳಂ ಶುಭಮುಹೂರ್ತಮನೆ ಪಾಱುತ್ತುಮಿರ್ದ ಗಣಕಗಣನಿರೂಪಣ ಪ್ರದತ್ತ ಮುಖಾಂಭೋಜಂ ಸೋಮಪ್ರಭಮಹಾರಾಜನಹಮಹಮಿಕಾಯಾತಶು ದ್ಧಾಂತಗೃಹಮಹತ್ತರೀನಿಕರವಿಜ್ಞಾಪನದೊಳಂ ಪ್ರಮೋದಪ್ರಮುಷ್ಟಪ್ರೌಢವಾ ರನಾರೀನಿಜಭುಜಾಪಹೃತಪಾರಿಹಾರ್ಯದೊಳಮಱಿದು ಪುತ್ರಮುಖದರ್ಶನೋತ್ಸು ಕಹೃದಯನವಹಿತಶುಭಮುಹೂರ್ತನಲ್ಲಿಂ ತಳರ್ದು ರಕ್ಷಾಭಿರಚಿತರತ್ನಬಹಳೀ ಪ್ರಾಂತಪ್ರದೇಶಮುಂ ಸಿದ್ಧಾರ್ಥದಿವ್ಯಧೂಪಧೂಮಧೂಸರಿತಮುಖದ್ವಾರಾಭಿರಾ ಮಮುಂ, ಅಂಜನವಿಲಿಖಿತಖಡ್ಗಧರಪುರುಷೋಭಯಭಿತ್ತಿಭಾಗಮುಂ, ಮುಸಲಹ ಲಾರ್ಪಿತದ್ವಾರೋಪಕಂಠಮುಂ, ರತ್ನಕಂಠೀಜನಜನೀಯಮಾನಮಂಗಳಕೈಶಿಕಾ ಸಂಗೀತಮುಖರಮುಮಪ್ಪರಿಷ್ಟಭವನಮಂ ತತ್ಸಮಯಸಮುಚಿತಸಹಾಯಸ ಮೇತಂ ಪೊಕ್ಕು ಮಂದಾಕ್ಷಭಾವಸಂಧಾನಿತಹಸ್ತಪಲ್ಲವಾಂತರಿತವದನವನರುಹೆ ಯಾದ ವಲ್ಲಭೆಗೆ ಮಂದಹಾಸಮಂದಾಕಿನೀಪ್ಲವನಾಭಿಷವಣಮಂ ಮಾಡುತ್ತುಂ ನೋಡುವಾಗಳ್



ತ್ಯಕ್ತಾಖಿಲದೋಷಂ ಸು
ವ್ಯಕ್ತಾಂಗಂ ತಾಯ ಸೋಂಕಿಲೊಳ್ಸಿತಕಾಯಂ ।
ಶುಕ್ತಿಕೆಯ ಸೋಗೆಯೊಳ್ ನವ
ಮುಕ್ತಾಫಲದಂತೆ ತೊಳಗುತಿರ್ದಂ ತನಯಂ ॥ ೮೦

ವ॥ ಅಂತು ಮೆಱೆವ ಬಾಲಕನ ವದನಾರವಿಂದದೊಳಾತ್ಮಾವಳೋಕದ್ವಿರೇಫವಾಬಾಲ್ಯರಸಮಕರಂದದಿಂ ತಣಿದು ಚೇತೋಮರಾಳಂ ಸ್ನೇಹಲೀಲೆಯಿಂ ನಲಿದು ನಿರ್ವರ್ತಿತಜಾತಕರ್ಮವಿಧಾನನಾಗಿ ದಶಮದಿನದೊಳರ್ಭಕಂಗೆ ನಿರ್ಭರಪ್ರಭಾವಿಭಾಸಿಯಪ್ಪುದಱಿಂ ಸುಪ್ರಭನುಂ, ದೋರ್ವಳದೊಳ್ ಸರ್ವತೋಭದ್ರನಪ್ಪುದಱಿಂ ಬಲಭದ್ರನುಂ, ಲೋಕಾವಲೋಕಾಭಿರಾಮನಪ್ಪುದಱಿಂ ರಾಮನೆಂಬನ್ವರ್ಥನಾಮಂಗಳನಿಟ್ಟುತ್ಸವದ ಪರಮಸೀಮೆಯಿಂದಮಿರೆ

ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುೞ ಪೆರ್ಚಿನ ಮೇಲೆ ಪೆರ್ಚು ಸಂ
ತಸಿಕೆಯ ಮೇಲೆ ಸಂತಸಿಕೆ ಮಂಗಳಚಾರದ ಮೇಲೆ ಮಂಗಳಂ ।
ಪಸರಿಸುವಂತಿರಗ್ರಜೆ ತನೂಭವನಂ ಪಡೆದುತ್ಸವಾನಕಂ
ಮಸುಳದ ಮುನ್ನೆ ಸೀತೆ ಪಡೆದಳ್ಮಗನಂ ಸರಸೀಜನಾಭನಂ ॥ ೮೧

ವ॥ ಅಂತು ಪಡೆದ ಸುಖಪ್ರಸವಸಮಯದೊಳ್

ಪೊಕ್ಕುೞ ಕುಡಿಯಂ ಪೆರ್ಚಿಸ
ಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋ ।
ಕಕ್ಕೋಜನೆನಿಸುವಜನಂ
ಪೊಕ್ಕುೞ ಪೂವಿಂದೆ ಪಡೆದುದುಂಟೆನಿಸಿರ್ದಂ ॥ ೮೨

ಪ್ರಸವಾಲಯದೊಳ್ ಜಗತೀ
ಪ್ರಸವಾಭಾರಕ್ಕೆ ಕಿಱುತೆಲದೊಳ್ಸಾರ್ಚಿ ।
ರ್ದಸಿಲತೆಗೆ ಕಾಳಬಜ್ಜರಿ
ವೆಸರಾಯ್ತೆಂದಿಂಗೆ ಕೃಷ್ಣನಂಗಚ್ಛವಿಯಿಂ ॥ ೮೩

ಸೆಱೆಗಳ್ಬಡ್ಡಿಗಳೆಯ್ದೆ ಮಾಣ್ದುವು ಮರಾಳಂ ಪಾರಿವಂ ಕೀರಮು
ಳ್ಕಱದೀವನ್ನೆಱೆ ಬಿಟ್ಟುವತ್ತಿಜನಮೇಕಚ್ಛತ್ರಮುಂ ಪಟ್ಟಮುಂ ।

ಪೊಱಗಾಗರ್ಥಿಸಿತಿಲ್ಲ ಮುಂ ಪಡೆದುದಾಸೋಮಪ್ರಭಂ ಮೇಗು ಮ್ಮೈ
ಮಱೆದಂ ದಾನದ ಚಾಗದಗ್ಗಳಿಕೆಯೊಳ್ಪುತ್ರೋತ್ಸವಾನಂದದಿಂ ॥ ೮೪

ತನುಜೇಂದೂದಯುದೊಳ್ ಪರೀಸರದಿ ಸಂಕ್ಷೋಭಂ ಪೊದಟ್ದಿತ್ತು ವಂ
ದನಮಾಲಾಧ್ವಜವಾಸಚೂರ್ಣರಮಣೀಶೃಂಗಾರಭೃಂಗಾರಕಾಂ ।
ಚನಕುಂಭೋದಕದರ್ಪಣದ್ವಿಜಜನಾಶೀರ್ವಾದಧಾತ್ರೀವಿನ
ರ್ತನಸಂಗೀತಕಪುಣ್ಯಪಾಠಕಮೃದಂಗೋತ್ತಾಳಕೋಳಾಹಳಂ ॥ ೮೫

ವ॥ ಆಗರಸನಾಕುಮಾರಂಗೆ ಜಾತಕರ್ಮನಿರ್ಮಾಪಣಮಹೋತ್ಸವಾನಂತರಂ ನಾಮಕರಣಮಂ ಶುಭವಾಸರದೊಳಷ್ಟೋತ್ತರಶತಾಖ್ಯಾತನೀತಂ ಪುರುಷೋತ್ತಮನುಮೆಂಬ ಪೆಸರ್ಗಳಸದಳಮೆಸೆಯೆ

ಕಳಹಂಸಧವಳನಗ್ರಜ
ನಳಿನೀದಳಶ್ಯಾಮನನುಜನಿರ್ವರ ಗಡಣಂ ।
ಬಿಳಿಯ ಕರಿಯಾಲಿಯಂತು
ಜ್ವಳಿಸಿರೆ ಲೋಕಕ್ಕೆ ತಾಮೆ ಲೋಚನಮಾದರ್ ॥ ೮೬

ಅಂಗಣದ ಪಾರಿಜಾತದ
ಮುಂಗುಡಿಗಳ್ ತಂದೆತಾಯ ನಗೆಗಣ್ಗಳ ಪ ।
ರ್ವಂ ಗಳೆನೆ ರಾಮಕೃಷ್ಣರ
ಸಂಗಡಿಸಿದ ಬಾಲಕೇಳಿ ಪಡೆದುದು ಮುದಮಂ ॥ ೮೭

ಬಳವತ್ಕ್ಷತ್ರಕುಲದ್ವಿಪಕ್ಕೆ ರದಯುಗ್ಮಂ ಶೌರ್ಯಸಿಂಹಕ್ಕೆ ಕೋ
ಮಳದಂಷ್ಟ್ರಾಯುಗಳಂ ಸಮಸ್ತಪುರುಷಾರ್ಥಾಕಾರವೀರಂಗೆ ಬಾ ।
ಹಾಯುಗಮೆಂಬಿನಂ ಹಳಿಯುಮಂಭೋಜಾಕ್ಷನುಂ ಲೀಲೆಯಿಂ
ಬಳೆಯುತ್ತಿರ್ದರ್ನಾಕುಲಂ ತ್ರಿಭುವನೈಕಾನಂದಕಂದಾಂಕುರರ್ ॥ ೮೮

ಬಳೆಯುತ್ತಿರ್ದುವು ಕೂಡೆಕೂಡೆ ಬಳೆವಾಗಳ್ ಶಸ್ತ್ರಶಾಸ್ತ್ರಾದಿ ಸ
ತ್ಕಳೆಗಳ್ ಪೌರುಷಮೊರ್ಮೆಗೊರ್ಮೆ ಶಿಶುಭಾವಂ ಪಿಂಗೆ ಮೆಯ್ಯೊಗ್ಗಡೆ ಮಾಂ।
ಸಳಮಾಯ್ತುನ್ನಿತರಾಜನೀತಿಗೆ ನವಪ್ರಾಗಲ್ಭ್ಯದೊಳ್ಪಾಡೆ ಕೌ
ಶಳಮಾಯ್ತಂತು ಕುಮಾರರುರ್ವಿಗವತಂಸೀಭಾವದಿಂದೊಪ್ಪಿದರ್ ॥ ೮೯

ಐರಾವತಮುಮನಂಜನ
ವಾರಣಮುಮನಡ್ಡಮಿಕ್ಕಿದಂತಿರೆ ಬಲನುಂ ।
ನಾರಾಯಣನುಂ ಜಗಮಂ
ಕೂರಿಸಿದರ್ ಕಾಯ ಬಲದೊಳಂ ಬಣ್ಣದೊಳಂ ॥ ೯೦

ಜಗುನೆಯ ಕಡಲೊಳ್ಸಾತ್ತರಾ
ಮೃಗಧರಮಂಡಲದ ಕಾಂತಿ ಮಾರ್ಪೊಳೆದವೊಲೇ ।
ನುಗಿಬಗಿಮಾಳ್ಪುವೊ ಪೆಂಡಿರ
ಬಗೆಯಂ ಕೃಷ್ಣನ ವಿಲೋಲಲೋಚನರುಚಿಗಳ್ ॥ ೯೧

ನುಡಿಯಾಲ್ಪ್ಬರದು ರಾಮಕೇಶವರ ಚೆಲ್ವೇವೇಳ್ವೆನಯ್ಬುತ್ತು ಪಿ
ಲ್ನಡಿಯಾರಯ್ವೊಡೆ ನಾಲ್ವತೊಂಬತರೆ ಲಕ್ಷಾಬ್ದಂಗಳಿರ್ವರ್ಗವೊ ।
ಳ್ಪಡದಾರ್ಯುಃಪರಿಮಾಣಮಾಗೆ ಚತುರಾಸ್ಯಂ ಮಾನವಾಕಾರದಿಂ
ಕಡೆದಂತಿರ್ಪುದು ಗಂಡಗಂಡ ಹಿಮವತ್ಕುತ್ಕೀಲನೀಲಾದ್ರಿಯಂ ॥ ೯೨

ನಳಿನಾಕ್ಷಂಗೆ ಕುಮಾರರಾಜ್ಯಮಧಿನಾಥಂ ತಂದೆ ಸೋಮಪ್ರಭಂ
ಗಳವಟ್ಟುತ್ತು ವಿದಗ್ಧರಾಜ್ಯಮಧಿರಾಜ್ಯಶ್ರೀಯನಾಳ್ದಂ ಜಗ ।
ಜ್ಜಳಜಾರ್ಕಂ ಕವಿತಾನಟೀನಟನಶೈಲೂಷಂ ಜಯಶ್ರೀವಧೂ
ಕುಳಗೇಹಂ ಬಲಭದ್ರನುಜ್ಜ್ವಲಯಶಂ ಸಾಹಿತ್ಯರತ್ನಾಕರಂ ॥ ೯೩

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥಪುರಾಣದೊಳ್ ಸುಪ್ರಭ
ಪುರುಷೋತ್ತಮಾವತಾರವರ್ಣನಂ
ದ್ವಾದಶಾಶ್ವಾಸಂ
ಸಂಪೂರ್ಣಂ

---

# ತ್ರಯೋದಶಾಶ್ವಾಸಂ

ಶ್ರೀರಾಮಂ ಹಲಹಸ್ತನ
ರೋರುಹನವನತನೃಪಾಲದಂಭೋಳಿಪ್ರಾ ।
ಕಾರಂ ನೀತಿನದೀನದ
ಪಾರಾವಾರಂ ವಿನೇಯಜನಮುಖತಿಲಕಂ ॥ ೧

ವ॥ ಅಂತು ಬಲದೇವನುಂ ಶ್ರೀಕಾಂತನುಮೌದಾರ್ಯಶೌರ್ಯಧೈರ್ಯಂಗಳ್ ತಮ್ಮಂ ತೊಳಗಿ ಬೆಳಗೆ ಜಗದೊಳ್ ಸಂತೋಷದಿಂ ದ್ವಾರಾವತಿಯೊಳಿರ್ಪಿನಮಿತ್ತಲ್

ಒಡಸತ್ತಂದಿನ ಚಂಡಶಾಸನನೆ ಘೋರಾಕಾರಸಂಸಾರದ
ಟ್ಟಡಲೊಳ್ಬಿರ್ದು ಮುಟುಂಕಿ ಬಂದು ಭವನಾವಾಸಕ್ಕೆ ದೈತ್ಯಾನ್ವಯಂ ।
ಬಡೆದಲ್ಲಿಂದಮೆ ಬಾರಣಾಸಿಪೊಲಿಲೊಳ್ ಧಾತ್ರೀತ್ರಿಖಂಡಕ್ಕೆ ತಾ
ನೊಡೆಯಂ ಭೂಪರೊಳರ್ಧಚಕ್ರಿ ಎನೆ ರಾಜಾಮ್ನಾಯದೊಳ್ಕೂಡಿದಂ ॥ ೨

ಪೆಸರ್ವೆತ್ತಾಮಧು ಕೃಷ್ಣನಿಂ ಮಡಿದಪಂ ಕೃಷ್ಣಂ ಬಟಿಕ್ಕರ್ಧಚ
ಕ್ರಿ ಸಮಸ್ತಾವನಿಗಾಗಿ ಸಲ್ವನವಧಿಸ್ಥಾನಕ್ಕೆ ಕಾಲಾಂತದೊಳ್ ।
ದೆಸೆಗೆಟ್ಟಾತನ ಶೋಕದಿಂ ಬಳಸಿ ಬಂದಾಸುಪ್ರಭಂ ಕಂಡು ಬೋ
ಧಿಸೆ ಸೋಮಪ್ರಭರಲ್ಲಿ ದೀಕ್ಷೆವಡೆದಾಳ್ವಂ ಮುಂದೆ [1] ನಿರ್ವಾಣಮಂ ॥ ೩

ಈ ಕಥೆಯನಿಂತೆ ಕೇಳ್ದಿನ
ನಾಕುಲಮೆಂದಾಕೆ ಪೇಟ್ದೊಡೆನಗಳವಡೆಯಿ ।
ನ್ನಾಕಥನಮೆಂದು ಮದನಪ
ತಾಕೆಗೆ ಕಡೆಮುಟ್ಟೆ ಚಿತ್ರಲತೆ ಪೇಟ್ದಾಗಳ್ ॥ ೪

1 ಕ. ಗೀರ್ವಾಣಂ.

ಎನ್ನ ಮನಃಪ್ರಿಯಂ ಖಚರಸೇನೆಗೆ ನಾಯಕನಾದನಲ್ಲಿ ತಾಂ
ಮನ್ನಣೆಯಾತನಂತಱಿವೆ [ನಾತನ] ನಾಮಧುಕೈಟಭಾಂಕನ ।
ತ್ಯುನ್ನತನಣ್ಮಿನೊಳ್ಬಲದೊಳತ್ಯಧಿಕಂ ಛಲದೊಳ್ನಿರರ್ಗಳಂ
ತನ್ನ ಮಹತ್ವದೊಳ್ತೃಣವಿಶಲ್ಯೆಲಘೂರ್ನ್ರಿತವಿಶ್ವವಿಷ್ಟಪಂ ॥ ೫

ನಿನಗೇವೇಟ್ಟಪ್ಪೆನಾಭೂಭುಜನರಸುತನಂ ಪೇಟ್ವ ಕೇಳ್ವಂತುಟಲ್ತು
ರ್ವಿನಮಿಾತ್ಮೈಖಂಡಮುಂ ತ್ರೈಭುವನದನಿತು ಚಕ್ರೇಶ್ವರತ್ವಂ ಚತುರ್ನಾ ।
ಕಿನಿಕಾಯಕ್ಕೆಂಬವೊಲ್ದುರ್ಜನಸುಜನಜನಂ ನಿಗ್ರಹಾನುಗ್ರಹಾನು
ಗ್ರಹಮೇಕಚ್ಛತ್ರದಿಂ ದಳ್ಳಿಸೆ ಮಧು ಮಧುಮತ್ತಂಬೊಲುದ್ವೃತ್ತನಾದಂ ॥ ೬

ಬೆಸವೇಟ್ವಂ ದಿಗಧೀಶರಂ ಬನದ ಬಾಳ್ಗಂಬಂಗಳೊಳ್ಕಂದು ಕ
ಟ್ಟಿಸವೇಟ್ವಂ ದೆಸೆಯಾನೆಯಂ ತನಗವಾಱೇಟೇಕೆ ಸೂರ್ಯಂಗೆ ವಾ ।
ಹಸಮೂಹಂ ಪುಗಿಸೆಂದು ಮಂದುರಮನೆಂಬಂ ದೈತ್ಯನಿರ್ದತ್ತ ಸು
ಟ್ಟಿಸಿ ತೋಪರ್ನಾತನ ಬೊಟ್ಟು ಸೋಕುರ್ವರೆಗುಂ ಬೇಗುಂ ಪ್ರತಾಪಾಗ್ನಿಯಿಂ॥ ೭

ಮೇರುವಿನ ಹಳಿಗಳೇಂ ಭಂ
ಡಾರಕ್ಕೆನ್ನಾಣೆ ವಜ್ರಧಾರೆಗಳೆಂಟಂ ।
ಕಾರಿಸಿ ಸಲಿಸದೊಡೆಂದು ಬ
ಲಾರಿಗೆ ದಿವಿಜಾರಿ ರಾಯಸಂಬರೆಯಿಸುವಂ ॥ ೮

ಬಱಿದೆ ತಿರುಗಿದೊಡೆ ಮಱೆಯಂ
ಕಱೆಯದೆ ವಕ್ರಿಸಿದೊಡುರ್ಚಿ ಮುಕ್ಕುವೆನೆಂದ ।
ಳ್ಳಱಿಸಿ ಮಧು ತನಗೆ ಪನ್ನೊಂ
ದಱೊಳಲ್ಲದೆ ಮಿಡುಕಲೀಯ್ಯನೇಟುಂ ಗ್ರಹಮಂ ॥ ೯

ವ॥ ಇಂತಟುಂಬಮುಮಚುಂಬಿತಮುಮಾದ ಭುಜಬಲಲತಾವಲೇಪಮಲ್ಲ
ದೆಯುಮಾತ್ರಿಖಂಡಮಂಡಲಾಧೀಶ್ವರನ ವಿಲಾಸಮಂ ಪೇಜ್ವೊಡೆ

ಅಮರೇಂದ್ರಂ ನಿಜಹಸ್ತದಿಂದಗೆಯುನಾಯ್ದುದ್ಯಾನದಿಂ ತಂದು ಕ
ಲ್ಪಮಹೀಜಂಗಳನಿಟ್ಟ ಕೇಳಿವನಮಾದೈತ್ಯಂಗೆ ಬಂದೆತ್ತುವಂ ।

ಕಮಲಪ್ರೋದ್ಭವನಬ್ಜವೃದ್ಧಿಗೆ ಸುಧಾರೋಚಿಃಕಲಾದ್ರೋಣಿಯಿಂ
ಹಿಮವದ್ಭೂಧರದೇತದಿಂ ಗಗನಗಂಗಾವಾರಿಪೂರಂಗಳಂ ॥ ೧೭

ವ॥ ಅದಲ್ಲದೆಯುಂ

ವನಿತೆಯುರಂ ಮರುಳ್ಗೊಳಿಸುವಾಕೃತಿಗಾಗಿರೆ ಮೀನಕೇತನಂ
ತನಗರಲಂಬುಗಳ್ತನಗೆ ಕರ್ಬಿನ ಬಿಲ್ ತನಗೇಕೆ ತನ್ನಿವಾ ।
ತನನೆನೆ ಬೆರ್ಚಿ ಪೆತ್ತು ಪೆಸರಿಟ್ಟು ಒದರ್ಬಂಕಿದನಲ್ತೆ ಕಂತು ನಂ
ದನವನಲಕ್ಷ್ಮಿಗಾದ ಸುತನಂ ಮಧುವೆಂದು ವಸಂತರಾಜನಂ ॥ ೧೮

ವ॥ ಆತ್ರಿಲೋಕಪ್ರತಾಪಮಾರ್ತಂಡಮಂಡಳಿಕಮಕುಟಮಾಣಿಕ್ಯಶೋಣಾಂಶುಪಟಲಪಲ್ಲವೋಪಮಹರಿಪೀಠಪರಿಸರಪ್ರಾಂತಪ್ರದೇಶಂ ಭೀಮಬಾಹುದಂಡೋತ್ಪಾತಶುಂಭತ್ಪರಿಲತಾಶಾಖಾಯಮಾನ ಶ್ರೀಕವಕ್ರದಾಢಾಕರನಿಶಿತಾಂಶುರೂಕ್ಷರಾಕ್ಷಸಾಂಗರಕ್ಷಕಪರೀತಂ ಪ್ರಸೂನಮಂಜರೀಪುಂಜಾವನಮ್ರಕಂದರ್ಪಕಲ್ಪಲತಾಭಿರಾಮನಿರ್ನಿಮೇಷಯೋಷಾಜನಹಸ್ತಕಿಸಲಯಚಮರಜಾನೀಕಪವನಪರಿನಟತ್ಕಂದಲೀಕುಂಡಲಾಗ್ರಕುಂತಳಂ ಸ್ವಾಂಗಮೃಗಮದಾಮೋದವಿಭ್ರಮಭ್ರಮರೀಝುಂಕಾರಪರೀತಕಿನ್ನರಕನ್ಯಕಾಜ್ಝೇಯಗೇಯಮಾನ ವೀರವಿತರಣವಿಳಾಸಪ್ರಬಂಧಂ ಜಂಗಮಮೇರುಗಿರಿಶೃಂಗಸಾತ್ಮತೇಯನುಂಬಾಹಾಸ್ಫಾಳನಕೇಳಾಹಳವ್ಯಾಕುಳೀಕೃತಯಾಮಸಾಮಜಸೋತ್ತಮರಾಜಾಂಗಣ ಕೇಕರಾವಲೋಕನಕಾಂತಕೌಮುದೀವಿಭ್ರಮೋಪಾತ್ತಸಿದ್ಧವಿದ್ಯಾಧರಗಂಧರ್ವನಾಯಕಮುಹುರ್ಮುಕುಳಿತಕರಕಮಲಷಂಡಮಾನವದಾನದ್ವಾರಪಾಲವೇತ್ರದಂಡಾಗ್ರತಿಷ್ಠೋತ್ತಿಷ್ಠಕ್ರಿಯಾಪ್ರತರ್ಜಿತಸೇವಾಸಮಯಾಭಿರಾಮಯಾತದಿಶಾಧಿನಾಥಯೂಥನೊಡ್ಡೋಲಗಂಗೊಟ್ಟಿರ್ದಾಪ್ರಸ್ತಾವದೊಳ್

ದ್ಯುನದೀತೋಯಕನತ್ಕಮಂಡಲುಕರಂ ಯಜ್ಞೋಪವೀತಾಂಶುಪಾ
ವನಪಕ್ಷಂ ದಶನಚ್ಛವಿಸ್ಫುರಿತವಕ್ತ್ರಾಂಭೋಜನುದ್ಧೂತಭೂ ।
ತಿನಿಮಗ್ನಂ ಗಗನಾಧ್ವದಿಂದಿಟಿದು ಬಂದಾಸ್ಥಾನಮಂ ಪೊಕ್ಕನ
ರ್ಜುನರೋಚಿರ್ಧವಳೀಕೃತಾಭ್ರತಳನಾನಾನೀರದಂ ನಾರದಂ ॥ ೧೨

ವ॥ ಅಂತು ಪುಗಲೊಡಂ ಪರಿಹೃತಕೇಸರೀಸನಮಾಸನನುಂ ಪ್ರತ್ಯೋದಪೀತವಪುಃಶಲಾಕನುಮಾನಮತ್ಕಿರೀಟಾಗ್ರಭಾಗನುಂ ಸಂಘಟಿತಕರಕಿಸಲಯನುಮಾಗಿ ತನ್ಮುನಿಪರಿವೃಢನನರ್ಘ್ಯಪಾದ್ಯಪುರಸ್ಸರಮುಚ್ಚಾಸನದೊಳಿರಿಸಿ ತಾನುಂ ನೀಚಾಸನದೊಳಿರ್ದು ಬಟಿಯಂ ಕ್ಷೇಮಕುಶಲಸಂಭಾಷಣಾನಂತರಂ

ಎಮ್ಮ ಪುರಾಕೃತಪುಣ್ಯಮೆ
ನಿಮ್ಮಂ ತರೆ ಬಂದಿರಾವಕಾರ್ಯನಿಮಿತ್ತಂ ।
ಕೆಮ್ಮನೆ ಸಂಭವಿಸುಗುಮೇ
ನಿಮ್ಮಸಮಾಗಮಮುಮಿಷ್ಟದೈವಾಗಮಮುಂ ॥ ೧೩

ಎನೆ ನಾರದನಿಂತೆಂದಂ
ದನುಜೇಂದ್ರಂಗಖಿಲಭುವನಭಾಗ್ಯಶ್ರೀಭಾ ।
ಜನನಂ ನಿನ್ನಂ ಕಣ್ಣಾ
ಱೆ ನೋಡಿ ಮನಮಾಱೆ ಪರಿಸಿ ಕಂಡುದನಱಿಪಲ್ ॥ ೧೪

ವ॥ ಬಂದೆವದೆಂತೆಂದೊಡೆ

ನಿನಗೆಂದುಂ ತೆತ್ತು ಪೊತ್ತೋಗಲಿಗರ ಪರಿಯಾಗಿಪ್ಪ ಸೋಮಪ್ರಭಂ ನಂದನರೀಗಳ್ಕೊರ್ವಿ ತಾಮುಂ ಮಲೆದಪರವರುಂ ತೆಳ್ಳಕೊಂಡಂತೆ ಚೆಚ್ಚು ।
ನುತಿರ್ಪರ್ ಸೀರಿನಾರಾಯಣರೆಸಕಮನೇವೇಟ್ದಪೆಂ ದಳ್ಳುದಳ್ಳೆಂ
ಬಿನಮುರ್ಕಿಂದುರ್ಕಿ ದಕ್ಕುಂದಲೆವರಿವರಿವುತ್ತಿರ್ದಪರ್ದಾನವೇಂದ್ರಾ ॥ ೧೫

ವ॥ ಆದೊಡಂ

ಕರಿಕಂ ದ್ವಿಜರೊಳ್ಕಿಂಚಂ
ಪರಜಾತಿಯೊಳಾಗೆ ತಲೆಯನೂಱುವರವರಿ ।
ರ್ವರೊಳಂ ಕೃಷ್ಣನ ಕಾಯ್ಪು
ರ್ವರಮುರಿದಪುದೊಮ್ಮೆ ನಿಲ್ಲದವನಲಗೊಱೆಯೊಳ್ ॥ ೧೬

ದಾನವಮಾರಿ ದಾನವಕುಳಾಂತಕನುದ್ಧತಚಕ್ರಿ ಸಿಂಹನೆಂ
ದಾನೆಯ ಕಾಲ್ಗೆ ಪೆಂಡೆಯುದ ಪಾಪೆಯನಿಕ್ಕಿದನಾತನೆಂದು ಕ ।

ಟ್ಟಾನೆಯುಮಂತುಟಿಲ್ಲ ಸರಿ ದಿಕ್ಕರಿಯೊಳ್ಗರಿಗಿಂದು ನಿನ್ನ ಪಾ
ದಾನತಮಾಗದೇ ಮುಳಿದು ನೀನದನೇಱಲೊಡಂ ಜಗತ್ರಯಂ ॥ ೧೭

ಧರೆಯಂ ಮುಚ್ಚಿ ಮುಸುಂಕಿ ಕೊಳ್ವ ತಮದೊಡ್ಡಿಂ ಕಾಯುಮಂ ಚಂದ್ರಭಾ
ಸ್ಕರರಿಂ ಕಣ್ಗಳನಬ್ಧಿಭಂಗತತಿಯಿಂ ಕರ್ಣಂಗಳಂ ತಾರಭೂ ।
ಧರದಿಂ ಕೋಳ್ಗಳನಂತಕಾನಿಳನಗುರ್ವಿಂ ಮೇಘಮಂ ಕೂಡೆ ಕಂ
ಡರಸಿಟ್ಟಂತಿರಜಾಂಡಮಂ ತಿಳಿದು ತೀವಿರ್ದಪ್ಪುದುಗ್ರದ್ವಿಪಂ ॥ ೧೮

ಬಿದುತಟದೊಳ್ತಱಂಬೊಳೆವ ಮುತ್ತಿನ ಲಂಬಣದಂತಿರಾಱಲಿ
ರ್ಪುದು ವಿಧುವಾಯ್ತು ಕುಂಭತಳದೊಳ್ತಿಲಕಂ ಬರೆದಂತೆ ತೋಱುತಿ ।
ರ್ಪುದು ರವಿಮಂಡಲಂ ತೊಡೆದ ಭಕ್ತಿಯದಂತಿರೆ ದಾನದೊಪ್ಪಮಂ
ಮದಗಜದುನ್ನತಿಕ್ಕೆಯುನದೇವೆಸಗೊರ್ಳ್ವೆ ಧರಾಧಿನಾಯಕಾ ॥ ೧೯

ವ॥ ಅದಾವುದೆಂದೊಡೆ

ಅದಱ ಬಿದು ಮುಟ್ಟಿ ದಿವಮಂ
ಮದಧಾರಾಸಾರದಿಂ ತಡಂಗಡಿದ ವಿಯು ।
ನ್ನದಿಯುಸಿತಮಾಗೆ ಮೃಗಮದ
ನದಿಯೆಂದೇವೈಪರಮರರಘುಮರ್ಷಣದೊಳ್ ॥ ೨೦

ವ॥ ಆವಾರಣದ ತೋರಹತ್ತಮಾನುಪೂರ್ವಿಸ್ಥೂಳಮುಮಾಭೀಳಮು ಮತಿಪ್ರಲಂಬಮುಮಾಗೆ ಸಿಂಬೆಗೊಂಡು ನಖಮುಖದೊಳ್ ಕುಪ್ಪಳಿಸಿ ರೌದ್ರ ರಸಮಂ ಕಱೆವ ಕಾರ ಮುಗಿಲೊಡ್ಡು ಕಾಲೂಱಿದಂತಿರ್ಪುದು. ಮತ್ತಮದಱ ಕರ್ಣತಾಳಂಗಳ್ ಜಾಳಪ್ರವಾಹಮಾದ ಮದಜಳದ ಕದಡನಡಿಗಡಿಗಪ್ಪಳಿಸಿ ಕರ್ಪು ಮಸಗಿ ದೆಸೆಯುನಳುರ್ವ ಕೆಂಬೀಡೆಂಬ ಕೆಂಡದ ಕೊಂಡಂಗಳಂ ಬಿಡದೆ

---

1 ಪ್ರಿಯನಱುದುದನಱುದಪನ
ಪ್ರಿಯನಱಯುದ ಮಾತನಱುಪುವಂ ಖಳನದಱಂ ।
ಪ್ರಿಯನಪ್ಪ ನಿನ್ನ ರಾಜ್ಯೋ
ದಯುದೊಳ್ ಪೆಱರೊಡವೆ ನನಗೆ ನೋಟ್ಟುದಸಹ್ಯಂ ॥
ಈ ಪದ್ಯವು ಕ. ಪ್ರತಿಯಲ್ಲಿಮಾತ್ರ ಇದೆ.

ಬೀಸುವ ಕಾಲಾಗ್ನಿರುದ್ರನ ಕೆಯ್ಯ ಕಾಳಕೂಟಪಟಲದ ತಾಲವೃಂತದಂತಿರ್ದುದು. ಮತ್ತಮದಱ ಕರ್ಣಚಮರದ ಝಲ್ಲಿಯಂತೆ ಜಲ್ಲೆನೊಳ್ಕಿ ಧಾರೆಗೆದಱ ಪೇರ್ಕೈಸಿ ಸೂಸುವುಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮಹಾವ್ರತಮನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪೆರ್ಚಿಕ್ಕಿ ಬೇಱೆ ಬೆರ್ಚಿದಂತಿರ್ದಪುದು. ಮತ್ತಮದಱ ನಡುಪಟ್ಟ ಕಟ್ಟಣಕದ ವಾದದ ಕಾಯ್ಪಿನೊಳೊಲ್ಲನೊನಲ್ದು ಕಲ್ಲನೆ ಕನಲ್ದು. ಸಂತಾಪಕ್ಕೆ ಸೈರಿಸದೆ ಹಿಮಕರಮಂಡಲಕ್ಕೆ ಕೆಯ್ಯನೆತ್ತೆ ಬೆರ್ಚಿದ ಹರಿಣಂ ಮತ್ತೀಂ ಪಾಯ್ದು ಕೊಂಡೋಡಿದೊಡೆ ಕೊಳ್ದಪ್ಪಿ ಸುಯ್ದು ಸುಱಿದ ಸೀಕರಾಸಾರದಿಂ ಮಂಜು ಪಂಜರಿಸಿದಂಜನಾಚಲದಂತಿರ್ಪುದಂತುಮಲ್ಲದೆಯುಂ

ದಾನವಸತ್ವಂ ತಾಂ ಸಿಂ
ಹಾನುಕರಂ ಭದ್ರಜಾತಿ ದೇವಾನ್ವಯಮಾ ।
ದಾನಗಜೇಂದ್ರಂ ಜಗದೊ
ಳ್ಮಾನಱುವಿನಮಿಲ್ಲ ಬನದೊಳಂ ಶಾಲೆಯೊಳಂ ॥ ೨೧

ವ॥ ಎಂದಾಮುನೀಂದ್ರಂ ದನುಜೇಂದ್ರನ ಚಿತ್ತಕ್ಷೇತ್ರದೊಳಂ ಶತ್ರುಸೂದನದೊಳಂ ಕ್ಷೋಭಮುಮಂ ಮಾತಂಗದೊಳ್ ಲೋಭಮುಮಂ ಸಮಸಮನೆ ಬಿತ್ತಿ ಬೆಳೆಯಿಸಲೊಡಂ ಕಿಂಚಿದಾಕಳಿತನೇತ್ರತ್ರಿಭಾಗನುಂ ಮುಹುರ್ಮುಹುರುಚ್ಚಾಳಿತಾಂದೋಳಿತಮಸ್ತಕನುಮಾಗಿ

ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗಮೇವುದೊಂದು ನಿ
ರ್ಮಮತೆಯೆನಿಪ್ಪುದೇವರಿದೆ ನಿಮ್ಮಡಿಯೆಮ್ಮಯ ಮೇಲೆ ಮಾಳ್ಪ ಮೋ ।
ಹಮೆ ತರೆ ಬಂದಿದಂ ನುಡಿವಿರೀದಯೆಯೆಂಬುದ ಕಾರ್ಯಸಿದ್ಧಿಮುಂ
ತೆಮಗಭಿವೃದ್ಧಿಯೆಂದಱಿದುಮಿಂ ಬಿಜಯಂಗೆಯಿಮಿಂದ್ರವಂದಿತಾ ॥ ೨೨

ವ॥ ಎಂದನುನಯಾಭಿವಾದನಸಮನ್ವಿತಂ ಮಧುಕೈಟಭಂ ಕಳಿಪೆ ನಾರದನಾರದಂ ನುಡಿದರೆಂಬಂತೆ ಪಿಸುಣ್ಗೆಡೆದು ಸನ್ಮಾರ್ಗಾನುವರ್ತಿಯಾಗಿ

ಕ್ಷೋಣೀಶ್ವರರಿರ್ವರುಮಂ
ಪೂಣಿಸಿ ಮಸೆಯಲ್ಕೆ ಬಗೆದು ತತ್ಸಭೆಯಂ ಗೀ ।

ವಾರ್ಣಮುನಿ ಪೊಱಮಡುತ್ತುಂ
ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮಗುಟ್ದಂ ॥ ೨೩

ವ॥ ಅಂತು ಮಗುಟ್ದಾತಂ ದ್ವಾರಾವತಿಗೆ ಬಂದು ತದ್ರಾಜ್ಯಭವನದೊಳ್ ರಾಜ್ಯಗಾಮಿನೀತಲ್ಪದಂತೆ ಮೆಱೆವ ಲಕ್ಷ್ಮೀನಿಲಯಮೆಂಬ ಕರುಮಾಡದುಪರಿ ಮತಳದ ಮಣಿರಂಗದೊಳ್ ವಿದ್ಯಾವಿನೋದಗೋಷ್ಠಿಯೊಳಿರ್ದ ಸುಪ್ರಭಪುರುಷೋತ್ತಮರಲ್ಲಿಗೆ

(ಮಾಲಿನಿ)

ಬರಲೊಡಮಿದಿರೆಟ್ದಿತ್ತರ್ಘ್ಯಮಂ ಪಾದ್ಯಮಂ ಬಿ
ತ್ತರಿಸಿ ಪೊಡೆಮಡುತ್ತುತ್ತುಂಗಪೀಠಾಗ್ರದೊಳ್ಕು ।
ಳ್ಳಿರಿಸಿ ಬೞಿಯು ನಿಮ್ಮೊಂದೆಟ್ಟರಂ ನಮ್ಮದೊಂದೆ
ಟ್ಟರವು ಪೊಸತದೆಂದಿಂದಿತ್ತ ಚಿತ್ತೈಸಿ ಬಂದಿರ್ ॥ ೨೪

ಕ್ಷೇಮದಿನಿರ್ದಿರೇ ಕುಶಲಮೇ ಮುನಿಮಾಳೆಗೆ ಸಂತಮೇ ಗ್ರಹ
ಸ್ತೋಮದ ವರ್ತನಕ್ಕೆ ಸುಖಮೇ ಸುರಕೋಟಿಗೆ ಕಲ್ಪಭೂರುಹಾ ।
ರಾಮಫಲೋದಯಕ್ಕೆ ನಿರವಗ್ರಹಮೇ ನಿಜಕಾಮಧೇನುವುಂ
ಕಾಮಿತಹವ್ಯಕವ್ಯರಸದಾಯಕಮೇ ಮುನಿಮೌಳಿಮಂಡನಾ ॥ ೨೫

ವ॥ ಎಂಬುದುಮಂಬುರುಹಗರ್ಭನಂದನನಿಂತೆಂದಂ

ಎಮ್ಮನದೇಂ ಕೇಳ್ದಪ್ಪೈ
ನಿಮ್ಮಱಿಯದುದೇ ಚರಾಚರಸ್ಥಿತಕರಣಂ ।
ನಿಮ್ಮವತಾರದೆ ನೀಂ ಕ್ಷೇ
ಮಂ ಮುನ್ನಂ ಪೇೞ್ವೊಡುಂತು ಸರ್ವಕ್ಷೇಮಂ ॥ ೨೬

ವ॥ ಅದೆಂತೆಂದೊಡೆ

ಈ ಕಾಶೀವಿಷಯಾಬ್ಧಿಯೊಳ್ ವಿಷಮೆ ಮೂಡಿರ್ದಂತೆ ಲೋಕೈಕಲುಂ
ಠಾಕಂ ದಾನವಮೂರ್ತಿ ಮೂಡಿ ಮಧುವೆಂಬಂ ದುರ್ವಿನೀತಂ ನಿಜ ।

ಸ್ವೀಕಾರಪ್ರತಿಘಾತಕಂ ಕದಡೆ ತಾನೆಯ್ದಿತ್ತು ಲೋಕಂ ನಿರಾ
ಲೋಕಂ ಮರ್ಕಟಹಸ್ತದುಸ್ತ್ರುಟಿತಮಲ್ಲೀಮಾಲಿಕಾವಸ್ಥೆಯಂ ॥ ೨೭

ಬೇಡಂ ತರುಶಾಖಾಖಗ
ನೀಡಮನಳ್ಳಿಱಿದು ದೋಂಟಿಯಿಂ ಕೆದಱುವವೋ ।
ಲ್ಕೂಡೆ ನಿಜತೇಜದಿಂದಂ
ಗೂಡಾಡಿಸುತಿರ್ಪನಮರಲೋಕಮನಸುರಂ ॥ ೨೮

ಹುತ ಮುನಿದು ಕೆಟ್ಟು ಪೋದುದು
ಕಿತವಾಹರಣಂಗಳಿಂದೆ ತಪಮಧ್ಯಯನ ।
ಶ್ರುತಿಯುಂ ಸ್ಮೃತಿಯುಂ ಸ್ಮೃತಿಗಂ
ಸ್ಮೃತಿಗಳ್ ಗಂಟಾದುವಮರಮುನಿಮಂಡಲದೊಳ್ ॥ ೨೯

ಅರವರಿಸದೆ ಮಧುಮದದಿಂ
ಸುರತಾಸಕ್ತೆಯ ಕುಚಂಗಳೆಂತಂತೆ ನಿರಾ ।
ವರಣಂಗಳಾಗಿ ಪರಿವುವು
ಕರಪೀಡನದಿಂದಮಗ್ರಹಾರಚಯಂಗಳ್ ॥ ೩೦

ಗುರುಲಘುಗಣನಂ ಕೆಟ್ಟುದು
ಪಿರಿದಾದುದು ವರ್ಣಸಂಕರಂ ದಾನವನಿಂ ।
ದೊರೆಯಾದುದು ಭೂವಲಯಂ
ಪರಿಣತನಲ್ಲದನ ಕವಿತೆಗಂ ಚಿತ್ರಕ್ಕಂ ॥ ೩೧

ಅದುಕಾರಣದಿಂ ನಿಮಗ
ಭ್ಯುದಯಮೆ ತಾಮೆಮಗೆ ನಿತ್ಯಕರ್ಮಾನುಷ್ಠಾ ।
ನದ ಪ್ರಶಮೆಯುಪ್ಪುದೆಂದತಿ
ಮುದದಿಂದಭ್ಯುದಯಮಾಗೆ ಪರಸಲ್ಬಂದೆಂ ॥ ೩೨

ಕಾರಣಪುರುಷರಿರವನೀ
ಭಾರಧುರಂಧರತೆಗುಗ್ರಶಾತ್ರವಕುಲಸಂ ।

ಹಾರಕ್ಕೆ ನೀಮೆ ನಿಮ್ಮವ
ತಾರಂಗಳ್ ಸಕಲಲೋಕಸುಕೃತಫಲಂಗಳ್ ॥ ೩೩

ಮೇಗಾಯ್ತು ಯಾದವಾನ್ವಯ
ಮೀಗಳ್ ನಿಮ್ಮ ದಯೆದಿಂದಮಖಿಳಾನ್ವಯಕಂ ।
ಯಾಗಂ ದಾನಂ ಧರ್ಮಂ
ಚಾಗಂ ನಿಮಿರ್ದಪುವು ನಿಮ್ಮ ತಲೆ ನಿಮಿರಲೊಡಂ ॥ ೩೪

ತೀವಿದುವು ಮುಖದ ನಿರ್ಬಂ
ಧಾವಳಿಗಳ್ಕಮಳನಾಥ ನೀನುದಯಿಪುದುಂ ।
ಪಾವಕಮೀನಸನೀಯುಂ
ದೇವರ್ಕಳ ಬಾಯ ಬಿಯುಗಮುಂ ಕಳೆಯಿಸುವೈ ॥ ೩೫

ಕಣ್ಬಡೆದ ಫಲಂ ಶುಭಮಂ
ಕಾಣ್ಬುದೆ ವಲಮಖಿಳಶುಭನಿಧಾನರ್ನಿಮ್ಮಂ ।
ಕಾಣ್ಬನಿತುವಡೆದ ಕುರುಡಂ
ಕಣ್ಬಡೆದವೊಲಾದುವೆ [1] ಮ್ಮ ಜನ್ಮವೆ ಸಫಲಂ ॥ ೩೬

ಉದ್ವೃತ್ತಸ್ವೈರಿಸುವರೆ
ಸದ್ವೃತ್ತನಿರತಿಶಯಸಮುದ್ಭೂತಿಗದೇ ।
ನುದ್ವೇಗಂಬಡೆಯದೆ ಭಾ
ಸ್ವದ್ವಲಯಾಭ್ಯುದಯಮಾಗೆ ಗೂಗೆ ನಿತಾಂತಂ ॥ ೩೭

ವ॥ ಅದುಕಾರಣದಿಂ

ನೀಮಾದೈತ್ಯನ ಕಣ್ಣ ಮುಳ್ ಮನದ ಶೂಲಂ ನಿಮ್ಮ ಬಾಹಾಬಲಂ
ಸೀಮಾತೀತಮಸೂಯೆಯಂ ಪಡೆಯದಾಗ್ರ್ಯಂತುಂ ಧರಾಚಕ್ರ ತಾಂ ।
ಸಾಮಾನ್ಯರ್ಪೆಱರೆಂದವುಂಕದಿರನಾತಂ ತಮ್ಮನಂತೌಂಕಿದಂ
ದೇಮಾತಳ್ಕುಱಿದಿರ್ಪುದಾರ್ಜಿಸುವುದಿನ್ನುಂ ಮಂತ್ರತಂತ್ರಂಗಳಂ ॥ ೩೮

1 ಕ. ವೆಂದು.

ವ॥ ಮತ್ತಮೊಂದು ರಹಸ್ಯಮುಂಟದಂ ನಿಮ್ಮ ಮನದೊಳಱಿದಿರ್ಪುದ ದೆಂತೆಂದೊಡೆ

ಒಳಗಾರಯ್ಯುತುಮಿರ್ಪ ಮಾಮುಮೆಮಗಂತೇವಾಸಿಯಾಗಿರ್ಪ ಕಾ
ಪಿಳಮಿತ್ರಂ ಮಧುವಿಂಗೆ ಸಲ್ಕೆಯು ಪುರೋಧಶ್ರೇಷ್ಠನಂತಾಸಭಾ ।
ಸ್ಥಳದೊಳ್ಪುಟ್ಟಿದ ವಾರ್ತೆ ತಾಂ ವಿದಿತಮೆಂದೇಕಾಂತದೊಳ್ನಾರದಂ
ಬಳಕೃಷ್ಣರ್ಗವತಂಸದಂತೆ ಕಿವಿವೊಕ್ಕೇನಾನುಮಂ ಪೇೞ್ದಂ ॥ ೩೯

ಪೇೞ್ ನಡೆನೋಡಿ ಪೊತ್ತಂ
ಬೆೞ್ದದ ತೆಱದಿಂದಮೆಯ್ದನುಷ್ಠಾನದ ದೇ ।
ವಾೞ್ಚನದ ಸಮಯಮೆಮಗಿದೆ
ಸಾೞ್ದುದಿಂ ನಿಮಗೆ ಸಕಲಮಂಗಳವಿಜಯಂ ॥ ೪೦

ವ॥ ಎಂದಮೋಘವಚನದಿಂ ಪರಸಿ ಮತ್ತಮಶೇಷಕಾರ್ಯಪರ್ಯಾಪ್ತಿ ಗಳೊಳಮವಹಿತಚಿತ್ತರುಮಪ್ರಮತ್ತರುಮಪ್ಪುದೆಂದಾಮುನೀಂದ್ರನಂ ಬಲೋ ಪೇಂದ್ರರ್ ಪೊಡೆಮಟ್ಟು ಕಳಿಪೆ ಪೊಡೆವಟ್ಟ ಸೆಂಡಿನಂತೆ ಗಗನಕ್ಕೊಗೆದನನ್ನೆಗಂ ಮಧುಕೈಟಭಂ ಕಳಿಪಿದ ದೂತಂ ಬಂದು ಬಾಗಿಲೊಳಿರ್ದುದಂ ದೌವಾರಿಕಪರಿ ಜ್ಞಾತಂ ಕಂಚುಕಿ ಬಂದು ಬಿನ್ನವಿಸಲೊಡಮಲ್ಲಿಂ ತಳರ್ದು ಪರಿಷನ್ಮಂಡಪಕ್ಕೆ ಬಂದು ಸುಪ್ರಭಂ ಸೋಮಪ್ರಭನೃಪೇಂದ್ರಪಾದಪದ್ಮಾಂತಿಕದೊಳ್ ಪದ್ಮನಾಭ ಸಮನ್ವಿತಪರಿಜನಪರೀತನವಸರಂಗೊಟ್ಟು ದೂತನಂ ಬರಿಸಿ ಕಾಣಿಸಲೊಡ ಮಾತಂ ಕಂಡು ವಿನಯವಿನಮಿತೋತ್ತಮಾಂಗನಾಗಿ ಸಮುಚಿತಾಸನದೊಳ್ಕುಳ್ಳಿ ರ್ದಿಂತೆಂದಂ

ಅಭಿಜನವತ್ಸಲಂ ನೃಪಶಿರೋಮಣಿಪೀಠಪದಾಂಬುಜಂ ಬಲ
ತ್ರಿಭುವನಚಕ್ರವರ್ತಿ ಖಚರೋರಗಕಿನ್ನರಗೇಯಮಾನದೊಳ್ ।
ವಿಭವದೊಳಿಂದ್ರಸನ್ನಿಭಕುಲೋದ್ಧರಣಂ ಮಧುಕೈಟಭಂ ಭವ
ತ್ಪ್ರಭುಗುಣಪಾಲಕಂ ಬೆಸಸಿದಂ ಶರಣಾಗತವಜ್ರಪಂಜರಂ ॥ ೪೧

ವ॥ ಎಂದು ತದನಂತರಂ ಪ್ರತಿಹಸ್ತಹಸ್ತಂಗಿತ್ತ ಲೇಖಪ್ರಾಭೃತಂಗಳಂ ಕಳೆದುಕೊಂಡು ಸಂಧಿವಿಗ್ರಹಿಯ ಕೈಗೆ ನೀಡುವೆಡೆಯೊಳ್ ಪುರುಷೋತ್ತಮಂ

ವ॥ ಮುನ್ನಮುನ್ನೆಗಂ[1] ನಿನ್ನ ಬಂದ ಕಾರ್ಯಮನೆ ಪೇಪೆಂಬುದುಮಾತ ನಿಂತೆಂದಂ

ಪೊಗಟ್ಟದರ್ಾನವರಾಜನೋಲಗದೊಳಿದರ್ಾರೋಹಕರ್ನಿಮ್ಮ ದಂ
ತಿಗಳೊಳ್ ವೈರಿಝುಳಪ್ಪನಂ ಕುಳಿಸಿಯುಂ ದೇವರ್ಗೆ ಚಾದಂತನೋ ।
ಲಗಮೆಂದಂಕುಶಮಿತ್ತನಾಗಳದುವಂ ಕೈಕೊಂಡು ನಿಮ್ಮಲ್ಲಿಗಾ
ಜಗದೇಕಪ್ರಭು ಪಕ್ಕೆಸಾರಿಗಿದುವೇಟ್ಕುಂ ತಕ್ಕುದೆಂದಟ್ಟಿದಂ ॥ ೪೨

ಕುಡುವುದು ಬೇಟ್ಪುದಂ ಕಳೆದುಕೊಳ್ವುದು ವಕ್ರತೆಯಿಲ್ಲದುಳ್ಳುದಂ
ನುಡಿವುದು ಲೇಸನುದ್ಭವಿಪ ಪೊಲ್ಲಮೆಯಂ ಮಱೆದೇಕವಾಕ್ಯದೊ ।
ಳ್ನಡೆವುದು ಹಾನಿವೃದ್ಧಿಯೊಳಭೇದಕನಪ್ಪುದು ಭೋಗ್ಯವಸ್ತು ಬಂ
ದೊಡೆ ಸಮನಾಗಿ ಭೋಗಿಸುವುದಿಂತುಟು ಸಜ್ಜನಬಂಧುಲಕ್ಷಣಂ ॥ ೪೩

ಇದು ನಾಯಂ ನೃಪಗಾಡಿಯಿಂ ನಯವಿಧಂ ನಿಮ್ಮಂ ಮಮಸ್ವಾಮಿ ಕೂ
ಡಿದರೊಳ್ತಿಳಿದನಾದ ಬಂಧುಕೃತಿಯಂ ಪಾರಂಗಮಂಮಾಡಲಾಂ ।
ತ್ವದಧೀನಂ ಬಟಿಕೇನಿದಿರ್ಚಿದುಪಸಾಯಂ ರಾಯಸಂ ತಳ್ವಲಾ
ಗದು ಕೈಕೊಳ್ವುದು ಮಾಟ್ಪುದತ್ಯಧಿಕರೊಳ್ಸಂಪ್ರೀತಿ ಸಾಮಾನ್ಯಮೇ ॥ ೪೪

ವ॥ ಎಂದು ದೂತನ ಮಾತಿಂಗೆ ನೀತಿರತ್ನಾಕರಂ ದೋಷಗರ್ಭೀಕೃತದರಹಸಿತವದನನುಂ ಕಿಂಚಿದಾಂದೋಳಿತಮಸ್ತಕನುಮಾಗುತ್ತುಮಾಗಳಿಂತೆಂದಂ

ಮೊದಲೊಳ್ದಂಡೋಕ್ತಿಯಂ ಮಾಡಿದೆಯದು ಹೃದಯಂ ನಿಮ್ಮನಾಳ್ದಂಗೆ ನೀನಾ
ಡಿದ ಸಾಮಂ ಭೇದಮಂ ಕೂಡಿದ ಬೆರಗು ಕರಪ್ರಾಭೃತಚ್ಛಾಯೆಯಿಂ ತೋ ।
ಱಿದ ದಾನಂ ಮಂತ್ರಿಗಳ್ಗಿಲ್ಲೆಡೆ ನುಡಿವರ ಮಾತಲ್ತು ನಿಮ್ಮೋಜೆಯಿಂ ಮೆ
ಚ್ಚಿದೆವಾಮಾತಿರ್ಕೆ ನಿಮ್ಮಾಳ್ದನ ಮನದೊಳಗಿರ್ದಂತುಟಂ ಮಾಡಲಕ್ಕುಂ ॥ ೪೫

ವ॥ ಎಂದು ಬಟಿಕ್ಕೆ ಲೇಖಮುಂ ಪಾವುಡಮುನಭಿಜ್ಞನ ಗಾಹೆಯಂತಿರಲೋದಿಸದೆಯುಂ ಶೋಧಿಸದೆಯುಮನ್ನೆಗಮಾತನಂ ಬೀಡಿಂಗೆ ಕಳುಪಿಯೆಂದ

---

1 ಗ. ನೀವು.

ಮುಕುಂದನ ವಚನದಿಂ ಕನಕಪಾತ್ರಪ್ರಣಿಹಿತತಾಂಬೂಲಪ್ರಶಸ್ತಹಸ್ತನಾದ ಸಂಧಿ ವಿಗ್ರಹಿಯ ಕೆಯ್ಯಂ ನೂಂಕುತ್ತು ಮಾತನಿಂತೆಂದಂ

ನಿತ್ತರಿಸದೆ ಚಕ್ರಿಗೆ ಬೆ
ನ್ನಿತ್ತು ಮೊದಲ್ಗಿಡಿಸಿ ತೆತ್ತು ಬಿರುದಂ ತಲೆಯೊಳ್ ।
ಪೊತ್ತ ಪೊಱೆಗಂಡುಗೆಯ್ದುದೆ
ಸತ್ತ ಮಹೀಭುಜರನಾರನಾರಂ ಪೋಲ್ವರ್ ॥ ೪೬

ಮಚ್ಚರದಾಯಮಂ ಮಱೆದು ಕೈದುಗಳಂ ತೊಱೆದುಟ್ಟು ತೊಟ್ಟ ಪೆ
ಣ್ಬಟ್ಟೆಮೊಡಂಬಡಂ ಪಡೆಯ ಮೈಲೆಯ ನಚ್ಚನೆಯಂತೆ ಸೂಲಮಂ ।
ಬಚ್ಚಿಸಿ ಪೊತ್ತು ಗೂಡಿಡುವ ಗುಬ್ಬಿಗಳಂತಿರೆ ಬಾಗಿಲಲ್ಲಿ ಪು
ಲ್ಗಚ್ಚಿ ಪುಗುತ್ತುಮಿರ್ಪರರಿಭೂಮಿಭುಜರ್ಮಧುಕೈಟಭೇಂದ್ರನಾ ॥ ೪೭

ಬರಲಟ್ಟಲ್ ರಾಯಸಕ್ಕಿಲ್ಲಿಳೆಯೊಳರಸುಗಳ್ದಿಗ್ಜಯಕ್ಕೊರ್ಮೆ ದೈತ್ಯಂ
ಭರದಿಂ ಸೂಚೈಸಲಿಲ್ಲೇಣ್ಪೆಸೆಯ ದಿಗಧಿಪರ್ತನ್ನತೇಜಃಪ್ರತಾಪಂ ।
ಮುರಿದೇಟಲ್ಕಿಲ್ಲ ಮೂಱುಂಜಗಮತುಳಬಳಂಗಳ್ಮದೀಮಾತನಾಡ
ಲ್ನಿರುತಕ್ಕೆಂದೊರ್ವರಿಲ್ಲಲ್ಲೆಣ್ ನಿಮಗೆ ವೃಥೋನ್ಮತ್ತರೊಳ್ಸತ್ತುಬಲ್ಲರ್ ॥ ೪೮

ವ॥ ಎಂದು ಬಟಿಕ್ಕೆ ಸೋಮಪ್ರಭನ ಮೊಗಮಂ ನೋಡಿ

ಜಗತೀನಾಥನ ಕೊಟ್ಟ ರಾಯಸಕಮಿಟ್ಟಾಳಾಳ್ದನೊಲ್ದಟ್ಟಿದುಂ
ಡಿಗೆಗಂ ನೀಂ ಬೆಸಕೆಯ್ದು ಮಂಡಳಿಕನಾದೈ ಕೇಡುಗಾಲಕ್ಕೆ ತಾ ।
ಮೊಗೆವರ್ತೇಡೊಗೆವಂತಿವರ್ನಿನಗೆ ಪಾಪಂ ಪೆತ್ತವರ್ಬೇಲಿಯುಂ
ಪುಗುವಂತಪ್ಪುದರಣ್ಯಮಂ ಪಡೆದು ನೀನೀಮಕ್ಕಳಂ ಮೊಕ್ಕಳಂ ॥ ೪೯

ವ॥ ಎಂದು ತನ್ನಾಳ್ದನ ಭುಜಬಲಪ್ರತಾಪಲೇಪಮನೆ ಮುಂದಿಟ್ಟು ದಂಡಮನೆ ಗಂಡುಗೆವಱಿದ ದೂತನ ಮಾತಿಂಗೆ ಮುಳಿಸಿಂ ಬಡಿಕಲನೊಳಪಾಯ್ದು ನೆಗೆವ ಜಳಧರಗಭೀರಧೀರಧ್ವಾನದಿಂ ದಾನವಧ್ವಂಸಕನಾಗಳಿಂತೆಂದಂ

ನಿನಗೇನೆಂದುತ್ತರಂಗೊಟ್ಟಪುದಱಿಕೆಯ ದೂತಿಂಗೆ ನಿನ್ನಾಳ್ದನೆಮ್ಮಂ
ಮೊನೆಯೊಳ್ಬಂದಾಂತು ಕೈಮಾಡಿದೊಡೆ ಬಟಿಕೆ..ನೀಂ ಬೇಡುವುಗ್ರಾಂ ।

ಗನೆಯೊಳ್ ತೂಗಾಡೆ ನೀಡುಂತಲೆ ಪರವಶದಿಂ ಮೆಚ್ಚಿ ಕಣ್ಮುಚ್ಚುತಾಹಾ
ಯೆನೆ ಕಾಣ್ಬೆೃ ನಾಳೆ ನೀಂ ಚಿತ್ತರಮೆರ್ದೆವುಗುವಂತುತ್ತರಂಗೊಟ್ಟಕೋಡಂ ॥

ವ॥ ಎಂದು ಮತ್ತಂ

ಚರವಟ್ಟಟ್ಟಿಯಿನಿಟ್ಟಳಂ ಮೆಱೆವುದೇ ಕಟ್ಟಾಳ್ತನಂ ಪೋಗು ನೀ
ನಿರವೇಡಣ್ಮುವೊಡಣ್ಮದಿರ್ದೊಡಿರವೇಡಾಂ ಬರ್ಪೆವೀಜರ್ವು ಸಂ ।
ಗರಮಂ ನೋಡುವ ದೇವಕೋಟಿಯ ಮನಂ ಕೌತೂಹಳಾವಗ್ರಹಂ
ಬೆರಸಾಂತಿರ್ವಗ ಬಾಳ ಬಾಯ್ಗಳ ಬಱಿಂ ಪಿಂಗಲ್ಕೆವೇಡಂ ಗಡಾ ॥ ೫೧

ಏಟ್ಕಳದೆ ದನುಜನಂ ಬರ
ವೇಟ್ಕಾಡುವುದಾಸಮಯುಂ ಸಮುಚಿತಧನಮಂ ।
ನೀಟ್ಕರಿಸದಿತ್ತು ಚರನಂ
ಬೀಟ್ಕೊಡೆ ಕೃಷ್ಣಂ ಒಟಿಕ್ಕಮಾಹಲಹಸ್ತಂ ॥ ೫೨

ಸಹಜನ್ಮನುತ್ತರಂಗೇ
ಳ್ದು ಹಸ್ತಿನಾಪಾದಯುದ್ಧಮದು ಬಳವದ್ವಿ ।
ಗ್ರಹಮೆಂಬವೊಲಸಮರಣಾ
ಗ್ರಹಣಕೆ ಬೆಱಗಾದ ತಾತನಂ ಬಗೆಗೊಳಿಸಲ್ ॥ ೫೩

ವ॥ ಆಸಭಾಸನದಿಂದಮೆಟ್ಟು

ವಿಗತಾಂತರ್ವಲಜಂ ವ್ಯಪೇತಪೃಥುಕಂ ನಿಸ್ತಂಬರಂಗಂ ನಿರ
ಸ್ತಗವಾಕ್ಷಂ ವ್ಯಪಸಂಭೃತಪ್ರತಿರವಂ ನಿಃಕೀರಮಾಮಂತ್ರಶಾ ।
ಲೆಗೆ ಬಾಹಾಜಯನಾಟ್ಯಶಾಲೆಗಧಿರಾಜ್ಯಶ್ರೀವಧೂಸೂಚ್ಯಶಾ
ಲೆಗೆ ವಂದಂ ಜನಕಾನುಜರ್ವೆರಸು ವಿಕ್ರಾಂತಪ್ರಧಂ ಸುಪ್ರಥಂ ॥ ೫೪

ವ॥ ಬಂದು ಪುರಂದರನಂ ಸಚಿವಸುಮಂತ್ರಿ ಸಮನ್ವಿತಂ ಸುಖಾಸೀನ ನಾಗಿರ್ದಲ್ಲಿ ಬಲಭದ್ರಂ ಭದ್ರಬಲನೆಂಬಮಾತ್ಯಮುಖ್ಯನ ಮೊಗಮಂ ನೋಡಿ

ಒಡೆಯುರಿವರೆಂಬ ಭಯಮುಮ
ನೊಡವೆಯ ಲೋಭಮುಮನುಟಿದು ನಿಮ್ಮಭಿಮತಮಂ ।

ನುಡಿದುಂಯುಲೋಭಭಂಗಳ
ಪಡೆಮಾತಱಿವಂಗವೊಪ್ಪಮುಲ್ತಱಿವಂಗಂ ॥ ೫೫

ವ॥ ಎಂದು ನುಡಿದ ನೀತಿನಿರ್ಮುಚ್ಚರನ ಪೂರ್ವಪಕ್ಷಸ್ಥಾಪನಾನುಕೂಲ್ಯ ಮನೆ ಸೋಮಪ್ರಭಮಹಾರಾಜನೀತೆಱದಿನನುವದಿಸಿದಂ

ಮಂತಣಕೆ ಮಚ್ಚರಂ ಬೇ
ಡಂತಾದೊಡೆ ಕಾರ್ಯಹಾನಿ ನುಡಿವುದು ಬಲ್ಲಂ ।
ತಂತಮ್ಮ ಮತಮನವಱೊಳ
ಗಂತಿದು ನಿರ್ವಾಣವೆಂದು ತಱಿಸಲ್ಗಱಿವಂ ॥ ೫೬.

ವ॥ ಎಂಬುದುಮಾಭದ್ರಬಳನಿಂತೆಂದಂ

ಸದನಂ ಷಾಡ್ಗುಣ್ಯಪುಣ್ಯಕ್ಕವಧಿ ಚತುರುಪಾಯಕ್ಕೆ ಪಂಚಾಂಗಮಂತ್ರ
ಕ್ಕುದಯಂ ಶಕ್ತಿತ್ರಯಕ್ಕುನ್ನತಿ ಚತುರುಪಧಾಶುದ್ಧಿಗಳ್ಗರ್ಧಿಸಿತ್ಯಾ ।
ಭ್ಯುದಯಂ ಸಿದ್ಧಿತ್ರಯಂಗಳ್ಗೆನಿಸಿದುದು ಭವನ್ಮಾರ್ಗಮೇಂ ಮುಕ್ತಿಗಳ್ ನಿ
ಮ್ಮಿದಿರೊಳ್ಸಲ್ವನ್ನೆಗಂ ಚಂದ್ರನ ಬೆಳಗಿನೊಳೇಂ ತಾರಕಕ್ಕುಂಟೆ ತೇಜಂ ॥ ೫೭

ವ॥ ಆದೊಡಮೆನ್ನಱಿವನಿತನಾಂ ಬಿನ್ನವಿಸಿದಪ್ಪೆನಾತ್ಮಪರಪಕ್ಷಬಾಹುಬಾ ಬಹುಲತೆಯುಮಂ ಕ್ಷಯವೃದ್ಧಿಸ್ಥಾನಮುಮಂ ದೇಶಕಾಲಪ್ರವರ್ತನಮುಮಂ ಪಂಚಪ್ರಕಾರದೊಳ್ ವೈರಕಾರಣಮುಮನಾರಯ್ದು ನೆಗಟ್ದಂಗೆ ಜಯಸಿದ್ಧಿ ಎಂಬುದನುಕ್ತಸಿದ್ಧಮದಱಿನಾಮಧುಕೈಟಭನವನನಮ್ಮಂತರಂ ಸಕಲಸಾಮಗ್ರಿ ಯೊಳ್ಕುಶಲಕಂ ಪರಸೈನ್ಯಶೈಲಕುಲಿಶತಾನವಪ್ರಾಯಮಂತುಮಲ್ಲದೆ

ಕ್ಷಯವೃದ್ಧಿಗಳೊಳ್ ದನುಜಂ
ಕ್ಷಯವಿಷ್ಣೂಜಿಷ್ಣುದೇಶಕಾಲಸ್ಥಿತಿಗಾ ।
ರಯೆ ಕಡುನಿಡಿದುಡಿಗುಂ ಗಾ
ಳಿಯ ಪೊಯ್ಲಿಂದಿಳೆಯ ಬೆಳೆದ ಸಸಿ ಮುಱಿದಪುದೇ ॥ ೫೮

ವ॥ ಆದೊಡಂ ನಮ್ಮ ಭುಜಬಲದ ವಿಜಿಗೀಷುವೃತ್ತಿಯನೆ ಮುಂದಿಟ್ಟು ಪತಂಗವೃತ್ತಿಯನೆ ನೆಗಟ್ಟುವುದುಚಿತಮಲ್ಲದು ಸಮಯೋಚಿತಕ್ಕೆ ತಕ್ಕಂತೆ ನೆಗಟ್ಟುವದೆ ಮಂತ್ರಮದೆಂತೆನೆ

ಮರುಳೋ ತೋರ್ಕಣ್ಣನಾಡೊಳ್ಮೆಣಸನಿಡುಗೆ ಕಾಲಕ್ಕೆ ತಕ್ಕಂತೆ ಬಣ್ಣಂ
ಬರೆಗೆಂಬರ್ದೇಶಕಾಲಕ್ಕಿದು ಪದನಱಿವೀ ಮಿಕ್ಕುದಂ ದೇವರಾಂತಂ ।
ಬರೆಯುಂ ಸಾಮಕ್ಕೆ ಸಾಮೋದ್ಭವರಸಿತಮನಂ ಭೇದಿಸಲ್ಬಾರದವ್ಯಂ
ತರರೆಣ್ಬರ್ನಂಬಿ ನಮ್ಮಂ ಪಿಡಿಯದತಿಬಲಂ ಮಾೞ್ಪ ದಂಡಕ್ಕೆ ದೈತ್ಯಂ ॥ ೫೯

ವ ॥ ಅಂತು ಮೂಱುಮುಪಾಯಪರಿಕರದೊಳ್ ದಾನೋಪಾಯಮಂ ನೆವಮಾಗಿ ನಿಲಿಸಿ ಸೋಮಪ್ರಭಸುಪ್ರಭರ ಮನದೊಳ್ ಮಂತಣಮಿರ್ದಂತೆ ನುಡಿಯದೆಯುಂ ನುಡಿದ ಮಂತ್ರಿಯ ಮಾತಂ ದೈತೇಯಮರ್ದನಂ ಮಾ ಕೊಂಡು

ಅಪ್ಪುದಿದಕ್ಕೆ ನಿಮ್ಮ ನೃಪನೀತಿವಿಶೇಷವಿಚಾರಮೇಕೆ ನಾ
ಮಪ್ಪೊಡೆ ಹೀನನಾತನಧಿಕಂ ಪಗೆಯಾದುದು ವಸ್ತುಜಾತನೆಂ ।
ತಪ್ಪೊಡಮಾತನಟ್ಟಿಸಿದುದಂ ಬಿಡದಿರ್ದೊಡೆ ತಿಣ್ಣಮೆಂಬುದುಂ
ಟಪ್ಪೊಡೆ ದೇವ ತೂಗಿಬಿಡುವೆನ್ನುಮನಾನೆಯುಮಂ ರಣಾಗ್ರದೊಳ್ ॥ ೬೦

ವ॥ ಎಂದು ಮಾಣದೆ ಮತ್ತಮಿಂತೆಂದಂ

ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿ
ಪ್ರಾಯಂ ನೆಟ್ಟನಲಂಘ್ಯಮಿಂತಿಸಿತನೀಗಳ್ಮೀಱಿ......ದ ।
ನ್ಯಾಯಕ್ಕಿಂದವಗಾಹಸಂಗರ ರಸಂ ತೀರ್ಥಾಂಬು ಶತ್ರುಕ್ಷಯಂ
ಪ್ರಾಯಶ್ಚಿತ್ತಮಿದಂ ನೆಗೞ್ಚಿ ಪಡೆವೆಂ ತ್ವಚ್ಚಿತ್ತಕಾರುಣ್ಯಮಂ ॥ ೬೧

ವ॥ ಎಂದು ನುಡಿದ ಮಂದರಧರನ ದಂಡೋಪಾಯಪ್ರಪಂಚಮಂಚಂಡ ಗರ್ಜನಮಂ..ತರ್ಜಿತಸಂದಿಯದೆ ನಿರ್ಜಿತವಿರೋಧಿಪ್ರತಾಪಪ್ರಭಂಸುಪ್ರಭನ ನಂತರಮಿಂತು ನಿಶ್ಚೈಸಿದಂ

ಜಯಮೆಂತುಂ ಸುಕೃತಾನುರೂಪಮುದಱೊಳ್ಬನ್ನಕ್ಕೆಪಕ್ಕಾಗದಂ
ತು ಯಥಾರ್ಥಾಗಮುಮಂ ವಿಚಾರಿಸುವೊಡೀತಂ ತದ್ವಿಚಾರಕ್ಕೆ ನಿ ।
ಶ್ಚಯಮಂ ಕಾಣ್ಬುದದಲ್ತೆ ಮಂತ್ರಫಲಮಿನ್ನಾಮಂತಣಂ ನೀತಿನಿ
ಶ್ಚಯಗೀರ್ವಾಣಮಿದಾಯ್ತು ಕೃಷ್ಣನ ಜಯಾರಂಭಪ್ರತಿಜ್ಞಾನದಿಂ ॥ ೬೨

ವ॥ ಎಂದು ನಿಶ್ಚಿತಮಂತ್ರರಾಗಿ ಮಂತ್ರನಿಕೇತನದಿಂ ಪೊಱಮಡುವಾಗಳ್

ಧರೆಗಂ ವ್ಯೋಮಕ್ಕಮಾರಿಟ್ಟವೊಲೊದವಿದ ಮೈ ದಿಕ್ಕನೊಟ್ಟೈಪ ಕಣ್ಕೇ
ಸುರಿಗೆಂಪಂ ಕಿತ್ತ ಕೂರ್ವಾಳ್ಸಿಡಿಲನುಗುಟ್ವ ಕೂರ್ದಾಡೆ ಭೂಲೋಕಮಂ ಮು।
ಮ್ಮುರಿಗೊಳ್ವಾಟೋಪಮತ್ಯದ್ಭುತಮೆನೆ ಭವನಪ್ರಾಂಗಣಪ್ರಾಂತದೊಳ್ನಿ
ರ್ನಿರಮಾತಂ ಮುಂತೆ ಭೋ ಭೋ ಕವಿ ಯೆನುತಮಿರಲ್ ರಾಕ್ಷಸಂ ರೂಕ್ಷರೂಪಂ॥

ವ॥ ಆಮಹಾದ್ಭುತಪ್ರತಿಪಕ್ಷರಕ್ಷನಿಪುಣಭಾವಮಂ ಕಣ್ಮುಟ್ಟಿನೊಳ್ ಕಂಡು

ದೂತನೊ ಬೆನ್ನೊಳೆ ಕಳಿಪಿದ
ದೈತೇಯನ ಗೂಢತೀಕ್ಷ್ಣದನುಜನೆಗೆತ್ತು ।
ತ್ತಾತರರಾಶಿಯನಂಭೋ
ಜಾತನನವನೂಡನಿ ಪೊಡೆಯಲೊಡನಾಕ್ಷಣದೊಳ್ ॥ ೭೪

ಉರಿವರಿವರಿವಂ ಜಳದಂ
ಬೊರೆಯುಲೊಡಂ ತಣ್ಣನಾದವೊಲ್ ಕೃಷ್ಣನ ಬಾ ।
ಳ್ವೆರಸಲೊಡಂ ಪಡೆಯ ನಿಶಾ
ಚರರೂಪಂ ನೋಡಿ ನೋಡಿ ಖೇಚರನಾದಂ ॥ ೭೫

ವ॥ ಆಗಿ ಮಕುಟತಟಘಟಿತಹಸ್ತಕುಟ್ಮಳಂ ಹಸ್ತಪಲ್ಲವಪ್ರಸರಿತಪಾರಿಜಾತಪ್ರಸೂನಾಭ್ಯರ್ಚಿತರಾಮದಾಮೋದರಚರಣನಖಕಾಮರಸನಿಂತೆಂದಂ—ದೇವ ನಿಮ್ಮಿರ್ವರುಂ ಪೂರ್ವಜನ್ಮದೊಳ್

ದಿವಿಜಾಧೀಶರ್ಸಹಸ್ರಾರಜರಿರಖಿಳದೇವೇಂದ್ರಸೇನಾನ್ವಿತಂ ಪೂ
ರ್ವವಿದೇಹಶ್ರೀಜಿನಾಭ್ಯರ್ಚನೆಗೆ ವರುತ ಮೆಮ್ಮೊಳ್ ಮಹಾವೈರದಿಂ ಭೈ ।
ರವಚೂಡಂ ತಳ್ತು ನಾಮುಂ ತಡಮಡಿವೆಡೆಯೊಳ್ ಭೋಂಕದಡ್ಡೈಸಿ ಮಾತಿಂ
ಯುವತೀವ್ಯಾಮೋಹಮಂ ಪಿಂಗಿಸಿದಿರುಟಿದೆನಾಂ ನಿಮ್ಮ ಕಾರುಣ್ಯದಿಂದಂ ॥೭೬

ವ॥ ಎನ್ನ ಪೆಸರ್ ಮಣಿಚೂಡನೆಂಬುದು

ಎನಗಲ್ಪ್ರತ್ಯುಪಕಾರಮುಂಟೆ ದಿಟದಿಂ ಪ್ರಾಣೋಪಕಾರಕ್ಕೆ ನಿ
ವ್ಮಿಸಕಕ್ಕಾಂ ಬೆಸಕೆಯ್ವುದೇಂ ಪಿರಿದು ಮದ್ವಿದ್ಯಾಳಿಯೆಂಬಾಳಿಯು
ರ್ಬೆಸಕೆಯ್ದಿರ್ಕೆ ಭವದ್ಭುಜಾರ್ಜಿತಜಯಶ್ರೀಗೆಂದು ತನ್ನಾಟ್ಕಿಱಿಂ
ದೊಸದಿತ್ತಂ ನಿಜವಿದ್ಯೆಯಂ ಮುಸಲಿಕೃಷ್ಣರ್ಗಾಖಗಾಧೀಶ್ವರಂ ॥ ೬೭

ವ॥ ಎಂದು ಬೞಿಯಮಿಂತೆಂದಂ

ರಕ್ಕಸನೊಳಿಱುವ ಕಾಯ್ಪಿನ
ತಕ್ಕಂ ನೆಗಪಲ್ಕೆ ದೇವ ಕಂಡೆಂ ನಿಮ್ಮಂ ।
ರಕ್ಕಸರ ಜೋಹವೇಱಿದ
ಪೆಕ್ಕಣದಿಂದಿಂದು ಪೋದನಾಮಣಿಚೂಡಂ ॥ ೬೮

ಮದನಪತಾಕೆಯಿದಂ ಕೇ
ಳ್ವುದುಮೆಂದಳ್ ಚಿತ್ರಲತೆಗೆ ಮನದೊಳ್ಮುನ್ನ ।
ಟ್ಟಿದ ಸೋಮಪ್ರಭನಾಗಳೆ
ಮಧುವಿನ ತಲೆ ಕೈಗೆವಂದುದೆಂದೊಡೆ ಧೀರಂ ॥ ೬೯

ಬಲನಾರಾಯಣರುಂತಜೇಯಮಹಿಮಾಪಷ್ಟಂಭರುಚ್ಚಂಡದೋ
ರ್ವಳರಾಖೇಚರವಿದ್ಯೆ ಸಾರ್ದ ಬೞಿಕೆಂತುಂ ಮಾಣ್ಬರೇ ದುರ್ಧರಂ ।
ಕುಲಿಶಾಸ್ತ್ರಂ ವಿಲಯಾನಲಾಂಶುರಸದಿಂ ನೀಂ ಮಾಡಿದಂದಾಜಿನೋ
ಬಲದಿಂದಾಮಹಿಶೈಲನೋದ್ಯಮನದೊಳ್ಮೇಲೆತ್ತಿಬೂತಟ್ಟುಗುಂ ॥ ೭೦

ವ॥ ಎಂಬುದುಂ ಚಿತ್ರಲತೆಗಿನ್ನೊಂದತಿರಾಗಲತಾಜನ್ಮಾನಹಸ್ಯಂ ತಮಗೆ ಹಸ್ತಗತಮಾದ ಖೇಚರವಿದ್ಯೆ ನಿಶಾಚರನಂ ಗೆಲ್ವುದಕ್ಕೆನಿಗಮಮಾದಂತಿರಾಕ್ಷಣಂ ದಿಗ್ವಿಜಯೋದ್ಯುಕ್ತರಾಗಿ ಬಲಾಧ್ಯಕ್ಷನಂ ಪಡೆಗೆ ಸಾಱಲ್ವೇಳ್ದಾವಿಜಯಪ್ರಯಾಣ ಭೇರಿಯಂ ಸೂಘೈಸಲೊಡಂ

ದೆಸೆಯೆಂಟುಂ ವಾರ್ಧಿನಾಲ್ಕುಂ ವಿಯದಿಳೆಯೆರಡುಂ ತಾಗಿ ತಟ್ಟುತ್ತುರೆಕ್ಷೋ
ಭಿಸಿ ತಾಳಂ ಕೂಡಿ ಕೋಳಾಹಳಮಯಮೆನಿಸಲ್ಸಾಲ್ಗೆ ಮೂಲೋಕಮಂ ಮು ।
ದ್ರಿಸಿದತ್ತರ್ಕಾಶ್ವಕಂಠಸ್ಖಲಿತರದಯುಗಂ ಪದ್ಮಜಾಗ್ರಾರಹಸ್ತ
ಪ್ರಸಭಪ್ರೋಡ್ಡೀನಪಾದಂ ಮುಸಲಿಹರಿಪರಸ್ಥಾನಭೇರೀನಿನಾದಂ ॥ ೭೧

ವ॥ ಆ ಪ್ರಯಾಣಭೇರೀಭಾಂಕಾರಮೆಂಬ ಹೂಂಕಾರದೊಳೆ ಗೃಹಮಹತ್ತರಮಹೇಂದ್ರಜಾತಿ ಕರಾಕರ್ಷಣಂ ಮಾಡಿದಂತೆ ಪುರಬಹಿರ್ವಣದ ಪರಿಸರಪ್ರದೇಶದೊಳ್

ಎಡದೊಳ್ಪಿಂಗಲಿ ಮುಟ್ಟು ಮೇಲ್ವಟಿದುದಿಂಬಿಂದೊಂದೆ ತಾರ್ಗೊಟ್ಟು ಪೂ
ಗಿಡುವಂ ಸಾರ್ದುದು ಗಂಡುಪೋದಗೆ ಪಸುಂಬಂ ಕಟ್ತೆ ಕಬ್ಬಳ್ಳಿ ಬಂ।
ದೆಡದೊಳ್ದೀಪ್ತದೊಳಾಂದುವೇಱಿತು ಸೃಗಾಲಂ ತಿರ್ದಿ ಮೇಲ್ದಿಣ್ಣೆಯಂ
ನಡೆವಾಗಳ್ ಪೊಱವೀಡುವಿಟ್ಟೆಡೆಗೆ ವಿಷ್ವಕ್ಸೇನತಾಳಧ್ವಜರ್ ॥ ೭೨

(ಹರಿಣಿ)

ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂ
ಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂ ।
ಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂ
ತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ ॥ ೭೩

ಹಯಪರ್ಯಾಣಪ್ರಭಾಮಂಜರಿ ಗಜಭಿದುಸಿಂದೂರರಾಗಂ ಭಟಶ್ರೇ
ಣಿಯ ಚೆಂಬೊಂಗಟ್ಟು ತಳ್ತಡ್ಡಣದ ಪೊಳೆಪು ಕೆಂದೂಳಿಯಿಂದೊಂದಿ ಕೆಂಬ ।
ಟ್ಟೆಯ ಮೇಲ್ಗಟ್ಟಾದುದಾಚೌಕಿಗೆಯ ಗುಡಿಯ ಗೂಡಾರದೊಡ್ಡಿಂಗೆ ತದ್ದಿ
ಗ್ಜಯಯಾತ್ರೋದ್ಯೋಗದೊಳ್ ಕೊಲ್ಲಣಿಗೆ ಮೆಱೆಯೆ ಬರ್ಪಲ್ಲಿಭೂಪಾಲಸಿಂಹರ್

ವ॥ ಅಂತು ಬಿಟ್ಟ ವಿಜಯಪ್ರಸ್ಥಾನಶಿಬಿರದಿಂ ತಳರ್ದು ನಿಚ್ಚವಯಣದಿನೆತ್ತಿ ಬರ್ಪನ್ನೆಗಮಿತ್ತಲ್

ಆದೂತಂ ವಾರಣಾಸೀಪುರಮನಿರದೆ ಪೊಕ್ಕೋಲಗಂಗೊಟ್ಟು ಕುಳ್ಳಿ
ರ್ದಾದೈತ್ಯಾಧೀಶನಂ ಕಂಡೆಱಗಿ ಒಟಿಕೆ ಮುಂದಿಕ್ಕುತುಂ ಪ್ರಾಭೃತಂ ರಾ ।
ಜಾದೇಶಂ ಕಾಣ್ಕೆಯಾಗಿಂತಿರೆ ನುಡಿದನಿದೇಂ ದೇವ ನೀನಟ್ಟಿ ಬೇಟ್ಪಂ
ತಾದೀನರ್ಗಣ್ಯರೇ ನೀಂ ಮುನಿದೊಡೆ ಬೆಸಕೆಯ್ವರ್ಬೆಸಂಗೆಯ್ವರಲ್ಲರ್ ॥ ೭೫

ವ॥ ಅದಲ್ಲದೆಯುಂ

ತಾನಟ್ಟಿವಟ್ಟು ಬೇಡುವ
ದಾನಗಜಂಬೆರಸು ಬಂದು ಕಂಡಪೆವಾಮೆಂ ।
ದಾನಡೆದು ಬರುತ್ತಿರ್ದರೆ
ಮೀನ್ನುಂಬುಬ್ಬರ್ಪ ತೆಱದೆ ದಿನಪತಿಗಿದಿರಂ ॥ ೭೬

ಎಂದೊಡೆ ಕೋಪಾನಳನಿಂ
ಬೆಂದರಲಂತಾಸ್ಯಮರಲೆ ತಲೆದೂಗುತ್ತುಂ ।
ಮಂದಸ್ಮಿತಮುಂ ಶ್ಮಶ್ರು
ಸ್ಪಂದನಮುಂ ಕಣ್ಣ ಕೆಂಪುಮೊಗೆತರೆ ದನುಜಂ ॥ ೭೭

ಕಿವಿವೆತ್ತಂದಿಂದಮೆಮ್ಮೊಳ್ಳೊತ್ತಡರ್ದಿಱಿದಪೆಮೆಂಬಂ ನರಂ ಕೇಳ್ದನಿಲ್ಲಿಂ
ದುವಗಂಬೊಲ್ ಚೋದ್ಯಮೋ ಕೊರ್ವಿದ ಕುೞಿ ಪುಗದೇ ಬಾಣಸಂ ಒರ್ವೆ ಬಂದಾ
ಡುವುದುರ್ವೀಭಾರನಿರ್ವಾಣದ ಸಮಯಮೊ ಪೇೞ್ಮಾರಿಗಂ ಬೈರವಂಗಂ
ಜವರಾಯಂ ವಿಶ್ವಮಾಹಾಲಯವಿಧಿಯೊಳಪೋಶಾನಮಾವಂದಮೋ ಮೇಣ್ ೭೮

ವ॥ ಎಂದು ಭುಜಬಲೋದ್ರೇಕಮಂ ನುಡಿವ ಮಧುವಿನ ವಿಧುವದನ ವಳಯದಂತಕೌಮುದಿಯಿನಾಸಭಾಸಮುದ್ರಕ್ಷೋಭಮಸದಳಮಪ್ಪಿನಮಹಮಹಮಿಕೆಯಿನೆೞ್ದ ಸುಭಟಪೇಟಕದೊಳ್ ಪಟ್ಟುತರದ ಗಜಸಾಧನಾಧಿಪತಿ ಮನ್ನಣೆಯ ಮೈಮೆಯ ದಾನವಸೇನಾನಿಯೊರ್ವಂ

ಬೇಡುವ ಸಾಧು ನೀಂ ಕುಡದ ಗಂಡರವರ್ಬೆಸಸೆನ್ನನೊರ್ವನಂ
ಕೋಡಗಗಟ್ಟುಗಟ್ಟಿ ಹಲಿಕೃಷ್ಣರನಾಳಿಸಿ ತಾಳವಟ್ಟದೊಳ್ ।
ಮೂಡಿದ ಹಾಹೆಯಂತೆೞಲೆ ವೈರಿರ್ಝುಳಪ್ಪನನಿಂದು ಕಂಬದೊ
ಳ್ನೋಡ ನೃಪೇಂದ್ರ ಕಟ್ಟದೊಡೆ ಬೀರದ ಬಟ್ಟೆಗೆ ಕೈದುಗಟ್ಟಿದೇಂ ॥ ೭೯

ವ॥ ಎನೆ ಮತ್ತೊರ್ವಂ ಖೇಚರಭೂಚರಪತಿಪ್ರತಾನದ ಮೊತ್ತಮೊದಲಿಗಂ ಮುಂಗೆಯ್ಯ ಕಂಕಣಮಂ ತಿರಿಂಪಿ ನೂಂಕುತುಂ ಜಾಱುವ ಝುಳವಟ್ಟಿಗೆಯ ನೇಱೆ ಸಾರ್ಚುತ್ತುಮೆೞ್ದು

ಕೊಡಗೂಸಾಗಿಸಿದತ್ತು ನಿನ್ನತುಳಬಾಹಾಸಾಹಸಂ ಸಿಂಗಮಂ
ಸಿಡಿಲಂ ಮಾರ್ಪೊಡಮೆಮ್ಮನಿಂದುವರೆಗುಂ ಮಾಱಾಂಪರಿಲ್ಲೆಂದು ಮಾ ।

ನುರ್ಗಡಿಯಾಯ್ತಿನ್ನವಧಾರಿಸೆಂದನೆಲೆ ಕಣ್ಕೆಂಪೇಱಿಪೆಂ ನಿನ್ನ ಕ
ಣ್ಣಸುಗೆಂಪೇಱದ ಮುನ್ನೆ ವೈರಿನೃಪರಕ್ತಾಸೇಕದಿಂ ಲೋಕಮಂ ‖ ೮೦

ವ‖ ಆತನಿಂಬಟಿಕ ದೈತೇಯಚಕ್ರವರ್ತಿಯ ಮಾತುಲಂ ಕರಾಳಕಂಠಂ

ಜವನಂ ಬಾಳ್ದಲೆದಂದೆನಾಂ ಬಿಡಿಸಿದೈ ಮುನ್ನೊರ್ಮೆ ದಿಕ್ಪಾಲರಾ
ಹವದೊಳ್ ಟಂಕವಿಟಂಕರಂ ಬಿಡಿಸಿದೈ ಕೊಲ್ವಲ್ಲಿ ದೇವಾಸುರಾ ।
ಹವದೊಳ್ನಿಂದೊಡೆ ಮೆಟ್ಟಿ ನೀಟದೆ ಬಿಡೆಂ ನಿನ್ನಾಣೆ ಕೇಳ್ ರಾಮಕೇ
ಶವರಂ ನೀನಕಟೆಂದು ಮಾಣಿಸಿದೊಡೇಂ ನಿನ್ನಾಣೆ ಚಕ್ರೇಶ್ವರಾ ‖ ೮೧

ಬಲಕೃಷ್ಣರೆನಗೆ ರಣದೊ
ಳ್ತಲೆದೋಱಿ ಬಟಿಕ್ಕೆ ತಮ್ಮ ಪೆಗಲೊಳ್ಪಲೆದ ।
ತ್ತಲೆಯುರೆನೆ ತಾಮೆ ಕೆಯ್ಯೊ
ಳ್ತಲೆವಿಡಿಕೊಟ್ಟೆಧಿಗೆ ನೀನೆ ಮಾಱಿದ ತಲೆಯಂ ‖ ೮೨

ವ‖ ಎನೆ ಮತ್ತೊರ್ವಂ

ಒರಸಿ ಬಿಸುಟಪ್ಪೆನರಿಯುಂ
ಕರವಾಳಿಂದೆನ್ನ ಬೆಸಸು ಬೆಸಸೆನ್ನಂ ಸಂ ।
ಗರದೊಳೆನಗಿದಿರೆ ಸೋಮನ
ತರುವಲಿಗಳ್ಬಿಳಿಯ ಕರಿಯ ನರಕೀಟಂಗಳ್ ‖ ೮೩

ವ‖ ಅಂತು ಮಸಗಿ ವೀರಾಲಾಪಕೋಲಾಹಲಮನುತ್ತಂಭಿತಹಸ್ತ
ಕಂಕಣಝುಂಕಾರಂ ಮುನ್ನೆ ಝುಂಕಿಸಿ ಬಟಿಕ್ಕೆ ಮಧುಕೈಟಭನಿಂತೆಂದಂ

ಪುಟುವಿಂಗೆ ಕುಪ್ಪೆವರಮೇಂ
ತ್ರಿಲೋಕಮೊಂದಾಗಿ ಬಂದು ತಾಗುವೊಡಕ್ಕುಂ ।
ಮುಳಿಸುಂ ಮೂದಲೆಯುಮಿದೇಂ
ಗಳ ಗೇಹಾನರ್ಥಿಭಾವಬಾಹ್ಯಾಲಾಪಂ ‖ ೮೪

ವ‖ ಎಂದು ನಿವಾರಿಸುತ್ತುಂ

ನಡೆಯಿಂ ಸೂಚೈಸಿಮೇಟೆನ್ನದೆ ಕಟಕಮನಿಂದೆತ್ತವೇಟೆನ್ನದೆತ್ತಲ್
ಪಡೆಗೆಲ್ಲಂ ಸಾರವೇಟೆನ್ನದೆ ವಿಸದೃಶವಿದ್ವೇಷಮುದ್ವೇಗಮಂ ಮುಂ ।
ದಿಡೆ ಮತ್ತೇಭಾಶ್ವವೈಹಾಳಿಗೆ ವನದ ವಿನೋದಕ್ಕೆ ಪೇರ್ವೆಂಟೆಗೆಂದುಂ
ನಡೆವಂತೆಟ್ಟಿಂ ಸಭಾಸಂಗದೊಳವಗಹಸಾರಂಭದೊಳ್ದಾನವೇಂದ್ರಂ ॥ ೮೫

ವ॥ ಎಟ್ಟು ಕುಬೇರಂ ಮುನ್ನೆ ಭರಕ್ಕಟ್ಟಿ ಕಪ್ಪವಿತ್ತ ಪುಷ್ಪಕವಿಮಾನವಂ ವಿದ್ಯಾಧರಸ್ಕಂಧವಾಹಕರವಟ್ಟೈಸಿ [1] ದುದನೇಱಿ ಪೊಱಮಡುವಾಗಳ್ ಮೇರೆದಪ್ಪಿದವಾರಿಧಿಚತು [2] ........ತರಂಗಸಹಸ್ರಂ ಗಳಂತೆ ನಿರ್ದೇಶಿತ ಸ್ಕಂಧಾವಾರಂಬರಮಳುಂಬಮಾದ ಸೈನಿಕದೊಳಗೆ

ಕಟ್ಟಿದುವೆತ್ತಿಸೋರ್ವ ಮದಮಂ ಕಿಡೆ ಡೆಂಕಿಪ ಹಸ್ತಿ ಕಣ್ಣನೀ
ರಿಟ್ಟುವು ದಂಡೆಯಿಂ ಕೆಡಱಿ ಕೆಂಡಮುದಗ್ರಹಯಾಳಿ ನುರ್ಗಿ ಮೇ ।
ಗೊಟ್ಟಿದ ಕೈದುಗಳ್ಮುಱಿದು ನಿಂದುವು ತೇರ್ಧರೆ ನುಂಗಿದಂತೆ ಸಾ
ಲಿಟ್ಟುವು ಮುಂದೆ ಕಟ್ಟಿದೊಱೆಯಂ ನೆಱೆದುರ್ಚಿ ಪದಾತಿಹೇತಿಗಳ್ ॥ ೮೬

ಅವನ ಪೊಱೆಗಲಸಿದಂತೆವೊ
ಲವನೀಕಂಪನಮಳುಂಬಮಾದುದು ತೇಜ ।
ಕ್ಕವಚತ್ರ್ಣಂತೆಯೆ ಮುಸುಕಿ
ಟ್ಟುವು ದಿಗ್ದಾಹcಗಳೆಯ್ದೆ ಮಧುಕೈಟಭನಾ ॥ ೮೭

ವ॥ ಅದಂ ಕಂಡು ಕೆಲದೊಳ್ ಬರ್ಪ ಮಂತ್ರಿಮಹತ್ತರರೊಳಾದ ಗುಜುಗುಜಿಯಂ ಕಿವಿಗಿವಿಗೇಳ್ದು ದಿವಿಜದ್ವಿಷಂ ಪಾವಕರ್ಣಕನ ಮಗಂಗಿಂತೆಂದಂ

ಇದು ದಲ್ ದಿಗ್ವಿಜಯcರಣಾಜಿರದೊಳಾರಾನುಂ ಭರಂಗೆಯ್ದು ತಾ
ಗಿದಪರ್ಬೆಟ್ಟುದೆಯಾಬಲಂ ವಿಧುಬಲಂ ತಾರಾಬಲಂ ನೋಡ ಬೇ ।
ಡಿದ ಬೇಳಂಬಮನಂತಕಂಗಮೆನಗಂ ತೀರ್ದಂಬುದೇಂ ವಕ್ರಮೆಂ
ಬುದುಮೇಂ ಮಿಕ್ಕಿನ ಹಕ್ಕಿಯೊಳ್ ಹಱುಣೆಯೊಳ್ ಸೇನಾಸಹಸ್ರcಗಳುಂ ॥ ೮೮

ವ॥ ಎಂದು ತೋಱಿದುತ್ಪಾತಕ್ಕೆ ಸೆಡೆಯದೆಯುಂ ಪೊಱಬೀಡಿನೊಳ್ತಡೆಯದೆಯುಂ ಷಡಂಗಬಲವಾಹಿನೀವಾರಾಂನಿಧಾನಂ ಸಪಾದಲಕ್ಷಾಕ್ಷೋಹಿಣೀವಲ್ಲಭನೆತ್ತಿ ಬರ್ಪಾಗಳ್

---

[1] ಕ ಮದವೇಱಿ. [2] ಕ. ಚತುಃ ಕದನಮುಂಗೊಳ.

ಧರೆ ಕಿಬ್ಬೆರ್ದಂತೆ ಚಾತುರ್ಬಲಪದರಜಮೊಟ್ಟೈಸಿ ದಿಕ್ಚಕ್ರಮಂ ದಿ
ಕ್ಕರಿಗಳ್ಗುದ್ಗೀರ್ಣಮದೋದ್ರೇಕದಿನೆಸೆದುವು ರೋದೋಂತದೊಳ್ ಪಲ್ಲಣಂ ಬಿ ।
ಟ್ಟರುಣಂ ವೇಲ್ಕೈಸಲಿಚ್ಛೈಸಿದನಿನಹಯಮುಂ ಮತ್ತಮೊತ್ತಂಬದಿಂ ಬಿ
ಟ್ಟರೆಯುಂ ಮಲ್ಲಾದೊಡೊಡ್ಡೈಸಿದುದು ಕೆದಱಿ ಪಕ್ಷಾಂತರಾಳಂ ಮರಾಳಂ॥೮೯

ಬಿಡುವೆಡೆಗೆ ಪೊಡವಿಯೆಯ್ದದು
ನಡೆವೆಡೆಗೆಯ್ದದು ದಿಶಾತಲಂ ಶಸ್ತ್ರಾಸ್ತ್ರಂ ।
ಬಿಡುವೆಡೆಗೆಯ್ದದು ಚಕ್ಕನೆ
ನಡೆದುದು ಪೆರ್ವಡೆ ನಿಶಾಚರಾಧೀಶ್ವರನಾ ॥ ೯೦

ವ॥ ಅಂತು ನಿಚ್ಚವಯಣದಿನೆತ್ತಿ ನಡೆದು ಸುಪ್ರಭಪುರುಷೋತ್ತಮರ ಬಿಟ್ಟ ಬೀಡಿಂಗೆ ಕಟ್ಟಿದಿರೊಳ್ ನಿಸ್ಸಾಳಶಬ್ದಶ್ರವಣಮಾತ್ರಮನಳವಿಗೊಟ್ಟು ಬಿಟ್ಟು ಮಱು ದೆವಸಮುದಯಸಮಯದೊಳುದಯಿಸುವ ಸಹಸ್ರಕರಮಂಡಲಕ್ಕೆ ಮಾಱಂಕಮಾದ ತೇಜಃಪ್ರತಾಪಂ ಮೂಜಗಮನೆಯ್ದೆ ಕಣ್ಣುಳ್ಕಿ ಬೆಳ್ಕುಱಿಸುವಿನೆಗಂ ಪರಿವ ಪಾಱುವ ಶರಭಂಗಳ್ ಪೂಡಿದ ಪೊನ್ನ ಕತ್ತಳರನ್ನದ ಬೆಸುಗೆಯೊಳಗೆ ಪಿಡಿದ ಮುತ್ತಿನ ಕೀಲೊಳೆ ಬಿಡದೆ ಬೀಸುವ ಪಲವು ಚಾಮರದ ಬಿಚ್ಚಳಿಪ ಕುಳಿಕನ [1] ಪಟಯಿಗೆಯ ಪಱಿವಡಿಯುಮೆಡದೊಳಂ ಬಲದೊಳಮಳವಡಿಸಿ ನಿಂದ ದಂಡಿಗಳ ದಂಡನಾಯಕರ ದಾನವಸೇನಾದಿಗಳ ಕಡಪಡಂಗಳುಂ ಮಾರ್ಗಪ್ರಹಾರಪ್ರಹನ್ಯಮಾನಜನ್ಯತೂರ್ಯನಿರ್ಘೋಷಂಗಳುಂ ಝುಮುಘಂಟಾಸಮೂಹಜಯಘಂಟಾಸಹಸ್ರಸಂಪುಟನ ಕೋಳಾಹಳಂಗಳುಮಾಭೀಳಮಾಗೆ ಕೊಳಱಿವೊಡ್ಡಿದ ಪದ್ಮವ್ಯೂಹಶಕಟವ್ಯೂಹಾದಿನಾನಾವ್ಯೂಹಸಮೂಹಕ್ಕೆ ತನ್ನ ಬಾಹಾಸಾಹಸಮೆ ಸನ್ನಾಹಮಪ್ಪಿನಮರನೆಲೆಯನಿಂ ಕೇವಳಸುರಚಕ್ರಾಧಿಪನೊಳೊಡ್ಡಿ ನಿಂದಾಗಳ್

ಅದು ಬಂದೊಡ್ಡಿತ್ತು ರೌದ್ರಾದ್ಭುತಭರದಿ [2] ನೆಲೆಮುಟ್ಟಿತಾಕಾಶಮಂ ಸು
ತ್ತಿದುದಾಶಾಚಕ್ರಮಂ ತುತ್ತಿದುದವನಿಯನೆಂಬಂತಿರೀವ್ಯೂಹಮಾವ್ಯೂ ।
ಹದ ಬಿಣ್ಪಂ ನೋಡಿ ಬೀಡುಂ ಪುಳಕದ ಕಳೆ ಪುಟ್ಟಲ್ಕೆ ಬಾಹಾತುಳಾದಂ
ಡದೆ ತೂಗಲ್ಸಾಲ್ಗುಮೆಂಬಂತಿರೆ ಮುರಮಥನಂ ನೋಡಿದಂ ತನ್ನ ಮುಯ್ಪಂ ॥

[1] ಕ. ಪಟವಿಗೆ.  [2] ಕ. ರಸದಿ.

ವ॥ ಆಗಳ್ ವಿಮಾನಯಾನವಾಹನಪಾಳೀಕೇತನಾತಪತ್ರಚಮರಜಕದಂಬದ ಬಂಬಲ್ ತುಱುಗಲುಂ ತಮತಮಗೆ ಮೆಱೆಯೆ ತಿಂತಿಣಿಗೊಂಡು

ಇನಚಂದ್ರಾದಿಗಳೀಕ್ಷಿಸಲ್ಪಡೆಯರಾಸಂಗ್ರಾಮಮುಂ ಛತ್ರಕೇ
ತನಸಂದೋಹದ ಸಂಧಿಯಂ ಬಗೆದು ನೋಡುತ್ತಿರ್ಪಿನಂ ಬಾನೊಳೆ ।
ಳ್ತೆನಿತಿಂಬಿಲ್ಲದೆ ಬಂದು ಸಂದಣಿಸಿ ನೋಡಲ್ಕಿಂದುದಿಂದ್ರಾದಿದೇ
ವನಿಕಾಯಂ ಗಿರಿಶಾದಿದಿಕ್ಪತತಿ [1] ಪಾಳೋಮ್ಯಾದಿದೇವೀಗಣಂ ॥ ೯೨

ಮಕರವ್ಯೂಹಮನೊಡ್ಡಿ ನಿಂದನಸುರಂ ಲೋಕಕ್ಕೆ ಕಲ್ಪಾಂತಕಾ
ಲಕೃತಾಂತಂ ಮುಳಿದೆಯ್ದೆ ಬಾಯ್ದೆಱೆದವೊಲ್ತದ್ವ್ಯೂಹಮಂ ನೋಡಿ ಸ ।
ಮ್ಮುಖದೊಳ್ತಾಂ ಮೊನೆಯಾಗೆ ಭೇದಿಸುವ ಸೂಚೀವ್ಯೂಹದೊಳ್ದಾನವಾಂ
ತಕನಾಂತಂ ಪೆಱಗಾಂಕೆಯೊಳ್ನಿಲೆ ಬಲಂ ಸಾಹಿತ್ಯರತ್ನಾಕರಂ ॥ ೯೩

ಗದ್ಯ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ ಮುನೀಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್ ಸುಪ್ರಭ ಪುರುಷೋತ್ತಮಸಮರಾರಂಭವರ್ಣನಂ ತ್ರಯೋದಶಾಶ್ವಾಸಂ ಸಂಪೂರ್ಣಂ

---

[1] ಕ. ದಿಕ್ಪತಿಗಳುಂ.

# ಚತುರ್ದಶಾಶ್ವಾಸಂ

ಶ್ರೀವರನುಂ ದ್ವೈತೇಯುಮು
ಹೀವರನುಂ ವ್ಯೂಹಮುಖದಿನಾಂತಿರೆ ಕಾಲಂ ।
ಕೈವೀಸಿದಂತೆ ಬಳನೇಂ
ಕೈವೀಸಿದನೋ ವಿನೇಯಜನಮುಖತಿಲಕಂ ॥ ೧

ವ॥ ಅಂತೊಡನೆ ಕೈವೀಸೆ ಎರಡುಂ ಬಲಂಗಳಿಸುವ ಯಿಡುವ [1]ಯಿಱುವ ಪೊಯ್ವ ನಾಲ್ಕುಂ ತೆಱದ ಶಸ್ತ್ರಾಶಸ್ತ್ರಮುಖಂಗಳೊಳ್ ತಟ್ಟುಂತಾಱುಂ ಬೀಟ್ವ ಚತುರಂಗಪೃತನಾಪ್ರತನದ ತುಮುಲಸಮರಸಂಘಟ್ಟನಾಕಾಂಡಪ್ರಚಂಡಪ್ರಳಯ ಪ್ರಕ್ಷೋಭದೊಳಗೆ

ರಣಧೂಳೀಪಟಲಾಂಧಕಾರಗಿಳಿತಂ ನಿರ್ಭೇದಿಶಸ್ತ್ರಾಸ್ತ್ರವೀ
ಕ್ಷಣಜಾಲಂ ಕದಳೀಪ್ರಘಾತಪರಿಕಲ್ಪೀಭೂತಸಂಗ್ರಾಮಕಾಂ ।
ಗಣದೊಳ್ಸದ್ಭಟವಾಜಿವಾರಣಕಬಂಧೋನ್ಮುಕ್ತರಕ್ತಪ್ರವ
ರ್ಷಣಜಂಬಾಲಿತರೇಣು ಕಂಡುದುಭಯವ್ಯೂಹಂ ನಿಜೋದ್ವಾಹಮಂ ॥ ೨

ವ॥ ಅಂತು ಕುಂತಾಕುಂತಿಯುಂ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಮಾದ ಕಾಳೆಗದ ಕಣ್ಮುಟ್ಟಿನೊಳೊಂದಂಬುವೀಡಿನೊಳಗೆ

ಮದಗಂಧಕ್ಕೆ ಪರಸ್ಪರಂ ಮಸಗಿ ಕೋಪಾಟೋಪದಿಂ ತಳ್ತು ತಾ
ಗಿದ ದಂತಂಗಳ ಕಿಚ್ಚು ಪತ್ತಿ ತಗುಳ್ವಂದಳ್ಳಿಂಬಿನಂ ಬೂದಿ ಪಾ ।
ಱಿದ ಕೆಂಡಕ್ಕೆಣಿಯಾಗೆ ಮೇಗೆ ಕಡಿಕೆಯ್ವಾರೋಹಕರ್ಬೇಗೆ ಪ
ತ್ತಿದ ಬೆಟ್ಟಂ ಪೊಣರ್ವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ ॥ ೩

ತೆಱಪಂ ನಿಟ್ಟಿಸಿ ಪೊಕ್ಕು ಪಾಯ್ದುಲಿವ ಘೋಟಾಯ್ಲರ್ಕಳಿಂ ವಾಜಿ ಕು
ಕ್ಕುಱಿಸುತ್ತಿರ್ಪಿನಮಟ್ಟೆಯಿಟ್ಟಳತೆ ವಾಱುತ್ತಿರ್ಪಿನಂ ಬಾಳ ಬ ।

1 ಕ. ಮಾದೊದೆರ್ವಲದ.

ಲ್ಮುಱಿಯುಂ ನೆತ್ತರ ಪೂರಮುಂ ನೆಗೆದು ಕಣ್ಗಿಂಬಾಯ್ತು ಬಾಣೆಂಬ ಕೆಂ
ಗೆಱೆ ಬೆಂಡೆರ್ದು ಕಲಂಕೆ ಮಾಣ್ಮಿಡುಕುವಂತತ್ಯುಗ್ರಸಂಗ್ರಾಮದೊಳ್ ॥ ೪

ತುಟಿಲ್ವಾಳ್ವಾಜಿ ಗಜಂಗಳಕ್ಷಯುಗಳಸ್ಥೂಲಾಗ್ರದೊಳ್ನಟ್ಟು ಕೋ
ದೆಬಲುತ್ತಿರ್ಪಿನಮಂಬು ತೀರ್ದು ಗಱಿಗಳ್ಗೇಣ್ಗೇಣ್ಗಳೊಳ್ಕುತ್ತಿ ಕೈ ।
ದೊಟಸುತ್ತಿರ್ಪಿನಮೊರ್ಮೊದಲ್ದವನ ಜಕ್ಕಂದೋಳದೊಡ್ಡೈದೆ ಮು
ಮ್ಮಟಿಯಪ್ಪಂತಿದಿರೇಱಿ ತಳ್ತುವು ರಥಾನೀಕಂ ರಥಾನೀಕದೊಳ್ ॥ ೫

ಶರದೊಳ್ ತಟ್ಟುಗಟ್ಟಿದುದು ದಿಕ್ತಟವಂಬಿನ ಹಂದರಿಕ್ಕಿದಂ
ಬರತಳವೆಂಬಿನಂ ತುಱುಗಿ ಬೀಟ್ವೊಡೆಯಚ್ಚಲಗಂಬು ತಾಗಿ ತ ।
ಳ್ತುರಿವುರಿಮಾಲೆಗಿಚ್ಚುವಱೆಗಾಣಿಸಿದತ್ತು ನಭಸ್ಥಳಂ ಜಿತೋ
ರ್ವರೆಯೆನೆ ಪಾಯ್ವು ಪಂದಲೆಗಳಂ ಬಯಲಂಗಣವಾಡುವಟ್ಟೆಯುಂ ॥ ೬

ವ॥ ಆಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಗಲದೆಗೆದ ಮೊಗದ ಹರಿಗೆಯಿಂ ಮುಗಿಲ ತೆರೆವಳಿಗೆದೆಗೆದ ಬಿರುಸಿಡಿಲಂತೆಯುಂ ಮಿಳ್ಳಿದ ಗಜದ ಮೊಗರಂಬದೆ ತೆರೆದೆಗೆದ ತಾಂಡವಧರನಂತೆಯುಂ ದೋರ್ವಳಾಟೋಪದಗುರ್ವಂ ತಳೆದು ಬತ್ತೀಸಕಡಿಯ ಬಾಹರ ಪುಟದ ಗುಳವದ ಕಣಂಗಳ ಕುಳಿಶದಳಂ ಪಳಕದ ಪಾರಡದುಜ್ಜಳಿಕೆಯುಂ ತುಳಿಲಸಂದರಂ ಪ್ರಳಯಕ್ಕೆ ಸಂಗಳಿಸಿ ನೆಗೆದ ಪನ್ನೆರಡುವರ್ಕಬಿಂಬಂಗಳನೊಕ್ಕೈಸಿ ತೆಗೆದು ಮೇಲೊಟ್ಟಿಕೊಂಡಂತೆಯುಂ ಮೇರುವಿನ ಶಿಖರದ ಕೊಳಲುಬಳೆದ ತಾಳಬನವನಾಳಿಗೊಂಡು ಪೊಂಬೆಸದ ಬೆಸುಗೆಯ ಪಿಂಬಕ್ಕದೊಳ್ ನೀಡುಂ ಬೀಸಿದ ಕರಿಯ ಬಿಳಿಯ ಝಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ ಬ್ರಹ್ಮಾಂಡ ಭಾಂಡಮನಡಕಿಲ್ಗೆಡಪುವಂತೆಯುಂ ಮದಜಳದ ಕದಡಂ ಕದಱಿ ಕೆದಱುವ ಕರ್ಣ ಚಾಮರದ ಕತ್ತಲೆ ಸಿಪ್ಪಿನ ಬಾಹರಕ್ಕೆಯುಂ ಬೊಕ್ಕರಿಸಿದ ತೋರಹತ್ತದಿನವನೀತಳಮಂ ಕವಳಮಂಕೊಳಲೆಂದು ಸಿಡಿಲಿಂ ಕಡೆಗಣಿಸಿದ ರಾಹುವಿನ ಹೊರಳೆ ನುರುಳೆಗವಿದಂತೆಯುಂ ಮೆಟ್ಟಿದ ಭರಕ್ಕೆ ಧರಣಿಯೋರ್ಗುಡಿಸೆ ಚತುರಂಗಬಲಮನಿತುಂ ಚಿತ್ರದ ಪಲಗೆಯಂ ತೊಡಗಡಪಿದಂತಳ್ಳಾಡಿ ತಳ್ಳಂಕುಗೆಡೆಯೆಯುಂ ನಡೆದು ಬಂದ ವೀರಜಳಪ್ಪನನುಭಯಬಲದ ನಡುವೆ ನೀಡಿ ಬಿಟ್ಟಿಕ್ಕೆ ರವಿಯ ಪಾಯ್ದು ತನ್ನ ಬಲಮಂ ಬೆನ್ನಿಕ್ಕಿಕೊಂಡು ನಿಂದಾಗಳ್

ನರದೇವಾಸುರಕೋಟಿ ಕೋಟಿತೆಱದಿಂ ಜೀಯೆಂಬಿನಂ ಕಣ್ಣ ಕೇ
ಸುರಿಯುಂ ಪುರ್ವಿನ ತಳ್ತ ಕರ್ಬೊಗೆಯುಮುಗ್ರೇಭಪ್ರತಾಪಕ್ಕೆ ಮು ।
ಪ್ಪುರಿಗೊಡುತ್ತಿರೆ ವೈರಿಸೈನ್ಯಮುದಿತಾಂಭೋರಾಶಿಮಧ್ಯಕ್ಕೆ ಮು
ಮ್ಮುರಿಗಾಯ್ದೊಪ್ಪಣ್ಮುವ ಕಾಲಕೂಟಮೊಗೆವಂತಿರ್ದಂ ಗರುತ್ಮದ್ಧ್ವಜಂ ॥ ೭

ವ॥ ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾಪಟಲಕ್ಕೆ ಸೂಚೀಯಾನೆಯುಂ ಮಾಡಿ ತಮ್ಮೊಳೊಂದೆ ಮೆಯ್ಯೊಳಣೆದು ನೂಂಕಿದಳವರಿಯೊಳ್ ಪೆಣೆದಣೆದು ಪೋೞ್ಪ ಮುರಿದಿಱಿದು ಸೀೞ್ವ ಮರಳೆ ಪೊರಳ್ಚಿ ನೂಂಕುವ ಉರುಳೆ ಕರುಳ್ಚಿ ನೂಂಕುವ ತೇನತೇನಂ ತಿವಿದು ಬಾನೊಳೀಡಾಡುವ ದುಗುಣತಿಗುಣಂ ತಿಱಿದು ದೆಸೆವಲಿಗೆಯ್ವ ನಿಘಾತದಂತದಂಡಂಗಳ ಕಿಡಿಯ ಕೆಂಡಂಗಳೊಳ್ ಪಕ್ಷಕಕ್ಷಂಗಳನುಚ್ಚಳಿಸಿ ನೆಗೆವ ನೆತ್ತರ ಸುಟ್ಟುರೆಗಳೊಳಂ ಕೊಡನೂಱಿ ಕೆಡೆವ ಮದಗಜಂಗಳುರಿ ಪತ್ತಿದಟ್ಟಗೆಯೊಟ್ಟಿಲಂತಿರ್ದುವು । ಮತ್ತಂ ಕಲ್ಪಾಂತಕೃತಾಂತನೆಂಬ ಬೇಡನ ಕೆಯ್ಯ ಕಾಳದಂಡದಂತಿರೆ ಪೊಡೆವ ಪೊಡೆದು ಪಿಡಿದು ಸೆಳೆವ ಸೆಳೆದು ಮರಳ್ಚುವ ಮರಳ್ಚಿ ಘನದ ಘಾಯದೊಳ್ ತತ್ತಱಿದಱಿವ ತಱಿದ ಕಡಿಗಳಂ ಬಿಡದೆ ಮೇಲೊಟ್ಟಿಕೊಳ್ವ ಕರಚಂಡಘಾತದೊಳ್ ತೊಂಡುಗೆಡದ ತುರಗದಳಂಗಳುಂ ಬಱಸಿಡಿಲ ಬಳಗಂ ಚಂದಣದ ಪೆರ್ಮರಗಾಡಂ ತಿಂಡುಗೆಡಪಿದಂತಿರ್ದುವು । ಮತ್ತಂ ಮಿಟ್ಟುದೇವತೆಯ ಮೊತ್ತರಿಸುವ ಮಾರಿಯುಮೆಕ್ಕೆಕ್ಕೆಯಿನಿಕ್ಕುವ ಮುಸಲ ದಂಡದಂತೆ ತೊತ್ತಳದುೞಿದು ಸುತ್ತಿ ಸುೞಿದೊಗೆದೊರಸುವ ಕಾಲಕಂಭಂಗಳೊಳನುಬ್ಬರಮೆತ್ತಿ ನಿರ್ವರಂ ಪೊಯ್ವ ತಾಳಪಟ್ಟದೊಳಂ ತಿವಳಿವಟ್ಟಮಾದ ತೇರತೆಕ್ಕೆಗಳ್ ಕಲ್ಲ ಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಬೆಂಡಿನಂತೆ ನುಗ್ಗುನುಱಿಯಾಗಿರ್ದುವು । ಮತ್ತಂ ಭೈರವನ ಜವನ ಪಲ್ಲ ಪಜ್ಜೆಯ ಬಲ್ಲಣೆ ನೂಕಿದಂತಿರಣೆಯುರಂ ನೋಣೆವ ನಖಮುಖದ ಕೋಳೊಳ್ ಜೀವವುೞಿದುೞಿದಂತೆ ನೆತ್ತರ ನೆಣದ ಕಾರಗಲಿಸಿನೋರಣೆಗೆಡದ ಖೇಚರ ಭೂಚರ ನಿಶಾಚರ ಪಜ್ಜೆಪ್ರತಾನಂ ಜವನುಂಡು ಕಾಱಿ ಕಡಲಿಟ್ಟಂತಿರಿರ್ದುದು ಅಂತು ತನ್ನ ಬಲಮನಿತುಮರ್ಧನಾರಿಯ ಬಲದಂತಿರಡಂಗಿಯುಂ ವೃದ್ಧನ ಬಲದಂತಿರೞಿದು ಪೋಗಿಯುಂ ಹರಡೆಯ ಬಲದಂತಿರದವೞಲನೊದವಿಪುವಂತುಮಲ್ಲದೆಯುಂ

ಪೊಡವಿ ಕಡಂಗಿ ನಿಂದುಗುಳ್ದುದೊಡ್ಡಿದ ಚಿತ್ರದ ಭಿತ್ತಿಯಂ ಸಿಡಿ
ಲ್ದೊಡೆದುದು ಸುಟ್ಟುರೆತ್ತಿ ಪಡೆ ಪೊಯ್ದುದು ನಂಜಿನಘಾಳಿಯೆಂಬಿನಂ ।
ಪಡಲಿಡೆ ಕೃಷ್ಣನೊಂದು ಗಜದಿಂ ನಿಜವಾಹಿನಿ ಕಂಡು ದಾನವಂ
ಕಿಡಿಕಿಡಿವೋಗಿ ತಾಂ ಪೊರೆದ ನಚ್ಚಿನ ಮಚ್ಚಿನ ದೈತ್ಯರೆಲ್ಲರಂ ॥ ೮

ವ॥ ಅದ್ಭುತನುದ್ಭಟಂ ಕುಂಜರಕರ್ಣನಶ್ವಂಕಠನುಷ್ಟ್ರೋದರನೇಕಜಂಘನೇಕಲೋಚನನುದರವದನಂ ಖುರನಾಶಂ ಖರಸನ್ನಷ್ಟಪತಾಕಂ ಪಾತಾಳಕೇತುತಾಳನಿಗರಣಂ ಜ್ವಾಲಾಲೋಮಂ ಕಾಲಚಕ್ರಂ ಕರಾಳನಖರನರಾಲದಾಡನಜಾಂಡಪೃಷ್ಟಂ ಭುಜಂಗಬಾಹುಪದಂಗಪಾಲಮೆಂಬವರ್ಮೊದಲಾದ ಪೆಸರಪೆಸರಱಿಕೆಯ ಲಕ್ಕಲೆಕ್ಕದ ರಕ್ಕಸರ ನಾಯಕರನೆಕ್ಕೆಕ್ಕಿಯಿಂ ಮೂದಲಿಸಿ ಬೆಸಸೆ

ಬಱಸಿಡಿಲಾಗಿ ಪೊಯ್ವ ಲಯಕಾಲಮಹಾಬಳನಾಗಿ ಬೇಗದಿಂ
ಮುಱಿವ ದವಾಗ್ನಿಯಾಗುರಿವ ಕೆಂಡದ ಪೆರ್ಮೞೆಯಾಗಿ ತಂಡದಿಂ ।
ದೆಱಗುವ ಬೆಟ್ಟವಾಗಿ ಜಿಡದೊತ್ತುವ ಕತ್ತಲೆಯಾಗಿ ಮುತ್ತಿ ಬೇ
ಸಱಿಸುವಗುರ್ವು ಪರ್ವಿ ಕವಿದರ್ದನುಜಾರಿಗತರ್ಕ್ಯವಿಕ್ರಮರ್ ॥ ೯

ವ॥ ಆ ಮಹಾದ್ಭುತ ರೌದ್ರ ವೀರವಿಕ್ರಮಪ್ರಚಂಡಪ್ರಳಯದೊಳ್ ಮಂದರಂಗೆಲ್ವಂತೆ ಮಂದರಧರಂ ನಿಂದು ಮಾರ್ಕೊಂಡು

ಪ್ರತಿಘಾತಪ್ರಕಟಾಸ್ತ್ರಶಸ್ತ್ರಚಯದಿಂ ದೈತೇಯಸಾಮಂತರ
ದ್ಭುತಮಾಯಾಮಯಶಕ್ತಿಯಂ ಕೆಡಿಸಿ ಭೂಮಾನಕ್ಕೆ ಬಂದಾಹವ ।
ಪ್ರತಿಮಲ್ಲಂ ಭಟಶೂಲಮಾಂಸಮಯಮಂ ಕ್ರೋಧಾನಳಂಗಿತ್ತನಾ
ಹುತಿಯಂ ತೋಮರ ಶಂಕು ಮುದ್ಗರ ಮುಸುಂಡೀ ಪಿಂಡಿವಾಳಂಗಳಿಂ ॥ ೧೦

ವ॥ ಮತ್ತಂ

ತಲೆವಱಿವಟ್ಟಿ ತಿಂದವಸುರರ್ಕಳ ತೋಳ್ಬಳೆವೋಗಿ ಬಿಟ್ಟು ಕೀ
ಳಲಗಿನೊಳೆಯ್ದೆ ಕುತ್ತಿದುವು ಪೆರ್ದೊಡೆಗಳ್ಕಡಿಖಂಡಮಾಗಿಯುಂ ।
ಕೆಲವಣಿಯಂ ಕಿಮುಳ್ದುಟಿದುವೇಟ್ದುರಿವೆಣ್ಣೆಯೊಳುಣ್ಮೆ ನೆತ್ತರೆ
ತ್ತಲುಮುರಿಪಿತ್ತು ಸತ್ತುಮಿದಿರಂ ಕೆಡಿಸಲ್ಬಳರೇಂ ಸಮರ್ಥರೋ ॥ ೧೧

ಎನಿತುಂ ಕೃಷ್ಣನ ಗಂಧಸಿಂದುರಮಹಾಕಾಳಂಗೆ ಕೈಬೋನಮ
ಪ್ಪಿನೆಗಂ ಮಾರ್ಪಡೆ ಕಂಡು ಹೇಸಿ ಹಳಿ ಬಂದಡ್ಡೈಸಿ ಬೂತಟ್ಟಿದಂ ।
ದನುಜಂಗೀಬಳಘಾತಿದುರ್ಬಲಮೆ ಖಡ್ಗಾಖಡ್ಗಿಯಿಂದೆಮ್ಮನಾಂ
ಪನಿತಿಂತುಳ್ಳೊಡೆ ಬರ್ಕೆದಂತವಿಸಿ ತಾನೆಂದಿಂಗೆ ಬಂದಾಂತಪಂ ॥ ೧೨

ವ॥ ಅಂತು ಬೂತಟ್ಟಿ ಭೂತಳಾಗ್ರದೊಳುಭಯಬಲದ ಕರಿತುರಗನರ ಕೋಟಿಗಳ ಪೇರಟ್ಟೆಯ ಬೆಟ್ಟುಗಳೊಳಂ ಪರಿವ ನೊರೆ ನೆತ್ತರಕಾಲ್ಪೂರಂಗಳೊಳ್ ಕಾಲೆಡೆಗಾಣದೆ ನಿದಾಘಸಮಯದ ಬಯಲ್ದೊಱೆಯಂತತಿಲೋಹಿತಸ್ಯಂದನನಾಗಿ ಪಿಡಿದ ವಜ್ರಜ್ವಾಲೆಯೆಂಬ ಕೋದಂಡದಂಡದ ಚಂಡಪ್ರಭೆಯೊಳಂಗವಟ್ಟದೊಳ್ ತೊಟ್ಟು ಮೆಱೆವ ಪೊನ್ನ ರನ್ನದ ಸನ್ನಣದ ಬೆಳಗಿನೊಳಮಭ್ಯಂತರಾಳಸಮುಧ್ಯ ದ್ಗತಭಾನುವಿನಂತೆ ವಿಯತ್ತಳದೊಳ್ ತಳತ್ತಳಿಸಿ ತಾಳಧ್ವಜನಾಂತು ನಿಂದಾಗಳ್

ಬಳಧೂತಾರಾವಪೂರ್ಣಾಹುತಿಹುತಭುಗ್ಜ್ವಾಲೆವೊಲ್ತೀವ್ರಕೋಪಾ
ನಳನಂ ಬ್ರಹ್ಮಾಂಡಮಂ ಮಂಡಳಿಸಿ ನೆರೆದು ನೋಡುತ್ತುಮಿರ್ದಪ್ಪರೀಸಂ ।
ಕುಳಮುಂ ದೇವರ್ಕಳುಮ್ಮೆಯ್ದೆಗೆದಗಿದೆರಡುಂ ಕೈಗಳಿಂ ಮುಚ್ಚಿ ಕಣ್ಣಂ
ಖಳನಂ ಕೈಕೊಂಡನುಗ್ರಾಜಿಯನೊಗೆದನಿಳಾದಾನಮಂ ದಾನವೇಂದ್ರಂ ॥ ೧೩

ವ॥ ಅಂತು ನೆಗೆದು ನಿಂದ ರಜನೀಚರಚಕ್ರಿಯ ನಿಶಾಚರಖೇಚರ ಭೂಚರ ಚಮೂಚಕ್ರಂ ಚಕ್ರಧರಾಗ್ರಜಂಗಾಕ್ರಮಿಸಿ ಕವಿಯಲೊಡಂ

ಇಱಿಯಲ್ಪೊಂಗುವ ದೈತ್ಯಹಂಸತತಿ ಪಟ್ಟಂಪಾಱೆ ನಾರಾಯಣಂ
ಬೆಱಗಾಗುತ್ತಿರೆ ನೋಟ್ಪವರ್ದನುಜರಾಜಂ ದರ್ಪದಾವಾನಲಂ ।
ಬಱಿದೋಱುತ್ತಿರೆ ಮೇರೆದಪ್ಪಿ ರುಧಿರಸ್ರೋತಸ್ವಿನೀಸಂಕುಲಂ
ಕಱೆದಂ ನಿಂದುಮಿದಂಬುವಾಹಕದವೊಲ್ಧಾರಾಶರಾಸಾರಮಂ ॥ ೧೪

ವ॥ ಮತ್ತಮಿತ್ತ ಗಜಾರೂಢನಾಗಿ ಕಾದುತ್ತುಮಿರ್ದು ಕಾಳಿಯಮರ್ದನಂ ಪಂದಲೆಯ ತಂದಲೊಡವಟ್ಟೆಗಳನಟ್ಟೇಱಿನೊಳಂ ಚುಮ್ಮನೆ ಕಱೆವ ನೆತ್ತರ ಪೆರ್ಮಡೆಗಳೊಳಂ ವ್ಯೋಮಸಂಗ್ರಾಮವನಕ್ಷರಮನಱಿದು ಪೆಱಗೆ ನಿಂದರೆನೆ ಲೆಯೊಳಗ್ರಜನಂ ಕಾಣದೆ

ಹೊರಜೆಯನುರ್ಚಿ ನಿಂದ ನಿಭೃತಾಸನದೊಳ್ ದೃಢವಾಗಿ ಕುಳ್ಳಿರೆಂ
ದಿರಿಸಿ ನಿಷಾದಿಯಂ ಪೆಱಗಣಾತನನುಗ್ರಮದೇಭವೇಘದಿಂ ।
ದಿರದೆ ಸಿಡಿಲ್ಸಿಡಿಲ್ದೊಗೆದವೋಲ್ಗಗನಕ್ಕೊಗೆದಣ್ಣನೆಂಬ ದ
ಳ್ಳುರಿಗೆ ಪತಂಗನಂತೆಱಿಗಲಾಟಿಪನಂ ಮಧುಕೈಟಭೇಂದ್ರನಂ ॥ ೧೫

ವ॥ ಮಾರ್ಕೊಂಡರಾತಿಬಲಮನಾಂಕೆಗೊಂಡಗ್ರಜಾತನಂ ಕೈಕೊಂಡು ತಾನೆ ಮುಂಕೊಂಡು ನಿಂದು

ಕಡೆದಂತಾಯ್ತು ಸಮುದ್ರಸಪ್ತಕಜಲಂ ನೊಂದಷ್ಟದಿಗ್ದಂತಿ ಬಾ
ಯ್ಬಿಡುತುಂ ಕುಳ್ಳಿರ್ದುವಗ್ಗಿ ತಳ್ಗಿ ನವಖಂಡೋರ್ವೀತಳಂ ಹಿಗ್ಗಿದ ।
ತ್ತುಡಿದತ್ತೆಯ್ದೆ ದಿಶಾದಶಪ್ರಕರಣಂ ತಾನೆಂಬಿನಂ ನೀವಿ ಜೆ
ವೊಡೆವೊಯ್ದಂ ಮುರವೈರಿ ವೈರಿಕುಲಚಿತ್ತಾಭಂಗಮಂ ಶಾರ್ಙ್ಗಮಂ ॥ ೧೬

ವ॥ ಅಂತು ನೆಗಟ್ದ ಸಮರಾವಷ್ಟಂಭಮಾಡಂಬರಮನಪ್ಪುಕೆಯ್ದು

ಕರದೊಳ್ಬಿಲ್ಮಂಡಲಾಕಾರದಿನಿರೆ ಪೊಱಮುಯ್ಯಂಗೆ ತೊಟ್ಟಂಬು ಮಟ್ಟಂ
ತಿರೆ ರೋದೋರಂಗದೊಳ್ನೋಟ್ಪನಿಮಿಷಜನಮಿಂತೆಂದುದೀ ಕೃಷ್ಣನೇನ ।
ಚ್ಚರಿ ತೋಡುಂಬೀಡುಮಿಲ್ಲೆಚ್ಚುತೆ ಪೆಣಮಯಮಾದಪ್ಪುದೋ ಬಲ್ಸಮುದಾಪ್ರ
ಸುರವೀರರ್ಕೊಲ್ವವೇಱುಂಬೆರಸೊಗೆದವರೆಲ್ಲಾಗದರೆಂಬಂತಿರೆಚ್ಚಂ ॥ ೧೭

ವ॥ ಅದಲ್ಲದೆಯುಂ

ಕರಿಯಂ ಬೇಡುವ ಬಾಯ್ಗಿದೊಂದಲಗಿನಂಬೊಲ್ದೇಱುವಂಗಕ್ಕೆ ಭಾ
ಸುರಭಲ್ಲಾಸ್ತ್ರಮಿದೊಂದು ನೀಡಿಬಿಡದಿಕ್ಕಲ್ಕಿಕ್ಕತಕ್ಕುಳ್ಳ ತೋ ।
ಳೆರಡಕ್ಕಂ ಕವಲಂಬಿದೊಂದೆಲವೊ ಕೊಳ್ಕೊಳ್ಳೆಂದು ಪೂಣ್ದೆಚ್ಚನ
ಚ್ಚರಿಯಪ್ಪಂತು ಜನಾರ್ದನಂ ಮುನಿದು ನುಂಗಲ್ಮುಟ್ಟಿವಂದಿರ್ದನಂ ॥ ೧೮

ವ॥ ಅಂತು ಮುಟ್ಟಿ ಮೂದಲಿಸಿ ವೆಟ್ಟಿನಿಂದೆಚ್ಚ ಬಿಚ್ಚರಿಕೆಗೊಚ್ಚತಂ ಕೆಳರ್ದು

ಧರೆಯುಂ ದಿಕ್ತಟಮುಂ ವಿಯತ್ಪಟಲಮುಂ ಧಾರಾಕರೋತ್ಪಾತದಿಂ
ತಿರಿಗುತ್ತಿರ್ಪನೆಗಂ ತಿರಿಪ್ಪಿ ಮಧು ಕೋಪಾಟೋಪದಿಂದಿಟ್ಟೊಡು ।

ದ್ಧರಚಕ್ರಂ ಬಿಳವಂದು ನೀಲಗಿರಿಯಂ ಪೂರ್ವಾದ್ರಿಗೆತ್ತಿರ್ದ ಭಾ
ಸ್ಕರನಂತಿರ್ದುದು ದೇವ ನೀಂ ಬೆಸಸೆನುತ್ತುಂ ಕೃಷ್ಣನಂಸಾಗ್ರದೊಳ್ ॥ ೧೯

ವ॥ ಅಂತಾತ್ರಿಖಂಡಮಂಡಳಾಧಿಪತಿಯ ರಾಜ್ಯಲಕ್ಷ್ಮಿ ಚಕ್ರವರ್ತಿಪ್ರಭಾವ ಮಂ ತಂದು ತನಗೋಲಗಿಸಿದ ರತ್ನಪಾತ್ರದಂತೆ ಬಲದ ಭುಜದೊಳ್ ತಳತ್ತಳಿಸುತಿರ್ದ ಚಕ್ರರತ್ನಮಂ ಕಳೆದುಕೊಂಡು

ಅನಿಲಪಥಕ್ಕೆ ಪಾಱು ತಲೆ ಪೋಪಿನ ಕೋವರಚಕ್ರದಂತೆ ತಿ
ಣ್ಣನೆ ತಿರಿದುರ್ವರಾತಳಕೆ ಬೀೞ್ವಿನೆಗಂ ತೆಗೆದಿಟ್ಟನಿಟ್ಟಳಂ ।
ಮುನಿದೊಡೆ ಭಟ್ಟಗುತ್ತನ ಕಟಾರದವೊಲ್ ನೆಱೆ ತನ್ನ ಕಯ್ದು ತ
ನ್ನನೆ ತಱಿದೊಟ್ಟಿ ದಾನವಧರಾತಳವಲ್ಲಭನಂ ಚತುರ್ಭುಜಂ ॥ ೨೦

ಬಿಡೆನಾಂ ಸತ್ತೊಡಮೀಮದದ್ವಿಪಮನೆಂಬಂತಟ್ಟಿ ಬಾನಿಂದೆ ಮು
ನ್ನಡಿಯೊಳ್ಬಿರ್ದುದು ದಾನವೇಂದ್ರನ ಶಿರಂ ಬೀೞ್ತಂದು ಪೂರ್ವಾಸನಂ ।
ಬಿಡದಂತಿರ್ದುದು ಸಾರಿಗಳ್ಕದಳಿಕಾಸ್ತಂಭಾಗ್ರದೊಳ್ಕಟ್ಟಿದ
ಪೊಡಿಗತ್ತೂರಿಗೆ ತುಂಬಿ ಮಂಡಳಿಸಿ ಬಂಬಲ್ಗಟ್ಟಿ ಭಾಳಾಗ್ರದೊಳ್ ॥ ೨೧

ಸುರತರುವಿನರಲ ಸರಿಗ
ಳ್ಸುರಿದುವು ಸುರನಿಕರವೊಸೆದು ಪರಸುವ ರಭಸಂ ।
ಪರೆದುವು ಸುರದುಂದುಭಿಗ
ಳ್ಮೊರೆದುವು ಹರಿ ವಿಜಯಲಕ್ಷ್ಮಿಯೊಳ್ನೆರೆಯಲೊಡಂ ॥ ೨೨

ವ॥ ಸಮನಂತರಂ

ರಣಮಂ ಪೂಜಿಸವೇಳ್ಪುದು ಕಾದು ಶರಣಾಯಾತರ್ಕಳಂ ವಾಜಿವಾ
ರಣಕುಂತಾತತಿವಸ್ತುವಂ ಪಿಡಿದು ದಂಡಾಧೀಶರಂ ಕೊಂಡು ಪ ।
ಟ್ಟಣದೊಳ್ ಯೋಜಿಸೆ ವಾರಣಾಸಿವೊಲಿಲೊಳ್ ತಾಳಾಂಕನುಂ ಪಂಕಜೇ
ಕ್ಷಣನುಂ ದ್ವಾರವತೀಪುರಕ್ಕೆ ಮಗುಳ್ದೆಯ್ತಂದರ್ಮಹೋತ್ಸಾಹದಿಂ ॥ ೨೩

ವ॥ ಅಂತು ಬರ್ಪ ಚಕ್ರವರ್ತಿಯ ವೀರಲಕ್ಷ್ಮಿಯ ಲಕ್ಷ್ಮೀವಯಸ್ಯೆಯರಂ ದೂರದೊಳೆ ನೋಡಿ ಸಾರೆದೆಗೆದಪ್ಪಲ್ ಕರೆವ ಪುರಲಕ್ಷ್ಮಿಯ ಕಣ್ಗುಡಿಯ ಕರ

ಪಲ್ಲವಂಗಳ ಪರಿಯಂ ಮಿಳಿರ್ದು ಮಸಗಿಸುವ ನಿಕಾರವಟ್ಟಿಯ ಗುಡಿಯ ತುಱು ಗಲೊಳಂ ಸಕಲ ಲಕ್ಷ್ಮೀಜನಾರ್ದನಂಗೆ ಸಾರ್ದ ಮಾಲೆಸೂಡಲೆತ್ತಿದ ಸ್ವಯಂ ವರಮಾಲೆಯಂತೆ ಶಾಲೆ ಮೆಱೆಯೆ ವಂದನಮಾಲೆಗಳೊಳಂ ಯದುಕುಲಶ್ರೀ ಯೊಳೊದವಿದ ರಾಗಂ ಪರಿದು ಪರ್ವಿ ಪಸರಿಸುವಂತೆ ಕೇರಿಕೇರಿಗಳೊಳ್ ಸೂಸುವ ಕೇಸರದ ಸೌಸವಂಗಳೊಳಂ ಬೀದಿಬೀದಿಗಳೊಳ್ ನೋಡಲೆಂದು ಕಣ್ದೆಱೆದಂತೆ ಚಿತ್ತರಂಬಡೆದಿತ್ತರದಿನಿಕ್ಕುವ ಮುತ್ತಿನ ರಂಗವಲ್ಲಿಗಳೊಳಂ ರಾಗರಸವರ್ಷಮನೋರಂತೆ ಕಱೆವ ಪೌರಜನೋತ್ಸಾಹವಾರಿವಾಹಧ್ವನಿಯಂತೆ ಬಾಜಿಸುವ ಬದ್ದವಣದೊಳಮಿದಿರ್ಗೊಳಲ್ ಪೊಱಮಡುವ ಕನ್ನಡಿಯ ಕಳಶದ ಬಣ್ಣವುರದಾಳ್ವೇರಿಯ ಪಣ್ಯಾಕಾರದ ಪಣ್ಯವನಿತಾಜನದ ಮಂಗಳಾಚಾರಸಂ ಗೀತನರ್ತನದೊಳುಲಿವ ಚಿತ್ರೋತ್ಸವದೊಳಮಾಪುರಕ್ಷೋಭ ಚಂದ್ರೋದಯದ ಪಾಲ್ಗಡಲ ತಿರುಳ ಕೋಳಾಹಳಮನಪ್ಪುಕೆಯ್ದುದಂತುಮಲ್ಲದೆ

ಮದಗಂಧೇಭತುರಂಗಸ್ಯಂದನಬಲಂ ಸೋಮಪ್ರಭಂ ಲೀಲೆಯಿಂ
ದಿದಿರ್ವಂದಾನತರಾದ ಸುಪ್ರಭಮಧುಪ್ರಧ್ವಂಸರಂ ಹರ್ಷಬಾ ।
ಷ್ಪದೆ ಮೆಯ್ವೆರ್ಚಿದನೆತ್ತಿಕೊಂಡು ಪರಸುತ್ತುಂ ತಳ್ತುಮುಂಡಾಡಿದಂ
ಕದಪಂ ಕರ್ಚಿದನಿಕ್ಕಿದಂ ಪದಪಿನಿಂ ಬಾಯ್ವಾಯ ತಾಂಬೂಲಮಂ ॥ ೨೪

ವ॥ ಅಂತು ಕಂಡು ತಮ್ಮನಿಬರುಂ ಬೇಱೆವೇಱೆ ಪಟ್ಟದಾನೆಗಳಂ ಪಕ್ಕೆ ಸಾರೆಗಳ ಕಾಯಬಳದ ಕತ್ತಲೆಯಂ ಮುತ್ತಿನ ಮಾಣಿಕದ ಸತ್ತಿಗೆಯಂ ಬೆಳಗುತ್ತೆ ಬೆಳಗುವಾಡಿ ಶಂಖಭೇರೀದುಂದುಭಿಗಭೀರಧ್ವನಿಯಿಂ ಕಾಹಳೆಬಹಳಬಹುವಿಧಧ್ವಾ ನದಿಂ ಕೋಣಕುಹರಮಂಡಲಬಹಳಂಮಾಡೆ ಪುರಮಂ ಪುಗುತಪ್ಪಾಗಳ್ ಮದಿಲ ಮಾಳಿಗೆಯ ನೆಲೆಮಾಡದ ದವಳಾರದ ಮತ್ತವಾರಣಮಾಟಕೂಟಪ್ರಾಸಾದಂಗಳ ಬೀದಿವೀದಿಗಳಾದಲೆಗಳೊಳ್ ನಿಂದು ನೋಡಲ್ ನೆಱೆದ ಪುರಪುರಂಧ್ರೀಜನದ ತಿಂತಿಣಿಗಳೊಳಗೆ

ತುಂಗಘನಸ್ತನಂ ಕಳಶಮಾನನಮುಜ್ಜ್ವಲದರ್ಪಣಂ ಚಳಾ
ಪಾಂಗಮೆ ಬಾಸಿಗಂ ಮಿಳಿರ್ವ ಮೇಲುದು ಬೆಳ್ಗಡಿ ತೋರಣಂ ಕುರು ।
ಳ್ದೊಂಗಲಮಾಲೆಯಾಗಿ ಬಲಭದ್ರಮುಕುಂದರನೊಲ್ದು ನೋಡಿದ
ರ್ಮಂಗಳಲಕ್ಷ್ಮಿಯರ್ನೆರೆದು ಬರ್ಪವೊಲೊಪ್ಪುವ ಪೌರನಾರಿಯರ್ ॥ ೨೫

ಪ್ರಣಯುಂ ಕೈಮಿಗೆ ಮಾಡಿದಳ್ನೆಗಟ್ಟ ನೇಪಥ್ಯೋದ್ಯಮಂ ಮಾಣ್ದು ಕ
ಣ್ಬೊಣರಂ ರಂಜಿಸಲೆತ್ತಿದಂಜನಶಲಾಕಾಶೋಭೆಯಂ ರತ್ನದ ।
ರ್ಪಣಮಂ ಕಕ್ಕಡೆಗಡ್ಡಣಕ್ಕೆ ದೊರೆಯಾಯ್ತೆಂದಂದು ಕಂದರ್ಪನೊ
ಡ್ಡಣದಿಂ ನೂಂಕಿದ ಭಾಷೆಯಂತದವೊಲೊರ್ವಳ್ ರಾಮಗೋವಿಂದರಂ ॥ ೨೬

ವ॥ ಮತ್ತೊರ್ವಳ್ ಕಂಕಣದ ಕಿಂಕಿಣಿಯ ನೇವುರದಬ್ಬರಂ ನೆಲನುನ
ಗ್ಘಡಿಸುವಂತಿರಡಿಗಡಿಗೆ ಪೊಡರೆ ನಡೆತಂದು ನಿಂದಾಗಳ್

ಪಡೆಪಡೆ ಪಾಯ್ವ ಮೆಲ್ಲೆರ್ದೆಗೆ ಘರ್ಮಜಲಂ ಕೊನರ್ವಾನನಕ್ಕೆ ಸು
ಯ್ಯುಗ್ಗಡಿಯ ಬಳಲ್ವ ಮೆಲ್ನುಡಿಗೆ ಕಂಪಿಪ ನುಣ್ದೊಡೆಗಿಂಬುವೆತ್ತವೀ ।
ಬಡನಡು ಶೀಘ್ರಯಾನಮದುತಾನೆವಮಾದೊಡವಾಗಳೇಂ ಪಿಸು
ಣ್ಗೆಡೆದು ತೆರಳ್ದುದಾಹರಿ ನಿರೀಕ್ಷಿಪ ನೀಱೆಯ ಸೋಲ್ತ ಭಾವಮಂ ॥ ೨೭

ವ॥ ಮತ್ತಂ

ಕುರುಳಂ ತಿರ್ದುವ ಭಂಗಿಯಿಂದೆ ರದನಾಂತರ್ಲೇಖನಂ ಮಾಟ್ಪವೊ
ಲ್ಬೆರಲಂ ಮೇಲುದನೆತ್ತುವಂತೆ ಮುಡುಹಂ ಘರ್ಮೋದಹಾರಸ್ತನಾಂ ।
ತರಮಂ ಬೀಸುವ ದೇಸೆಯಿಂದಮುರಮಂ ಕೂರ್ತಿತ್ತೆನಾನೊಪ್ಪುಗೊ
ಳ್ಳಿರೆಯೆಂದಂಗನೆ ಸನ್ನೆದೋಱುವವೊಲೊರ್ವಳ್ ಕಷ್ಣನಂ ನೋಡಿದಳ್ ॥ ೨೮

ಕೆಳದಿ ಸಪತ್ನಿಯಾದಳಿನಿಯಂ ಪಗೆಯಾದನನನ್ಯಬಂಧುಗ
ಳ್ಮುಳಿವವರಾದರಾಹೊಟಲ ನೀಱರೆ ಕಣ್ಕೆಸುಱಾದರೆತ್ತಲುಂ ।
ಬಳಸುವ ನೋಟಕರ್ತನಗೆ ದಾಯಿಗರಾದ ಮದಾಳಿನೀಳಕುಂ
ತಳೆ ಮರುಳಾದರೀಕ್ಷಿಸಲೊಡಂ ಮುರವೈರಿಯ ಗಂಡಗಾಡಿಯಂ ॥ ೨೯

ವ॥ ಅಂತು ತಮತಮಗೆ ಕವ್ವರೆಗೊಂಡು ನೋಡುವ ಮುಗ್ಧಮಧ್ಯಮ
ನಾಯಕೀನಿಕಾಯಿದೊಳಗೆ

ಬಳಭದ್ರಂ ಚಂದ್ರನಂತಿರ್ದಪನಿರೆ ಬಲದೊಳ್ತಂವೆ ಸೋಮಪ್ರಭಂ ಕೋ
ಮಳಗಾತ್ರಂ ಚೈತ್ರನಂತಿರ್ದಪನೆಡಗೆಲದೊಳ್ಕಾಮನಂತಿರ್ದಪಂ ಕ ।
ಣ್ಗಳ ಬೆಳ್ಪಿಂ ಮೆಯ್ಯ ಕರ್ಪಿಂ ನಡುವೆ ಗಜದ ಮೇಲೊಪ್ಪುವೀಕೃಷ್ಣನೆಂದಾ
ಕುಳೆಯಾದಳ್ತದ್ಧರಾಲೋಕನಕುಸುಮಶರಾಪಾತದಿಂ ಪ್ರೌಢೆಯೊರ್ವಳ್ ॥ ೩೦

ವ॥ ಅಂತು ನೋಡಿ ಗಾಡಿಕಾರ್ತಿಯರ ಕಣ್ಮಲರಂ ಸೇಸೆಗೊಂಡು ಚಿತ್ತಮಂ ಕವರ್ತೆಗೊಂಡು ಯಾದವಾಭ್ಯುದಯರಾಜಹಂಸಂ ರಾಜಭವನಮಂ ಪೊಕ್ಕು ರಾಜಾಂಗಣದೊಳ್ ಸಕಳರಾಜಲೋಕಕ್ಕೆ ಸಮುಚಿತಸನ್ಮಾನದಾನಂಗಳಿಂ ಬೀಡ್ಕೊಟ್ಟು ಕಳುಪಿ ಕರುಮಾಡದ ಮುಂದಣ ಭುವನತ್ರಯಾಭರಣಮೆಂಬೊಡ್ಡೋಲಗಸಾಲೆಯ ವಡ್ಡಪರದ ರತ್ನಸಿಂಹಾಸನಮನಲಂಕರಿಸಿ ಮಂಗಳಾಚಾರಂ ಚಾರುನೀರಾಜನಸಂಗೀತಾತೋದ್ಯಹೃದ್ಯನಿರ್ಘೋಷಂ ನೀರದಪಥಕ್ಕೆ ಭೂಷಣಮಾಗೆ ತಂಡತಂಡದಿಂ ಮೆಱೆವ ದಂಡಮಂಡಲಾಧೀಶಮಂಡಳಿಕಮಕುಟಬದ್ಧ ಪ್ರಶಸ್ತದರ್ಶನೋಪಾಯನಪ್ರರ್ಚನಾವಿಳಾಸಂ ಗೋಸನೆವಡೆಯೆ

ಬಲಭದ್ರಂ ಮಧುಮರ್ದನಂಗೆ ಬಟಿಕಂ ಚಕ್ರೇಶಪಟ್ಟಂ ಜಗ
ತ್ತಿಲಕಂ ತಾನೆನೆ ಕಟ್ಟಿ ದಿಗ್ವಿಜಯದೊಳ್ಪಾಥ್ರಿತ್ರಿಖಂಡಂ ಗುಣಂ ।
ಗೊಳೆ ಬಾಯ್ಕೇಳಿಸಿ ಕೀರ್ತಿ ವರ್ತಿಸೆ ದಿಗಂತಂ ತಮ್ಮುತಿರ್ವರ್ನಿರಾ
ಕುಳಮಿರ್ದರ್ನೆಲೆವೀಡು ಮಾಡಿ ಸುಖದಿಂ ದ್ವಾರಾವತೀಪಟ್ಟಣಂ ॥ ೩೧

ಮಧು ಮಧುಸೂದನಾನುಚರಿತಂ ಕೃತಿಮಾಟ್ಪ ಕವೀಶ್ವರರ್ಗೆ ತ
ಕ್ಕುದು ರಸವೃತ್ತಿಯಂ ತಳೆದುದೀಕಥೆಯೆಂದು ಪರಸ್ಪರಾನುಮಾ ।
ದದೆ ಪೊಗಟುತ್ತುಮೊಲ್ದಗಲಲಾಱದೆ ಮತ್ತೆ ಮರುಳ್ದು ಪೊಕ್ಕಳಾ
ಮದನಪತಾಕೆ ಚಿತ್ರಲತೆಗೂಡಿ ಜಿನೇಂದ್ರಸಭಾಂತರಾಳಮಂ ॥ ೩೨

ಅವಧಿಜ್ಞಾನದಿನಿಂದ್ರನೀಶ್ವರನ ಧರ್ಮಶ್ರೀವಿಹಾರಕ್ಕೆ ಸಂ
ಭವಮುಂಟೆಂದಱಿದೆಟ್ದು ಕೈಮುಗಿದಿದಂ ವಿಜ್ಞಾಪನಂಗೆಯ್ದನಿಂ ।
ದುವರಂ ಕಂದಿದ ಧರ್ಮಮಂ ಬೆಳಗಿ ಧರ್ಮಾದರ್ಶಮಂ ಪುಣ್ಯದಿಂ
ಭವದಾರ್ಹಂತ್ಯವಿಭೂತಿಬಣ್ಣಮಿದು ನೀಂ ಭವ್ಯಾಬ್ಜಿನೀಭಾಸ್ಕರಾ ॥ ೩೩

ವ॥ ಎಂದು ಪುರಂದರನ ವಿಜ್ಞಾಪನೋಪಚಾರದೊಡನೆ ವೃಂದಾರಕವೃಂದಬಾಹಾಪರಿಘಪರಿವಾರಿತದೈವಿಕಾಸ್ಥಾನಿಪ್ರಸ್ಥಾನಭೇರೀಭಾಂಕಾರಂ ಶಂಕಾಕುಳಿತದುರಿತಹರಣಂ ಬೆರ್ಚಿ ಪೆರ್ಚಿ ಗಗನದಿಶಾಭೂಮಿಭಾಗಮಂ ತಳ್ತೊಯ್ದು ಮುಪ್ಪುರಿಗೂಡಿದಾಗಳ್

ದೆಸೆಗಳ್ದೇವವಿಮಾನಯಾನಮಣಿಘಂಟಾಜ್ಯೋತ್ಸ್ನೆಯಿಂ ತಟ್ಟಿಗ
ಟ್ಟಿಸಿ ರೋದೋಸ್ಥಳಕೇತನಾತಪನಿವಾರವ್ರಾತದಿಂ ಸೇತುಗ ।
ಟ್ಟಿಸಿ ಧಾತ್ರೀನಿಲಯಂ ವಿನೇಯಮನುಜಸ್ತೋತ್ರಂಗಳಿಂ ಮುಚ್ಚಿ ಮು
ದ್ರಿಸಿ ತಾಂ ದಿವ್ಯವಿಹಾರದಿಂದೆ ತಳರ್ದಂ ಲೋಕತ್ರಯೀವಲ್ಲಭಂ ॥ ೩೪

ಚರಣನ್ಯಾಸದೊಳಾಂಪರಂಬುಜಮನೇಟಿಂ ದೇವದೇವಂಗೆ ದೇ
ವರಿಳಾಮಂಡಳಮಂ ಮಹಾನಿಲಕುಮಾರರ್ ಪ್ರಸ್ಫುರಸ್ಥಾಣುಶಾ ।
ರ್ಕರಜಾಳಂ ಕಿಡೆ ಶೋಧಿಪರ್ಗಗನಮಂ ಜ್ಯೋತಿಃಕುಮಾರರ್ ಪರಿ
ಸ್ಫುರಿತಾದರ್ಶಮಿದೆಂಬಿನಂ ಬೆಳಗುವರ್ತಂತಮ್ಮ ಸದ್ಭಕ್ತಿಯಿಂ ॥ ೩೫

ಇಳೆಯಂ ಚಂದನಕುಂಕುಮಾಂಬುಕಣದಿಂ ಕಮ್ಮೈಸಿ ಮೇಘಾಗಮ
ರ್ತಳೆವರ್ಸರ್ವದಿಶಾಧಿನಾಥರನಿತುಂ ದಿಕ್ಕಾಮಿನೀವಕ್ತ್ರಮಂ ।
ಡಳಮಂ ನುಣ್ಣಿಸುವರ್ಸಮಸ್ತಋತುಗಳ್ ತಂತಮ್ಮ ಸೊಂಪಂ ಪುದುಂ
ಗೊಳಿಕುಂ ಸಸ್ಯಸಮೃದ್ಧಿಯಿಂ ಮೆಱೆವುದೋರಂತುರ್ವರಾಮಂಡಲಂ ॥ ೩೬

ಮನದನುರಾಗಮತ್ಯಧಿಕಮಪ್ಪುದು ಸರ್ವಜನಕ್ಕೆ ವೈರಮಂ
ನೆನೆಯದೆ ಜೀವರಾಶಿ ಕೆಳೆಗೊಳ್ವುದು ಭಾಸುರಧರ್ಮಚಕ್ರಸೂ ।
ರ್ಯನ ಕಿರಣಕ್ಕೆ ಮಾರ್ಮಲೆವುತಿರ್ಪುದು ಮಂಗಳವಸ್ತುಜಾಲಮಂ
ತನತನಗಾಂತು ಬರ್ಪುದಮರೀಜನಮಾಜಿನರಾಜಯಾತ್ರೆಯೊಳ್ ॥ ೩೭

ಅನುಕೂಲಾನಿಳನೊಯ್ಯನೊಯ್ಯನಲೆಗುಂ ದೇವೇಂದ್ರರೋರೊರ್ವರಂ
ದನಿಗೆಯ್ವರ್ಬರೆವೇಱ್ಕು ಕೊಲ್ಲಣಿಗೆಯೊಳ್ ಧಾತ್ರೀಸುಧಾವರ್ಷಣ ।
ಸ್ತನಿತಂ ದಿವ್ಯಸಿನಾದಮೆಣ್ದೆಸೆಯೊಳಂ ಕೈಗಣ್ಮುಗುಂ ತೀರ್ಥನಾ
ಥನನಂತಂಗೆ ಚತುರ್ದಶಾತಿಶಯಮಿಂತೊಪ್ಪಿತ್ತು ದೇವರ್ಕಳಿಂ ॥ ೩೮

ಒಡವುಟ್ಟಿದರ್ಪವು ಮುನ್ನ ಪತ್ತತಿಶಯಂ ಘಾತಿಕ್ಷಯಾನಂತರಂ
ಗೆಡೆಗೊಟ್ಟಿರ್ದುವು ಮತ್ತೆ ಪತ್ತತಿಶಯಂ ದೇವರ್ಕಳಿಂ ನಿನ್ನೊಳಂ ।
ಗೆಡೆಗೊಪ್ಪಿತ್ತು ಚತುರ್ದಶಾತಿಶಯಮಾಮುಂ ದೇವರಿಂದಾಡುತಿ
ರ್ಪೆಡೆಗಳ್ಗೀತಱೊಳೇನುಮಂ ಪೆಸರ್ಗೊಳಲ್ಕಾಣೆಂ ಜಗದ್ವಲ್ಲಭಾ ॥ ೩೯

ವ॥ ಎಂದು ಪರಮಾನಂದಮೆ ರೂಪುಗೊಂಡಂದದಿಂ ಗೊಂಡಣಿಸಿ ನಿಂದು ಸಂದಣಿಸಿ

ಪೊಗಟುತ್ತುಂ ನೆಗಟ್ದೀಮಹಾತಿಶಯಮುಮಂ ಘೂವತ್ತು ನಾಲ್ಕುಂ ಸುಠಾ
ಯೆಗಳಿಂ ಪಾಡುವ ಗೀತವಾದ್ಯಲಯರೇಖಾರೂಪದೊಳ್ ಗೆಜ್ಜೆ ಪ।
ಜ್ಜೆಗೆ ತಾಳಂಗುಡಿಮೆಟ್ಟುತುಂ ಕರಣದಿಂ ರೋದೋಂಗಣಪ್ರಾಂತಮುಂ
ಪುಗುತುಂ ಬಂದರನಂತನಾಥನಿದಿರೊಳ್ ಗೀರ್ವಾಣವೈತಾಳಿಕರ್ ॥ ೪೦

ಕರಿ ಮೇಷಂ ಮಹಿಷಂ ನೃಮೂರ್ತಿ ಮಕರಂ ಸಾರಂಗಮಶ್ವಂ ವೃಷಂ
ಬರೆ ಪಿಂತುಚ್ಚಳಿತಾಸ್ತ್ರಶಸ್ತ್ರಪರಿವಾರಂ ವಾರನಾರೀಜನಂ।
ಬರೆ ಮುಂತಂ ಪೊಡೆವಟ್ಟು ಕೈ ಪೊಗಟ್ಟು ಬಾಯ್ ಚೆಲ್ವಾಗೆ ತಂತಮ್ಮ ದಿ
ಗ್ಧರೆಯೊಳ್ತಪ್ಪದೆ ಸುತ್ತಲುಂ ನಡೆದು ಬಂದರ್ದಿಗ್ವಿದಿಕ್ಪಾಲಕರ್ ॥ ೪೧

ವ॥ ಮತ್ತಂ

ತ್ರಿದಶಾಧೀಶ್ವರರಂಗರಕ್ಷಪದವೀಸನ್ನದ್ಧರುತ್ಪಾತಖ
ಟ್ಗದುರಂತಚ್ಛವಿಭೂಷಣಚ್ಛವಿಗಳೊಳ್ತಳ್ತೊಪ್ಪಿಯೈ ಬರ್ಪಲ್ಲಿ ಚೆ।
ಲ್ಲಿದ ನಾನಾಮಣಿಪುಂಜದೊಳ್ತೊಳೆದು ಮುತ್ತಂ ಪೂಸಿದಂತಾಗೆ ಕಾ
ಯದಮೇಯಪ್ರಭೆ ಬಂದು ಮುಂದೆ ಗಡಣಜ್ಯೋತಿಷ್ಕದೇವಾಧಿಪರ್ ೪೨

ವ॥ ಆ ಪರಮತಪೋವನಪ್ರಯಾಣಪ್ರಭಾವದೊಳ್

ನಡೆಯಲ್ವೇಟೆಂದ್ರರಂ ಪಿಂದುಟಿಯದೆ ಬರವೇಟ್ಕೊಡೆ ದಿಕ್ಪಾಲರಂ ತಂ
ದಿಡವೇಟ್ ಸೋಮಾಬ್ಜಮಂ ಶ್ರೀಪದದೆಡಗುಟಿದಿಂದ್ರರ್ಕಳಂ ಹೋವುಘೆಮಾಣ್।
ನುಡಿಯಲ್ವೇಡಾಲಿಸಿಂ ಶ್ರೀವಚನಮನೆ ಗಣಶ್ರೇಣಿಯಂ ಕೂಡಿದತ್ತಿಂ
ಪಡೆವಳ್ಳಸೂರ್ಟಗ್ಗೆವಂದರ್ಸಭೆಗೆ ಚಮರವೈರೋಚನರ್ಚಾಮರೇಂದ್ರರ್ ॥ ೪೩

ಗಣನಾಥರ್ಜಯಮುಖ್ಯರರ್ಧಶತಕಂ ಪೂರ್ವಾಂಗಮುಂ ತಾಳ್ದಿದ
ಗ್ರಣಿಗಳ್ಸಾಸಿರಮಲ್ಲಿ ಕೇವಳಿಗಳೈಸಾಸಿರ್ವರೆಣ್ಛಾಸಿರಂ।
ಗಣದೊಳ್ನೋಡ್ಪೊಡೆ ವಿಕ್ರಿಯರ್ಧಿಯುತರುಂ ಸಾಸಿರ್ವರಂತಾಚತುಃ
ಪ್ರಣುತಜ್ಞಾನಿಗಳಾ ಸಭಾವಳಯದೊಳ್ ಲಕ್ಷದ್ವಯಿಮಾವಾದಿಗಳ್ ॥ ೪೪

ವರಬೋಧತ್ರಿತಯರ್ನಗಾಗ್ನಿಗತಿಸಖ್ಯರ್ ಪೂರ್ವತೊಂಬತ್ತುಸಾ
ಸಿರದೈನೂರ್ವರೆ ಶಿಕ್ಷಕರ್ನೆಗಟ್ದ ಸರ್ವಜ್ಞಶ್ರೀಮುಖಾರ್ಯಾಳಿ ಸಾ ।
ಸಿರಮೆಂಟುಂಬೆರಸೊಂದುಲಕ್ಕೆಯೆರೆಡುಂ ಲಕ್ಕಂಗಳಾಶ್ರಾವಕರ್
ಪರಮಶ್ರಾವಕಿಯರ್ಚತುಃಪ್ರಮಿತಲಕ್ಷಂ ದೇವನಾಸ್ಥಾನದೊಳ್ ॥ ೪೫

ಸಂಖ್ಯಾತತಿರ್ಯಗಾದಿಯು
ಸಂಖ್ಯಾತಂ ದೇವದೇವಿಯರ ಕೋಷ್ಠದೊಳೆ ।
ಲ್ಲಂ ಖ್ಯಾತಂ ದ್ವಾದಶಗಣ
ಸಂಖ್ಯಾನಮಿದಿನಿತುವೆರಸು ಧರ್ಮವಿಹಾರಂ ॥ ೪೬

ಹರಿನೀಳೋಪಳಬದ್ಧಸಿದ್ಧಸಭೆ ಜೀಮೂತೋತ್ಕರಂಬೋಧಸಾ
ಗರದೇಹಪ್ರಭೆಯುಂ ಪ್ರಭಾವಳಿಯುಮುಂ ವಿದ್ಯುದ್ವಿಳಸ್ಫೂರ್ಜದು ।
ಸ್ಫುರಿತಂ ದಿವ್ಯನಿನಾದಮಾಗುಭಯುವರ್ಷಂಗುಂದೆ ಸಪ್ತಾರ್ಥವ
ತ್ಸರಲಕ್ಷಂ ಕಱೆದಂ ಜಗದ್ಗುರು ಲಸದ್ಧರ್ಮಾಮೃತಾಸಾರಮಂ ॥ ೪೭

ವ ॥ ಅಂತು ನಿರ್ಮೇಘಂ ಸುರಿವಮೋಘದಿವ್ಯವಚನವರ್ಷಾಗಮದೊಳ್ ಕುಮತವಾದಿವನಕೃಷ್ಣವರ್ತ್ಮಂ ಕುಂದಿ ನಡೆಯೆಯುಂ, ಪಂಡಿತಮಾನಮನಸ್ಸಂಶಯಮರುಮರೀಚಿಕೆ ಸುರುಳ್ದು ಪರಿಯೆಯುಂ, ಕುಮಾರ್ಗೋಪದೇಶಕಮರಾಳಜಾಳಂ ಪಟ್ಟನೆ ಪಾಱೆಯುಂ, ಮಿಥ್ಯಾವಾದಿಪೇಟಕರ್ ದಂತಿಸಂತಾನದಂತೆ ಮುರುಂಟಿಯುಮ ಭವ್ಯಜನಮನಃಪದರಜಃಪಟಳಂ ತೆಮಳ್ದು ಪರಿದಡಂಗೆಯುಂ, ದುಷ್ಪರಿಣಾಮಜನಹೃದಯವಿದಾರಿಕಾದ್ರೋಣಿಕೆಗಳ್ ಮುಚ್ಚಿ ಮುಸುಂಕೆಯುಂ ವಿನೇಯಜನಚೇತಶ್ಚಾತಕಂ ತಣಿದು ಕುಣಿಯಲ್ ಪಾಱೆಯುಂ, ಅಗಣ್ಯಪುಣ್ಯತರಂಗಿಣಿಗಳ್ ಕರೆಗಣ್ಮಿ ಪರಿಯೆಯುಂ, ದಯಾರಸನೀರತಟಾಕಂ ತೀವಿ ತುಳುಂಕಿ ಕೋಡಿ ಮರಳೆಯುಂ, ದಾನತೀರ್ಥಸರೋವರಂಗಳಟಿಬಳಿವೋಗೆಯುಂ, ಸವ್ಯಾಗಾಚಾರಚಾರುಪರಂಗಳ್ಕಡಲ್ಗಟ್ಟೆಯುಂ, ಪೊದಳ್ಕೆವಡೆದ ಸದ್ಧರ್ಮಪೀಯೂಷಮಹಾಪ್ರವಾಹಂ ವಂಗಮಂಡಲದೊಳ್ ತರಂಗಂಗೊಂಡು ಕಳಿಂಗಮಂಡಳದೊಳ್ ಮಡುಗಟ್ಟಿ ನಿಂದು ಮಹಾರಾಷ್ಟ್ರಮಂಡಳದೊಳಟ್ಟುಂಬರಿವರಿದು ಮಳಯಮಂಡಳದೊಳ್ ವೇಳೆಗೊಂಡು ನೆಲಸಿ ಗುರ್ಜರಮಂಡಳದೊಳೊಜ್ಜರಂಬರಿದು

ಮರುಮಂಡಳದೊಳ್ ಪರೆಪುವಡೆದು ದನುಜಮನುಜತಿರ್ಯಕ್ಸಮಾಜಮುಂ ಸುಕೃತ
ಭಾಜನಂಮಾಡಿ ಪೆರ್ಮೆಗಾಶೀರ್ವಮಾದುದು.

ಆ ದುರಿತೇಭಸಿಂಹನ ಸಭಾವಳಯುಂ ಬಟಿಕೆಯ್ದಿದತ್ತು ಸ
ಮ್ಮೇಧಮನಾದಿರಾಜನಗರಾದಿ ವಿನಿರ್ಮಿತ ಚೈತ್ಯಮಾಳಿಕಾ ।
ಪಾದಮನಾತ್ತವಿಂಶತಿಜಿನೇಂದ್ರಸಮಾಧಿವಿಧಾನಸೌಖ್ಯಸ
ಮ್ಮೇದದಿನಿರ್ದ ಸಿದ್ಧ ಪದವೀಜಗತಿಪ್ರತಿಬದ್ಧಭೇದಮಂ ॥ ೪೮

ನೆಲೆ ಕಾಲ್ಗೊಳ್ಳವಘಾತಿಸಂಕುಲರಥಾಂಗಂ ಪೋಯ್ತು ಮುಂ ಘಾತಿಕ
ಟ್ಟಲೆ ಭವ್ಯಾಕ್ಷಿಕರೋತ್ಪಳಾಬ್ಜವರಲುಂ ಸಂಕೋಚಮಾಗುತ್ತಿರ ।
ತ್ನೆಲೆಗೊಂಡೊಪ್ಪಿರೆ ಶಾಂತದಿವ್ಯಪರಿಷಜ್ಜ್ಯೋತಿಸ್ತಮಾಡಂಬರಂ
ನಿಲೆನಿಂದಂ ಜಿನಚಂದ್ರಭಾನುಪರಮಂ ಸಮ್ಮೇದಶೈಲಾಗ್ರದೊಳ್ ॥ ೪೯

ವ॥ ಆ ಧರಾಧರದ ದಿವ್ಯಕಸ್ಥಳದನೇಕಾನೋಕಹಚ್ಛಾಯಾಚ್ಛನ್ನಪಾ
ವನ ಪ್ರದೇಶದೊಳ್ ಪರಿದು ಪರ್ವಿದ ಶುದ್ಧಸ್ಫಟಿಕ ಶಿಲಾಪಟ್ಟದಲ್ಲಿ

ಮೇಗಣ ನಿಶ್ರೇಯಸಲ
ಕ್ಷ್ಮೀಗಾಢಾಲಿಂಗನಕ್ಕತಿತ್ವರಿತಮನು ।
ದ್ಯೋಗಿಸಿದದೊಮ್ಮೆ ಪ್ರತಿಮಾ
ಯೋಗದೆ ನಿಂದನೊ ಮುನೀಂದ್ರವೃಂದಾರಾಧ್ಯಂ ॥ ೫೦

ಪರಮಜ್ಞಾನನಿಧಾನದೀಶ್ವರನೊಳಾಯುರ್ನಾಮಗೋತ್ರಂಗಳಂ
ಸರಿಕಂಡಿರ್ದ ಮಹಾನುಭಾವರಿರೆ ಕಾಯೋತ್ಸರ್ಗದಿಂದಾಟುಸಾ ।
ಸಿರದ್ಯೆನೂರ್ವರಪಾಸ್ತಕರ್ಮರನಿತುಂ ಗೋತ್ರಾದ್ರಿಸುತ್ತಿರ್ದ ಮಂ
ದರದಂತಿರ್ದನನಂತನಾಥನಚಲಂ ಕಲ್ಯಾಣಧಾಭಾಸುರಂ । ೫೧

ವ॥ ಅಂತು ಪೂರ್ವಾಭಿಮುಖನಾಗಿ ನಿಂದು ನೆಲಸಿದ ಸಮಾಧಿನಿಷ್ಠೆ
ಯೊಳ್ ಪ್ರಥಮಸೂಕ್ಷ್ಮಕ್ರಿಯಾಪ್ರತಿಪಾದಿತಮಪ್ಪ ಶುಕ್ಲಧ್ಯಾನಮನಪ್ಪುಕೆಯ್ದು
ಕರ್ಮಲಘುಪಪರಿಪಾಚನಶಕ್ತಿಯಿಂ ಪರಮೌದಾರಿಕದೇಹತ್ರಿಗುಣದಾಕುಲ
ದಿನಂತಮುಹೂರ್ತದೊಳ್ ವಿಶ್ವವಿಷ್ಟಪವಿಸ್ತಾರಿತದಂಡಕವಾಟಪ್ರತರಪೂರಣ

ಮೆಂಬ ಸಮುದ್ಭೂತಚತುಷ್ಟಯಮನನುಕ್ರಮದಿನೆಯ್ದಿಸಿ ತತ್ತದುಪಸಂಹೃತಿವ್ಯ ತ್ರಮದಿಂ ಪೂರ್ವಶರೀರಪ್ರಮಾಣದೊಳ್ ನೆಲಸಿ ಬಳಿಯಮುಳಿದ ಘಾತಿಗಳಂ ಸ್ಥಿತಿಕರ್ಮಕ್ಕೆ ಸಕ್ಕಸರಿಮಾಡಿ ಗುಪ್ತಮನೋವಾಕ್ಕಾಯಯೋಗದಿನಯೋಗಿಕೇ ವಳಿಗುಣಸ್ಥಾನಮನಳಂಕರಿಸಿ ತೃತೀಯಶುಕ್ಲಧ್ಯಾನದಿನಸೂಕ್ಷ್ಮಕಾಯಸ್ಥಿತಿಯೊಳ್ ಶೀಲಗುಣಸಮಾನಸಂಪೂರ್ಣಮಾಗೆ ಸಂಶುದ್ಧಸಕಲಾಸ್ರವಂ ಲಪನೋಚ್ಚಾರಿತ ಪಂಚಾಕ್ಷರಮಾತ್ರದೊಳ್ ಸಮುಚ್ಛಿನ್ನಪ್ರಾಣಾಪಾನಸಮೀರಣಪ್ರಚಾರನಾಗಿ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಪರಮಶುಕ್ಲಧ್ಯಾನದೊಳ್ ನಿಂದು ನಿಜೋ ಪಾಂತಸಮಯದೊಳ್

ಜನತಾಭ್ಯಂತರವೇದನೀಯವಶದಿಂ ಗತ್ಯಂತರಕ್ಕೈದು ಸಂ
ಹನನಸ್ಥಾನನಿಬಂಧ ವರ್ಣರಸಗಂಧಸ್ಪರ್ಶನಾಮಂಗಳೆಂ ।
ಬಿನಮೆಪ್ಪತ್ತೆರಡೆಂಬ ತತ್ಪ್ರಕೃತಿಯಿಂ ಬೇಱಿರ್ದು ವಾಕ್ಯಾರ್ಥದಿಂ
ಧ್ವನಿಬೇಱಿರ್ದೆಸೆವಂತದೇನೆಸೆದನೋ ಕಾಲಾಂತಕಾನಂತಕಂ ॥ ೫೨

ವ॥ ಅನಂತರಮನಂತನಾಥಚರಮಸಮಯದೊಳಾಭ್ಯಂತರವೇದನೀಯ ಮನುಷ್ಯಗತಿಪಂಚೇಂದ್ರಿಯಜಾತ್ಯಾನುಪೂರ್ವಿಬಾದರಪರ್ಯಾಪ್ತಿಕಶುಭಗಾದೇ ಯಯಶಃಕೀರ್ತಿರುಚ್ಚೈರ್ಗೋತ್ರತೀರ್ಥಕರಾಖ್ಯಾನಮೆಂಬಿವಾದಿಯಾಗಿ

ಪದಿಮೂಱುಂ ಪ್ರಕೃತಿಪ್ರಪಂಚಮನವಂ ಪಿಂತಿಕ್ಕಿ ಮುಂತಂತು ಸಾ
ರ್ಚಿದ ಸಿದ್ಧಾಷ್ಟ ಗುಣಂಗಳಂ ತನಗುಪಾಸ್ಥಾಲಂಬನಂಮಾಡಿ ಚೈ ।
ತ್ರದಮಾವಾಸ್ಯೆಯಮುನ್ನಿರುಳ್ಗೆ ಚರಮಾರ್ಕ್ಷಂ ಕೂಡೆ ನಿರ್ದ್ವಂದ್ವಸಂ
ಪದದೊಳ್ನಿರ್ವೃತಿಭೂಮಿಯೊಳ್ನೆಲಸಿದಂ ನಿರ್ವಾಣಲಕ್ಷ್ಮೀವರಂ ॥ ೫೩

ಎನಿತೊಂದಂಗಿಗಳಂಗಸೌಖ್ಯಶತಮೊಂದೇಕಕ್ಷಣಕ್ಕಿಲ್ಲ ನಾ
ಕನಿವಾಸಕ್ಕವರೊಳ್ಪೊದಳ್ದ ಸುಖಸಂದೋಹಂ ಮಿಷಕ್ಕಿಲ್ಲಮಿ ।
ಲ್ಲನಿಮೇಷಾಧಿಪರ್ಗಿಂದ್ರಸೌಖ್ಯಮಹಮಿಂದ್ರರ್ಗಾವಲೆಕ್ಕ
ಕ್ಕಮಿಲ್ಲಿನಿತುಂ ಸಿದ್ಧರನಿತ್ಯಸೌಖ್ಯದೊರೆಗೆಲ್ಲಾಸಿದ್ಧನಾದಂ ಜಿನಂ ॥ ೫೪

ವ॥ ಆ ಸಿದ್ಧಕ್ಷೇತ್ರಮೆಂತುಟೆಂದೊಡೆ

ಅದು ಸಮವೃತ್ತಮಾದತಿನಿಯೋಜನಲೆಕ್ಕದ ನಾಲ್ವತ್ತೈದು ಲ
ಕ್ಕದ ಪರಿಷಷ್ಠಿಯೋಜನದೊಳಂ ಕ್ರಮತುಂಗಿಯುಮಿಂದ್ರಕಾಂತಪ ।

ಟ್ಟದ ನೆಲೆ ವಿಷ್ಟಪಾಧಿಪನ ನೇವುರದಂತೆ..ಚೆಲ್ವುವೆ
ತ್ತುದು ಪವನತ್ರಯೋದರವೊಳಿರ್ದೊಡೆ ಶುದ್ಧಸುಸಿದ್ಧಭೂತಳಂ ॥ ೫೫

ಪರಮಪವಿತ್ರಂ ಶಾಶ್ವತ
ಮರುಜಮನಿಂದ್ರಿಯಮರುದ್ರಮಕ್ಷಯಮಜರಂ।
ನಿರುಪದ್ರವಮುದಚಲಮ
ಸ್ವರಮಪುನರ್ಭವಮನಂತಮಮೃತನಿವಾಸಂ ॥ ೫೬

ನಿರವಯಮನಲ್ಲಿ ಪರಮಂ
ಚರಮಶರೀರಂ ಪ್ರಮಾಣಮೇನಾನುಂಗುಂ।
ದಿರೆ ಜೀವಘನೀಭೂತಂ
ನಿರುಪಮನಿಜರೂಪನಿತ್ಯಸುಖಮಯನಾದಂ ॥ ೫೭

ಸನ್ನಿದಮನೆ ತಾಂ ತನ್ನಂ
ತನ್ನಿಂದಂ ಕಂಡು ತನ್ನಗೆ ತನ್ನತ್ತಣಿನೇಂ ।
ತನ್ನ ಗುಣಂಗಳ್ ನೆಱೆದಿರೆ
ತನ್ನೊಳೆ ನಿಂದನೊ ವಿನೇಯಜನಮುಖತಿಲಕಂ ॥ ೫೮

ವ॥ ಆಗಳಾಪರಮೇಶ್ವರನ ಪರಿನಿರ್ವಾಣಕಲ್ಯಾಣ ಸಮಭ್ಯರ್ಚನೋತ್ಸುಕ ಚಿತ್ತನಾಗಿ

ಅನಿತುಂ ಸಮ್ಮೇದಶೈಲಂ ಸೊಡರ್ಗಲರ್ಗೆ ಫಲಂಗಳ್ಗೆ ಮುಕ್ತಾಕ್ಷತೆಗ
ಳ್ಗೆನಿತಿಲ್ಲಿಲ್ಲೆಂಬಿನಂ ಮಂಗಳಯುವತಿಯರುಂ ಮಂಗಳದ್ರವ್ಯದಿವ್ಯಾ ।
ರ್ಚನಮುಂ ಮಾಂಗಲ್ಯಸಂಗೀತಕಮುಮೆಸೆವಿನಂ ಭಕ್ತಿಯಿಂ ಭಾವನೇಂದ್ರ
ರ್ದನುಜೇಂದ್ರಜ್ಯೋತಿರಿಂದ್ರಪ್ರತತಿಗತಪ್ರತನರ್ಬಂದರಾಕಲ್ಪಜೇಂದ್ರರ್ ॥ ೫೯

ಮದನನ ಮಂತ್ರದೇವತೆಯುರಡ್ಡಣಮೊಡ್ಡಿದುದೆಂಬ ವಡ್ಡೆಯಿಂ
ಕೆದಱುವ ಸೌಸವಂ ತಳಿವ ಲಾಜೆ ತೊಡರ್ಚುವ ತೋರಣಂಗಳೆ ।
ತ್ತಿದ ಗುಡಿ ಪೊತ್ತ ಕನ್ನಡಿ ನೆಗಪ್ಪಿದ ಪೊಂಗಳಸಂಗಳೊಪ್ಪೆ ಬಂ
ದುದು ಸುರಸೌಂದರೀನಿವಹಮಾದಿವಿಜಾಧಿಪರಿಕ್ಕೆಲಂಗಳೊಳ್ ॥ ೬೦

ಪಳುಕಿನ ಕಳಶಂ ಗಂಗಾ
ಜಳಭರಿತಂ ಮೊಲೆಯ ಮೇಲ್ಗೆ ವಂದುಂ ಕೀಟಾ ।
ಗಿಟಿಸಿದಳೊರ್ವಳ್ವಿಧುಮುಂ
ಡಳಮಂ ತಳ್ತಿಱಿದು ಚಪಲಚಪಲಾಲತಿಯಂ ॥ ೬೧

ಕುರುಳ ನೆಟಿಲ್ಪ್ರತಿಬಿಂಬಸೆ
ಸಿರಿಖಂಡದೊಳಮರಿ ಬೆದಱೆ ಮತ್ತೊರ್ವಳ್ಕ ।
ಸ್ತುರಿ ಜಿನರ ಪೂಜೆಗೊಂಡೆಂ
ದರೆಬರೊಳಾರ್ಕೈದು ನಗಿಸಿದಳ್ಕೆಳದಿಯರಂ ॥ ೬೨

ಓಲಗಿಸಲ್ಕೆರೆದುವು ತಾ
ರಾಳಿಗಳೀವಧುವಿನಾಸ್ಯವಿಧುಬಿಂಬಮನೆಂ ।
ದಾಳೋಕಿಸೆ ನೀಱಸುರ್ಱರ
ಬಾಳಕಿ ಬಿಡುಮುತ್ತಿನಕ್ಕಿಯುಂ ತಳೆದಿರ್ದಳ್ ॥ ೬೩

ಸೂಳಂ ಕುಡೆ ದೋರ್ಮಾಲೆಗೆ
ಕೀಲಿಸಿದ ನಮೇರುಮಾಲೆ ಸುರತರುಣಿಯದೇ ।
ನಾಳಂಗೊಂಡಳೊ ಬಯಲೊ
ಟ್ಬೀಟಿಲ್ವರಿದಂಗಭವನ ಜಂಗಮಲತೆಯಂ ॥ ೬೪

ಚರುಭಾಂಡಮನಿಂದುಮಣಿ
ಸ್ಫುರಿತಮನೆತ್ತಿದ ಸುರೇಂದ್ರಸೌಂದರಿಯೊರ್ವಳ್ ।
ಪರಿವೇಷ್ಟಿಸಿದವೊಲೆಸೆದ
ಳ್ಪುರಕಾರ್ಮುಕಲಕ್ಷ್ಮಶರದದಡಕಿಲ್ಮುಗಿಲಂ ॥ ೬೫

ಮುಗಮುಗಿಸುವಗರುಧೂಪದ
ಪೊಗೆಯ ಕವಲ್ವಳ್ಳಿಯೆಂದು ಮುಳ್ಳಿಸುವಳಿಮಾ ।
ಲೆಗಳಂ ಸೋವದೆ ಮುಚ್ಚಲ್
ಬಗೆದೆತ್ತಿದಳೊರ್ವಳಮರಿ ಕರಪಲ್ಲವಮಂ ॥ ೬೬

ತೊಳಗುವ ತೋರಮುತ್ತುಗಳ ಪುಂಜಮೊ ನೀಲದ ಪುಂಜಮೊ ಪೊಯ್ವುವಾ
ಮಳಕಫಲಂಗಳಲ್ಲಮಿವು ಜಂಬುಫಳಾವಳಿಯಲ್ಲಮೆಂಬಿನಂ ।
ತಳೆದು ಸರೋಜರಾಗಮಣಿದೀಪಕಳಾಪಮನಾಂತು ಬರ್ಪ ಕೋ
ಮಳೆಯರ ಸರ್ವರತ್ನನಿಧಿಲಕ್ಷ್ಮಿಯಿವೆಂಬಿನವೊಪ್ಪೆ ತೋಱಿದಳ್ ॥ ೬೭

ವ॥ ಅಂತು ವಿಯತ್ತಳದಿಂದಿೞಿದು ಇಳಾಮಂಡಳಕ್ಕವತರಿಸಿ

ಇಳೆಯಂ ವ್ಯೋಮಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ಸಿಂದಿಕ್ಕೆ ಮಂ
ಗಳತೂರ್ಯಧ್ವನಿ ಭೂಷಣಧ್ವನಿಗಳಿಂದಿಂದ್ರಾದಿಜ್ಯೋತಿಷ್ಕರಾ ।
ವಳಿಗಳ್ಮೊವಳಸಾಗಿ ಸುತ್ತಿ ಸುೞಿದೇೞುತ್ತಿರ್ಪ ಮೇಲ್ವಾಸದಾ
ಳಿ ಸಮ್ಮೇಧಮನೇಱಿ ಮೂಮೆ ಬಲಗೊಂಡುತ್ತುಂಗಶೃಂಗಾರದೊಳ್ ॥ ೬೮

ವ॥ ಅನಂತಗುಣನಿಳಯನನಂತನಾಥನಂ ತೀರ್ಥವಲ್ಲಭನನಾಲಿಂಗಿಸಿದ ನಿಶ್ಶ್ರೇಯಸಶ್ರೀಯ ಸಿರಿಮಂಚದ ಕೆಳಗೆ ಪೊಳೆವ ಪಳಿವಾವುಗೆಯಂತೆ ಪಳಚ್ಚನಾದಚ್ಚವಳುಕಿನ ಸಮಾಧಿಶಿಲಾಪಟ್ಟಕಮುಮಿಂದ್ರಸಮಾಜಮುಮಿಂದ್ರಾಣಿಗಣಮುಂ ಕೋಟಿಕೋಟಿಪ್ರಭೆಗಳ ತುಂಬಿಗುರುಳ್ಗಳೊಳ್ ನಿಲುಂಬಿ ಮೆಱೆವ ಚಿನ್ನ ಪೊದುಱುಗಲ ರತ್ನಕೆನ್ನಕೆಂಪುಗಳ ಬೆರಕೆವೆಳಗು ವಾಸವಶರಾಸನದ ವಾಸಣಿಗೆಯಿಕ್ಕೆ ನಿಂದು



ಕರಗಿದುದಾತ್ಮವೋಚನದ ಬೆಂಬಟಿಯೊಳ್ ತನು ಶುಕ್ಲಲೇಸ್ಯಕಂ
ಪರಮಪವಿತ್ರಮಂಕಬಳಕೆನ..ಬಾಳಜಾಳಮಾಯ್ತು ಕ ।
ರ್ಪುರಮುರಿದಳ್ಕಿದಲ್ಲಿ ಕರಿಕೆರ್ದಪುದೇ ಸಹಜಪ್ರಕಾಶಮಂ
ತರಿಸಲೊಡಂ ವಿಬೋಧಮಯಮೆಂತುಟಿದಪ್ಪುದೊಡಲ್ಜಿನೇಂದ್ರನಾ ॥ ೬೯

ವ॥ ಎಂದು ಪರಿನಿರ್ವಾಣಕಲ್ಯಾಣಪ್ರದೇಶಮೆ ಸಮಸ್ತಮಂಗಳವಸ್ತುವಿಸ್ತೀರ್ಣಮಾಗೆ ಸವಿಸ್ತರಮಾರಾಧಿಸಿ ಸಮನಂತರಂ ಸಮಾನಸಮಾಧಿಸಂಗತಪ್ರಗತಕೇವಳಿನಿಚಯಚೇತಕಳಸಕಂಗಳೊಳ್ ನವರತ್ನರಚಿತಪ್ರಕೃತಿಪ್ರದಾನಮುಂ ಬೇಱೆ ವೇಱೆ ನಿಱಿಸಿ ದೇವೇಂದ್ರವೃಂದಮನಿತುಮಾನಂದರಸದೋಕುಳಿಯಾಡೆ ಸೌಧರ್ಮೇಂದ್ರಂ ನಿಟಿಲತಟಘಟಿತಕರಕಮಲಕುಟ್ಮಳನುಂ ಜಯಜಯೋತ್ತಾರಿತಮುಖರವಮುಖಮಂಡಳನುಮಾಗಿ

ಮದನನನಿಕ್ಕಿ ಗೆಲ್ದ ಪರಿನಿಷ್ಕ್ರಮಣಾಯತಿ ತಳ್ತ ಘಾತಿಯಂ
ಬೆದಱಿ ಸುಬೋಧಮಂ ಬೆಳಗಿದುನ್ನತಿ ಲೋಕಮನುದ್ಧರುಂಡು ತೇ ।
ಗಿದ ಜವನಂ ಜವಂಗೆಡಿಸಿ ನಿತ್ಯನಿವಾಸಮನಾಳ್ದ ಶಕ್ತಿಯೊ
ಪ್ಪಿದುದೆಲೆ ದೇವದೇವ ನಿನಗಿಂ ನಿನಗೀವುದದೇಂ ಜಿನೇಶ್ವರಾ ॥ ೭೦

ವ॥ ಎಂದು ಕೀರ್ತಿಸಿಯುಮರ್ಚಿಸಿಯುಂ ಪೂಜಿಸಿಯುಂ ನೋಡಿಯುಂ ತಣಿಯದೆ

(ಮಲ್ಲಿಕಾಮಾಲೆ.)

ಕ್ಷೋಣಿಯಂ ಪಯದೇಟ್ಗೆ ಬಳ್ಬಳ ಬಳ್ಕಿಸುತ್ತಿರೆ ಮಿಕ್ಕ ದಿ
ಕ್ಕೋಣಮಂ ಕಡವಾಗಿಸುತ್ತಿರೆ ಹಸ್ತಚಾಪಳನಭ್ರಮಂ ।
ವೀಣೆ ವಾಮಭುಜಾಗ್ರಲಂಬಿತನಂಕಿಸುತ್ತಿರೆ ನಿಂದು ನಿ
ರ್ವಾಣನೃತ್ಯಮನಾಡಿದಂ ಸುರನಾಯಕಂ ವ್ರತನಾಯಕಂ ॥ ೭೧

ಖಳಕವರ್ಗಾಷ್ಟಕಕಷ್ಟಬಾಧೆಗಿದು ಲಕ್ಷಾಲಕ್ಷಮೆಂದಾಸಮು
ಜ್ಜ್ವಲಿತಸ್ತೂಪಕಲಾಪರಕ್ಷೆಗಳನೆಲ್ಲಂ ಕೊಂಡು ಬೊಟ್ಟಿಟ್ಟು ಮಂ ।
ಗಳಸಂಗೀತಕಮಂ ನೆಗಟ್ಟಿ ದಿವಿಜೇಂದ್ರಪ್ರೋಗೆ ಕುತೂ
ಹಳಿತಸ್ವಾಂತ[1] ನನಂತರಂ ನೆಲೆಗೆ ಪೌಳೋಮೀಮನೋವಲ್ಲಭಂ ॥ ೭೨

ಪರಿನಿರ್ವಾಣನಿವಾಸಲಕ್ಷ್ಮಿಯ ವಿವಾಹೋತ್ಸಾಹಮಂ ತಾಳ್ದಿದೀ
ಶ್ವರನಕ್ಷಯನಜೇಯನಂತರಹಿತಂ ತಾನಿರ್ದನಂತಂ ನಿರಂ ।
ತರಮೊಲ್ದೀಗೆ ವಿನೇಯಸಂತತಿಗೆ ಸಮ್ಯಗ್ದರ್ಶನಜ್ಞಾನಸ
ಚ್ಚರಿತಶ್ರೇಯಮನುತ್ತರೋತ್ತರಸುಖಶ್ರೀಯಂ ಜಗಚ್ಛ್ರೀಯುಮಂ ॥ ೭೩

ಸುರವೃಂದಾರಕವೃಂದನಂತಜಿನಪಶ್ರೀಪಂಚಕಲ್ಯಾಣಭಾ
ಸ್ಕರಪೂಜಾವಿಧಿಯಂ ನೆಗಟ್ಟಿ ಬಟಿಯಂ ವಾಕ್ಪೂಜೆಯಂ ಮತ್ತೆ ಬಿ ।
ತ್ತರಿಸಲ್ ತಾಂ ಕವಿಭಾಳಲೋಚನ ವಿಶೇಷಾಖ್ಯಾನದಿಂ ತಿರ್ದಿದಂ
ಬರೆದಂ ಶ್ರೀಮದನಂತನಾಥಕೃತಿಯಂ ಲೋಕಂ ಗುಣಂಗೊಳ್ವಿನಂ ॥ ೭೪

[1] ಗ. ಜ. ರ.

ಕ್ರಮದಿಂ ಕಾಶ್ಯಪಗೋತ್ರದಿಂ ಜನಿಯಿಪಂದಾಷಾಢಮುಂ ಕೃಷ್ಣಪ
ಕ್ಷಮುಮಾರೇವತಿಯುಂ ಜನಾರ್ದನಕವೀಂದ್ರಂಗಂ ಜಿನೇಂದ್ರಂಗಮಿಂ ।
ದಮದೊರ್ಂದಾದುದು ಮುಂತೆ ಕೂಡುವುದನೆಂತುಂ ಪೇೞ್ವುದೆ ಸ್ಪಷ್ಟಮು
ಷ್ಟಮಲೋಕಾದಿನಿವಾಸನೃತ್ಯಪದವೀಮಾಂಗಲ್ಯಸಾಕಲ್ಯದೊಳ್ ॥ ೭೫

ಚರಿತಪುರಾಣಮಂ ನೆಱೆಯೆ ಪೇೞ್ವೆಡೆಯೊಳ್ಪರಮಾಗಮಕ್ಕೆ ಮೇ
ಣ್ಗುರುಗಳನಾಂತು ನಿಂದೆಡೆಗೆ ಬಲ್ಲವಿಯೇಂ ನವಸುಪ್ರಯೋಗತ ।
ತ್ಪರತೆಗೆ ಬೇೞ್ಪ ಪಂಡಿತರನಳ್ಕುಱೆ ಕೇಳದ ನೋಡದಾಸೆವ
ಟ್ಟಿರದಸಹಾಯನಲ್ತೆ ಸುಕಳಾನ್ವಯದೊಳ್ಕವಿಭಾಳಲೋಚನಂ ॥ ೭೬

ರನ್ನಂ ವೈಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ।
ಹೊನ್ನನಸಹಾಯಕವಿ ಮೇಣ್
ಜನ್ನಿಗನಸಹಾಯಸುಕವಿ ಕವಿಚಕ್ರಿಗಳೊಳ್ ॥ ೭೭

ಪಾಡುವ ಸಾಳಗಂ ಲಳಿಯೊಳಾಡುವ ನಚ್ಚಣಿ ಮೆಯ್ವಸಂಗಳಿಂ
ತೀಡುವ ತೆಂಬೆಲರ್ತೊಳಗಿ ಮೂಡುವ ಪೂರ್ಣಸುಧಾಂಶು ರಾಗದಿಂ ।
ನೋಡುವ ಪೆಣ್ಣ ಕಣ್ಣ ಕಡೆ ಸೋಲಿಸಲಾರ್ಪವೆ ಭಾಳಲೋಚನಂ
ಮಾಡಿದ ಕಾವ್ಯರೀತಿ ಕಿವಿದಾಗಿದ ಭಾವಕರಂತರಂಗಮಂ ॥ ೭೮

ಪದಪಿಂ ತಾಂ ಪೆಸರ್ಗೊಂಡಿಳಾಧಿಪತಿಯೇ ರಾಯಂ ನಲಂಪಿಂದಮಿ
ರ್ದುದೆ ಸರ್ವಜ್ಞಸಭಾಸ್ಥಲಂ ಗಡಣಗೊಂಡಾಜಾಣರೊಳ್ ಜಾಣರಿ ।
ರ್ದುದೆ ದೇವಪ್ರಜದೊಳ್ಸುದೇಶ ಮುದದಿಂ ವ್ಯಾಖ್ಯಾನಮಂ ಮಾಡಿ ಕೇ
ಳಿದಪಂ ವಾಗ್ಮಿಗಣಾಗ್ರಗಣ್ಯನೆನೆ ಜನ್ನಂಗಾರ್ಸಮಂ ಧಾತ್ರಿಯೊಳ್ ॥ ೭೯

ಇದು ಲೋಕೋತ್ತಮಮಪ್ಪ ವಿದ್ಯೆ ಜಗದೊಳ್ತಾನಿತ್ತ ಕೆಯ್ಯಲ್ಲದೊ
ಡ್ಡಿದ ಕೆಯ್ಯಲ್ಲದ ಪೆಂಪು ಭೂಭುಜರೊಳದ್ವೈತೀಯಮಾಗಿರ್ಪಸ ।
ಲ್ಗೆ ದಿಟಕ್ಕನ್ಯರ ಲೇಸನಲ್ಲದೆನಗಿಂತಂತೆಂದು ಮಾತಾಡಲೊ
ಲ್ಲದ ಸತ್ವಂ ಕವಿಭಾಳಲೋಚನನೊಳುಂಟಿನ್ನೊರ್ವರೊಳ್ತೋಱಿಸಾ ॥ ೮೦

ಕೊಡೆಯಂ ಪಟ್ಟಮನಾಂತ ಚಕ್ರಿ ಕವಿತಾಸಾಮ್ರಾಜ್ಯದೊಳ್ತೇಜದು
ಗ್ಗಡಮಂ ಕೀರ್ತಿಯನಾಂತ ಬಲ್ಲಹನಿಳಾಪುತ್ರತ್ವದೊಳ್ ಚಾಗಮಂ ।
ನುಡಿಯೊಳ್ಸತ್ಯಮನಾಂತ ರಾಜಮುನಿಪಂ ಸಮ್ಯಕ್ತ್ವದೊಳ್ಗೌರವಂ
ಪಡೆದಂ ಮಾನವಮೇರು ಜನ್ನಮರಸಂ ಸಾಹಿತ್ಯರತ್ನಾಕರಂ ॥ ೮೧

ಪೊಸಚೈತ್ಯಂ ಗಂಡರಾದಿತ್ಯನ ಪೊಬಲೊಳನಂತಂಗೆ ಚೆಲ್ವಪ್ಪಿನಂ ಮಾ
ಡಿಸಿ ನಾಂದೀಪದ್ಯಮಂ ಟಿಪ್ಪಣಿಸಿ ಚರಿತಪುರಾಣಕ್ಕದಂ ದರ್ಶದೊಳ್ದ್ವೋ ।
ರಸಮುದ್ರಂ ಮೇರು ತಾಂ ಮಾಡಿಸಿದ ಸೊಬಗ ಶಾಂತೀಶ್ವರಾವಾಸದೊಳ್ ಸ್ಥಾ
ಪಿಸಿದಂ ಜನ್ನಂಗೆ ಸಲ್ಗುಂ ಕೃತಿವಸತಿಯ ನಿರ್ಮಾಣಪುಣ್ಯಪ್ರಭಾವಂ ॥ ೮೨

ದೋರಸಮುದ್ರದೊಳ್ ವಿಜಯಪಾರ್ಶ್ವಜಿನೇಶ್ವರದಿವ್ಯಮಂದಿರ
ದ್ವಾರದ ಮುಂತೆ ಮಾಡಿಸಿದ ಶಾಂತಿಜಿನಾಲಯದೊಳ್ಸುಮೇರುವಂ ।
ದಾರದ ಕೊಂಬಿನರ್ಥಿಯೆನಲುಂಬಿದ ಮೇಣ್ಕವಿಭಾಳಲೋಚನಂ
ಧಾರಿಣಿಗಿಂತು ಮಾಡಿದನನಂತಪುರಾಣದ ಸುಪ್ರತಿಷ್ಠೆಯಂ ॥ ೮೩

ಶಕಸಂವತ್ಸರಮಂದು ಸಾಸಿರದ ನೂಱ್ತೊಂಬತ್ತೆರಡಿಲ್ಲಿನಂ
ವಿಕೃತಾಬ್ದಂ ಬರೆ ಚೈತ್ರಶುದ್ಧದಶಮೀ ದೇವೇಜ್ಯನೊಳ್ಪುಷ್ಯತಾ ।
ರಕದೊಳ್ಮಾಡಿಸಿದಂ ಪ್ರತಿಷ್ಠೆಯನನಂತಶ್ರೀಪುರಾಣಕ್ಕೆ ಕ
ಮ್ಮೆಕುಲಾಂಭೋರುಹಭಾನು ಜನ್ನಮರಸಂ ಸಾಹಿತ್ಯರತ್ನಾಕರಂ ॥ ೮೪

ನರಸಿಂಹಂ ಮಗಧಾದಿರಾಯಲಯಕಾಲಂ ಭಾಳವಿಸ್ತಾರಕಂ
ಸ್ಥಿರರಾಜ್ಯೋದ್ಭವಲಕ್ಷ್ಮಿಯಿಂದೆ ಸುಖಮಿರ್ಕಾಚಂದ್ರತಾರಂ ಜಿನೇ ।
ಶ್ವರಧರ್ಮಂ ತ್ರಿಜಗದ್ವಿನೇಯಖಳಕರ್ಮಧ್ವಾಂತಮಂ ತೂಳ್ದಿ ಭಾ
ಸ್ಕರಬಿಂಬಂ ಶರದಿಂದುಬಿಂಬಮೆನಿಸಲ್ಕಾಕಲ್ಪಕಲ್ಪಂ ಬರಂ ॥ ೮೫

ಗದ್ಯ ॥ ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ ಕವಿಚಕ್ರವರ್ತಿಬಿರುದ
ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್
ಪರಿನಿರ್ವಾಣಕಲ್ಯಾಣವರ್ಣನಂ ಚತುರ್ದಶಾಶ್ವಾಸಂ ಸಂಪೂರ್ಣಂ.

ಅನಂತನಾಥ ಪುರಾಣಂ ಸಂಪೂರ್ಣಂ.

## ಪರಿಶಿಷ್ಟ. ೧.

ಚಾವುಂಡರಾಯವಿರಚಿತಮಪ್ಪ ತ್ರಿಷಷ್ಟಿಲಕ್ಷಣಮಹಾಪುರುಷ ಪುರಾಣ
ದಲ್ಲಿ ವರ್ಣಿತವಾಗಿರುವ ಅನಂತತೀರ್ಥಕರನ ಕಥಾ ಸಂಗತಿ.

ಶ್ರೀಮಹಿತಮೆನಿಪ ಸದ್ಧ
ರ್ಮಾಮೃತದಿಂ ತಣಿಪಿ ಭವ್ಯರಂ ನೆಗಟ್ದ ಮಹೋ ।
ದ್ದಾಮಗುಣರ್ ಲೋಕೈಕ ಶಿ
ಖಾಮಣಿಗಳನಂತರೀಗನಂತಶ್ರೀಯಂ ॥ ೧

ಧಾತಕೀ ಷಂಡದ ಪೂರ್ವದ ಮಂದರದ ಐರಾವತಕ್ಷೇತ್ರದರಿಷ್ಟಪುರವ ನಾಳ್ವ ಪದ್ಮರಥನೆಂಬರಸಂ ಸ್ವಯಂಪ್ರಭಜಿನರ ಪಕ್ಕದೆ ಧರ್ಮಮಂ ಕೇಳ್ದು ವೈರಾಗ್ಯಪರಂ ತನ್ನ ಮಗಂ ಘನರಥಂಗೆ ರಾಜ್ಯಮಂ ಕೊಟ್ಟು ಸಂಯಮಧ್ದರನೇಕಾದಶಾಂಗಧಾರಿ ಷೋಡಶಭಾವನೆಗಳಿಂ ತೀರ್ಥಕರಪುಣ್ಯಮಂ ಕಟ್ಟಿ ಜೀವಿತಾಂತರದೊಳ್ ಆರಾಧನಾವಿಧಿಯಿಂದಚ್ಯುತಕಲ್ಪದೊಳ್ ಪುಷ್ಪೋತ್ತರವಿಮಾನದೊಳ್ ಅಚ್ಯುತೇಂದ್ರನಿಪ್ಪತ್ತೆರಡು ಸಾಗರೋಪಮನುಮಾಱುಮೊಳನಿಡಿಯನುಂ ಶುಕ್ಲಲೇಸ್ಯಾಪರಿಣಾಮನುಂ ಸಪ್ತಪೃಥ್ವಿಗತಾವಧಿಜ್ಞಾನನುಮಾಗಿ ಸುಖಮನನುಭವಿಸುತ್ತುಮಿರ್ಪಿನಮಿತ್ತ ಜಂಬೂದ್ವೀಪದ ಭರತಕ್ಷೇತ್ರದಯೋಧ್ಯಾನಗರಮನಾಳ್ವ ಇಕ್ಷ್ವಾಕುವಂಶದ ಕಾಶ್ಯಪಗೋತ್ರದ ಸಿಂಹಸೇನಮಹಾರಾಜಂಗೆ ಯರಸಿ ಜಯಶ್ಯಾಮಾಮಹಾದೇವಿ ಸೌಧರ್ಮಕೃತವಸುಧಾರಾದಿಪೂಜಾಪೂರ್ವಕಂ ಕಾರ್ತಿಕ ಪಾಡಿವದ ಬೆಳಗಪ್ಪ ಜಾವದೊಳ್ ರೇವತೀನಕ್ಷತ್ರದೊಳ್ ಷೋಡಶಶುಭಸ್ವಪ್ನದರ್ಶನಾನಂತರಮೊಂದು ಗಜಂ ತನ್ನ ಮುಖಮಂ ಪುಗುವುದಂ ಕಂಡು ಅವಧಿಜ್ಞಾನಿಯಪ್ಪ ನಿಜೇಶನಿಂ ತತ್ಫಲಮನಱಿದು ಸುಖಮಿರ್ಪಿನಮಚ್ಯುತೇಂದ್ರಂ ಸ್ವರ್ಗಾವತರಣಕಲ್ಯಾಣಪೂಜಾಪೂರ್ವಕಮಾದೇವಿಯ ಗರ್ಭಕ್ಕವತರಿಸಿ ವಿಮಲಭಟ್ಟಾರಕರ ಸಂತಾನಂ ಪತ್ತು ಸಾಗರೋಪಮದ ಕಡೆಯ ಪಲ್ಯೋಪಮದ ತ್ರಿಭಾಗದೊಳ್ ಧರ್ಮವ್ಯುಚ್ಛಿನ್ನಮಾಗಿರ್ದ ಕಾಲದೊಳ್ ಜ್ಯೇಷ್ಠಬಹುಳ ದ್ವಾದಶಿಯೊಳ್ ಪುಷ್ಪಯೋಗದೊಳ್ ಪುಟ್ಟೆ ಸೌಧರ್ಮೇಂದ್ರಂ ಬಂದು ಜನ್ಮಾಭಿಷೇಕಪೂರ್ವಕಮನಂತಜ್ಞಾನಾದಿಸಕಲಗುಣಸಂಪನ್ನರಪ್ಪರೆಂದನಂತರೆಂಬನ್ವರ್ಥನಾಮಮನಿಟ್ಟು ಪೋದನಿತ್ತಲಾತೀರ್ಥಕರಕುಮಾರಂ ತ್ರಿಜ್ಞಾನಧರರುಂ ತ್ರಿಂಶಲ್ಲಕ್ಷವರುಷಪರಮಾಯುಷ್ಯರುಂ ಐವತ್ತು ಬಿಲ್ನಿಡಿಯರುಂ ಕನಕವರ್ಣರುಮಾಗಿ

ಬೆಳೆಯೆ ಲಕ್ಕೆಯುಮಯ್ವತ್ತುಸಾಸಿರವರ್ಷಂ ಕುಮಾರಕಾಲಂ ಪೋಗೆ ರಾಜ್ಯ ದೊಳ್ನಿಂದು ಪದಿನ್ಯೆದು ಲಕ್ಕೆ ವರ್ಷಂ ರಾಜ್ಯಕಾಲಂ ಸಲ್ವಿನಮೊಂದು ದಿವಸಮು ಳ್ಕಾಪಾತದರ್ಶನದಿಂ ಮತಿಜ್ಞಾನಕ್ಷಯೋಪಶಮಪ್ರಯೋಗಸಂಜನಿತನಿರ್ವೇಗಂ ಲೋಕಾಂತಿಕದೇವರ್ ಪ್ರತಿಬೋಧಿಸೆ ತಮ್ಮ ಮಗನಪ್ಪ ವಿಜಯನಂ ರಾಜ ದೊಳ್ನಿಲಿಸಿ ಸಾಗರದತ್ತೆ ಯೆಂಬ ಶಿಬಿಗೆಯನೇಱಿ ಸಹೇತುಕವನಕ್ಕೆ ಷಷ್ಠೋಪ ವಾಸದಿಂ ಜ್ಯೇಷ್ಠಬಹುಳದ್ವಾದಶಿಯಪರಾಹ್ಣದೊಳ್ ರೇವತೀನಕ್ಷತ್ರಮಾಗೆ ಸಾಸಿರ ರರಸುಗಳ್ವೆರಸು ದೀಕ್ಷೆಗೊಂಡು ಚತುರ್ಜ್ಞಾನಧರನಯೋಧ್ಯಾಪುರಕ್ಕೆ ಚರಿಗೆವರೆ ಕನಕವರ್ಣನಪ್ಪ ವಿಶಾಖನೃಪನ ಮನೆಯೊಳ್ ನಿಲೆ ಪಂಚಾಶ್ಚರ್ಯಂ ನೆಗಱೆ ಮೌನವ್ರತದಿನೆರಡು ವರ್ಷಂ ಛದ್ಮಸ್ಥಕಾಲಂ ಸಲೆ ಸಹೇತುಕವನದಶ್ವತ್ಥವೃಕ್ಷದ ಡಿಯೊಳ್ ಚೈತ್ರಮಾಸದಮಾವಾಸೆಯಪರಾಹ್ಣದೊಳ್ ರೇವತೀನಕ್ಷತ್ರದೊಳ್ ಕೇವಲಜ್ಞಾನೋತ್ಪತ್ತಿಯಾಗೆ ಸೌಧರ್ಮಕೃತಕಲ್ಯಾಣಂ ಸಾಸಿರದೆಂಟನ್ವರ್ಥ ನಾಮಂಗಳಂ ತಾಳ್ದಿ ಜಯಧಾಮಮೊದಲಾಗಯ್ವದಿಂಬರ್ಗಣಧರರುಂ ಸಾಸಿ ರ್ವರ್ ಪೂರ್ವಧರರುಂ ಮೂವ್ವತೊಂಬೈಸಾಸಿರದಯ್ನೂರ್ವರ್ಶಿಕ್ಷಕರುಂ ನಾಲ್ಸಾಸಿರದ ಮೂವದಿಂಬರವಧಿಜ್ಞಾನಿಗಳುಂ ಐಸಾಸಿರ್ವರ್ ಕೇವಲಿಗಳುಂ ಎಣ್ಸಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಐಸಾಸಿರ್ವರ್ ಮನಃಪರ್ಯಾಯ ಜ್ಞಾನಿಗಳುಂ ಎರಡುಲಕ್ಕವಾದಿಗಳುಂ ಸರ್ವಶ್ರೀಮೊದಲಾಗೊಂದು ಲಕ್ಕೆಯು ಮೆಣ್ಸಾಸಿರ್ವರಜ್ಜಿಯರುಂ ಎರಡುಲಕ್ಕೆ ಶ್ರಾವಕರುಂ ನಾಲ್ಕು ಲಕ್ಕೆ ಶ್ರಾವಕಿ ಯರುಂ ಅಸಂಖ್ಯಾತದೇವರುಂ ದೇವಿಯರುಂ ಸಂಖ್ಯಾತತಿರ್ಯಗ್ಜಾತಿಗಳುಂ ಪಾತಾಳಯಕ್ಷನುಮನಂತಮತಿಯಕ್ಷಿಯುಂ ಬೆರಸು ಧರ್ಮೋಪದೇಶಂಗೆಯ್ವುತ್ತು ಮೆರಡು ವರುಷಂಗುಂದಿದೇೞುಲಕ್ಕೆಯುಮಯ್ವತ್ತುವರ್ಷಂ ವಿಹಾರಿಸಿ ಸಂ ಮ್ಮೇಧಗಿರಿಯೊಳೊಂದು ತಿಂಗಳ್ ವಿಹರಣಮನುೞಿದು ಆಱು ಸಾಸಿರ ದ್ವೆನೂರ್ವ ಮುನಿಗಳ್ವೆರಸು ಪ್ರತಿಮಾಯೋಗಧರನಮಾವಾಸೆಯ ಪೂರ್ವರಾತ್ರದೊಳ ನಂತಭಟ್ಟಾರಕರ್ ಮುಕ್ತಿಗೆ ಸಂದರ್. ಸೌಧರ್ಮೇಂದ್ರಂ ಪರಿನಿರ್ವಾಣಕಲ್ಯಾ ಣದೊಳಾನಂದನೃತ್ಯಮನಾಡಿಪೋದಂ.

ಇದು ಸಕಲಶಾಸ್ತ್ರಸಂಯಮಸಂಪನ್ನಶ್ರೀಮದಜಿತಸೇನಭಟ್ಟಾರಕ
ಚರಣಕಮಲಚಂಚರೀಕಧರ್ಮ ವಿಜಯ ಶ್ರೀಮಚ್ಚಾವುಂಡ
ರಾಜವಿರಚಿತಮಪ್ಪ ತ್ರಿಷಷ್ಟಿಲಕ್ಷಣ ಮಹಾ
ಪುರಾಣದೊಳ್ ಅನಂತನಾಥ ಪುರಾಣಂ

---

# ಪರಿಶಿಷ್ಟ ೨.

## ಶ್ರೀಮದಂತತೀರ್ಥಕರಸಂತಾನದೊಳ್ ಸುಪ್ರಭನುಂ ಪುರುಷೋತ್ತಮನು ಮೆಂಬ ಬಲದೇವವಾಸುದೇವರ ಚರಿತಂ.

ಈ ಜಂಬೂದ್ವೀಪದ ಭರತಕ್ಷೇತ್ರದ ಪಾದನಪುರಮನಾಳ್ವ ವಸುಷೇಣನೆಂಬ ರಸಂ ತನ್ನಯ್ದೂರ್ವರರಸಿಯೊಳಗ್ರಗಣ್ಯೆಯುಮಪ್ಪ ಪ್ರಿಯನಂದಾಮಹಾದೇವಿ ಯೊಳನುಭವಿಸುತ್ತಿರ್ಪನ್ನೆಗಮೊಂದು ದಿವಸಂ ಮಳಯ ವಿಷಯಾಧಿಪತಿಯುಪ್ಪ ಚಂಡಶಾಸನನೆಂಬೊಂ ಮಿತ್ರತ್ವದಿಂ ಪಾದನಪುರಕ್ಕೆ ಬಂದಾತಂ ಪ್ರಿಯನಂದೆಯುಂ ಕಂಡು ಸೋಲ್ತುಪಾಯಾಂತರದಿನಾಕೆಯುಂ ಕೊಂಡು ಪೋಗೆ ಭಂಗವಾಗಿರ್ದ್ದ ವಸುಷೇಣಂ ದುಃಖಾಕ್ರಾಂತನಿಂತೆಂದು ಚಿಂತಿಸಿದಂ :—ನಾಂ ಮಂದಭಾ ಗ್ಯನೇಂ ಸುಕೃತಫಲವಿಹೀನನೆನ್ನ ಪಗೆವನಂ ಕಿಡಿಸಲಾರ್ತ್ತೆನೆಲ್ಲೆನೆ ನಿರ್ವೇಗಮಾಗಿ ರ್ದ್ದೊಂದುದಿವಸಂ ಶ್ರೇಯಾಂಸರೆಂಬ ಗಣಧರರ ಪಕ್ಕದೆ ತಪಂಬಟ್ಟು ಸಿಂಹನಿಷ್ಕ್ರೀ ಡಿತಮೆಂಬ ತಪದೊಳ್ನೆಗಟ್ಟು ಎನ್ನ ತಪದ ಫಲಮುಂಟಪ್ಪೊಡಮನ್ಯಭವದೊಳ್ ಸಕಲಮನೋಹರರೂಪನುಮಪ್ರತಿಹತಶಾಸನನುಮಪ್ಪೆನಕ್ಕೆಂದು ನಿದಾನಂ ಗೆಯ್ದು ಕಾಲಾಂತರದೊಳೊಂದುತಿಂಗಳ್ ನೋಂತು ಮುಡುಪಿ ಸಹಸ್ರಾರ ಕಲ್ಪದೊಳ್ಪುಟ್ಟಿ ಪದಿನೆಂಟುಸಾಗರೋಪಮಸುಖಮನನುಭವಿಸುತಿರ್ಪ್ಪಿನಮಿತ್ತ ಜಂಬೂದ್ವೀಪದ ಭರತಕ್ಷೇತ್ರದ ದ್ವಾರಾವತೀಪುರದೊಳ್ ಮಹೇಂದ್ರಕಲ್ಪದಿಂ ಬಂದು ಸೋಮಪ್ರಭನೆಂಬರಸ ನಾಲ್ವತಿಚ್ಚಾರ್ಸಿರವರುಷಪರಮಾಯುಷ್ಯಮನೊ ಡೆಯನುಂ ಐವತ್ತೊಂದುಬಿಲ್ಲಿಡಿಯನುಮಾಗಿರ್ಪ್ಪಿನಂ ಮಹೇಂದ್ರಕಲ್ಪಜಂ ಬಂದು ಜಯಾವತಿಯೆಂಬರಸಿಯುಂ ಆನತಕಲ್ಪದಿಂ ಬಂದ ಸೀತೆಯುಂ ಬೆರಸು ಸುಖ ಮಿರ್ಪ್ಪಿನಂ ಜಯಾವತಿಗೆ ಶುಭಸ್ವಪ್ನದರ್ಶನಾನಂತರಂ ಪೂರ್ವಾಭಾದ್ರಪದ ನಕ್ಷತ್ರದೊಳ್ ಮುಂಪೇಳ್ದ ಮಹಾಬಳಚರನಪ್ಪ ಸಹಸ್ರಾರಕಲ್ಪಜಂ ಬಂದು ಸುಪ್ರಭನೆಂಬೊಂ ಮಗನಾದೊಂ. ಸೋಮಪ್ರಭಂಗಂ ಸೀತೆಗಂ ವಸುಷೇಣ ಚರನಪ್ಪ ಸಹಸ್ರಾರಕಲ್ಪಜಂ ಬಂದು ಪುರುಷೋತ್ತಮನೆಂಬ ಮಗನಾದನಂತಿ ರ್ವ್ವರುಂ ಬಲದೇವವಾಸುದೇವರೆನಿಸಿ ಧವಲನೀಲವರ್ಣರುಮಪ್ಪಯ್ವತ್ತುಬಿಲ್ಲಿ ಡಿಯರುಂ ಪಂಚಾಶಲ್ಲಕ್ಷವರ್ಷಪರಮಾಯುಷ್ಯರುಮಾಗಿ ಸುಖಮಿರ್ಪ್ಪಿನಮಿತ್ತ ಕಾಶೀದೇಶದ ವಾರಣಾಸೀಪುರಮನಾಳ್ವ ಮಧುಕೈಟಭನೆಂಬನವನಲ್ಲಿಗೆ ಕಪ್ಪ ಮಂ ಬೇಡಿಯಟ್ಟೆ ಕುಡದಿರ್ದ್ದೊಡದಕ್ಕೆ ಮುಳಿದಿರ್ಪಿನಂ ನಾರದನಿಂ ಮುಳಿಸ್ಸು

ಪೆಟ್ಟಿಊ ಮೇಲೆವಂದು ಕಾದಿ ಪುರುಷೋತ್ತಮನಂ ಚಕ್ರದೊಳಿಟ್ಟೊಡೆದು ಬಂದು ಬಲದ ತೋಳಕೆಲದೊಳ್ ನಿಲ್ವುದುಂ ಪುರುಷೋತ್ತಮನಾಚಕ್ರಮಂ ಕೊಂಡು ಮಧುಕೈಟಭನಂ ಕೊಂದು ತ್ರಿಖಂಡಪತಿಗಳಾಗಿ ರಾಜ್ಯಂಗೆಯ್ದು ಜೀವಿತಾಂತ್ಯದೊಳ್ ಪುರುಷೋತ್ತಮನವಧಿಸ್ಥಾನಕ್ಕೆ ಸಂದೊಂ. ಸುಪ್ರಭನು ಮಾತನ ವಿಯೋಗದೊಳ್ ಸೋಮಪ್ರಭಕೇವಲಿಗಳ ಸಾರೆ ದೀಕ್ಷೆಯಂ ಕೈಕೊಂಡು ಮೋಕ್ಷಕ್ಕೆ ಪೋದಂ.

---



## ಪರಿಶಿಷ್ಟ ೩

## ಜನ್ನನ ಅನಂಥನಾಥಪುರಾಣದ ಕಥಾಸಂಗ್ರಹ

### ಪ್ರಥಮಾಶ್ವಾಸಂ

ಜಿನಸ್ತುತಿ, ಪಂಚಾಚಾರ್ಯಸ್ತುತಿ, ಜಿನಧರ್ಮ, ಸರಸ್ವತಿ, ಯಕ್ಷಯಕ್ಷಿಯರು, ಶ್ರುತಕೇವಲಿಗಳು, ಗೃಧ್ರಪಿಂಛಾಚಾರ್ಯರು, ಕೊಂಡಕುಂದಾಚಾರ್ಯರು, ಸಿಂಹಣಂದಿ, ಭೂತಬಳಿ, ಪುಷ್ಪದಂತ, ಜಿನಸೇನ, ವೀರಸೇನ, ಸಮಂತಭದ್ರ, ಗುಣಭದ್ರ, ಪೂಜ್ಯಪಾದ, ಅಕಳಂಕ, ಗುಣಚಂದ್ರ, ಇವನ ಮಕ್ಕಳು ಕನಕಚಂದ್ರ ಮಾಧವಚಂದ್ರರು, ಮಾಧವಚಂದ್ರನ ಶಿಷ್ಯ ತನ್ನಗುರು ಗಂಡವಿಮುಕ್ತ, ಶಿಖಾಮಣಿ, ರಾಮಚಂದ್ರ; ತನ್ನ ಹೆಂಡತಿ ಲಕುಮಾದೇವಿಯ ಗುರುಕುಲ ಪ್ರಸಿದ್ಧಾಚಾರ್ಯರೊಳಗೆ ಜಾವಳಿಗೆಯ ಮುನಿಚಂದ್ರ, ಇವನ ಶಿಷ್ಯ ಕುಲಭೂಷಣ ಸಕಲಚಂದ್ರ, ಇವನ ಮಗ ಮಾಧವಚಂದ್ರ, ಈತನ ಶಿಷ್ಯ ಬಾಲಚಂದ್ರ ಕವಿಕಂದರ್ಪ, ಇವರುಗಳ ಸ್ತುತಿ. [1–33] ಪಂಪಾದಿ ಜೈನಪುರಾಣ ಕಾವ್ಯಕರ್ತೃಗಳ ಸ್ಮರಣೆ[35]ಕವಿತಾಸ್ತುತಿ, ಸತ್ಕೃತಿ ದುಷ್ಕೃತಿಗಳ ವಿವರಣೆ, ಸ್ವಕವಿತಾಸ್ತುತಿ, ಆತ್ಮಸ್ತುತಿ, ವಿನೇಯಜನರು ಕವಿಯನ್ನು ಕೇಳಿಕೊಂಡದ್ದರಮೇಲೆ ಈ ಪುರಾಣವನ್ನು ತಾನು ಬರೆದುದು [36–63], ಜಿನನಿಗೆ ಅರ್ಪಿಸಿದುದು [64], ಈ ಕಥೆಯನ್ನು ವೃಷಭಸೇನಸ್ವಾಮಿಯು ಭರತನಿಗೆ ಮೊದಲು ಕೈಲಾಸದಲ್ಲಿ ಹೇಳಿದ್ದು, ಅದನ್ನೆ ವಿಪುಳಾದ್ರಿಯಲ್ಲಿ ಗೌತಮನು ಶ್ರೇಣಿಕನಿಗೆ ವರ್ಧಮಾನನ ಸನ್ನಿಧಿಯಲ್ಲಿ ವಿವರಿಸಿದ್ದು [65], ಪುರಾಣ ಮತ್ತು ಕಾವ್ಯಾಂಗ ನಿರೂಪಣ [66], ಲೋಕಾಕಾರ ನಿರೂಪಣ [67–71], ಜಂಬೂದ್ವೀಪವರ್ಣನೆ, ಅದರಲ್ಲಿ ಪ್ರಸಿದ್ಧಂಗಳಾದ ಭರತೈರಾವತ ಕ್ಷೇತ್ರಗಳು, ಆ ಭರತಕ್ಷೇತ್ರದಲ್ಲಿ ಸುಪ್ರಸಿದ್ಧವಾದ ಕೋಸಲದೇಶ, ಇದಕ್ಕೆ ರಾಜಧಾನಿ ಅಯೋಧ್ಯೆ, ಇವುಗಳ ವರ್ಣನೆ [72–120]

### ದ್ವಿತೀಯಾಶ್ವಾಸಂ.

ಇಕ್ಷ್ವಾಕು ವಂಶೀಯನಾದ ಸಿಂಹಸೇನನ ಗುಣಕಥನ [1–11] ಆತನ ಪಟ್ಟದರಾಣಿ ಜಯಶ್ಯಾಮೆಯ ಗುಣಪ್ರಶಂಸೆ [12–16]. ಆತನ ಪರಿವಾರ,

ಒಡ್ಡೋಲಗ ಇವುಗಳ ವರ್ಣನೆ [11-32], ಅವನ ಒಡ್ಡೋಲಗಕ್ಕೆ ಅಪ್ಸರಸ್ತ್ರೀಯರೊಡನೆ ಇಷ್ಟಶರ್ಮನೆಂಬ ಬ್ರಾಹ್ಮಣೋತ್ತಮನು ಪುಷ್ಪಕ ವಿಮಾನದಿಂದಿಳಿದು ಬಂದುದು [33-39], ಆ ಬ್ರಾಹ್ಮಣನ ವರ್ಣನೆ [40-46], ಅವನ ಆಶೀರ್ವಾದ, ಉಪಾಯನವಿನಿಯೋಗ, ಅವನ ಪಕ್ಕದಲ್ಲಿರುವ ಮದನಮಂಜರಿಯೆಂಬಂಗನೆಯ ಪೂರ್ವವೃತ್ತಕಥನ, ಜಯಶ್ಯಾಮೆಯ ಅಕ್ಕನನ್ನು ವಿದ್ಯಾಧರನಾದ ಉತ್ಪಲಚೂಡನೆಂಬವನು ಮೋಹಿಸಿಕೊಂಡೊಯ್ದು ಮದುವೆಯಾದುದು [47-55] ಭುಜಂಗಸೇನನು ಮಗನಾದ ಕೀರ್ತಿಶೇಖರನಿಗೆ ರಾಜ್ಯಭಾರವನ್ನು ಒಪ್ಪಿಸಿದುದು [57] ಕೀರ್ತಿಶೇಖರನು ಜಿನಪೂಜೆಗಾಗಿ ತನ್ನ ಭಾವನೊಡನೆ ಕುರುವಿಂದಕ್ಕೆ ಹೋದುದು ಅಲ್ಲಿ ಜಯಶ್ಯಾಮೆಗೆ ಪುತ್ರೋತ್ಸವವು ಎಂದಾಗುವುದೆಂದು ಮುನಿಶ್ರೇಷ್ಠರನ್ನು ಕೇಳಲು, ಅವರು ಎಲ್ಲವನ್ನೂ ಇಷ್ಟಶರ್ಮನಿಂದ ತಿಳಿಯಬೇಕೆಂದುದು [58-62]

## ತೃತೀಯಾಶ್ವಾಸಂ.

ಇಷ್ಟಶರ್ಮನು ಕಥೆಯನ್ನು ಆರಂಭಿಸಿದುದು [1-3]' ಜಂಬೂದ್ವೀಪ, ಧಾತಕೀಖಂಡ, ಐರಾವತಕ್ಷೇತ್ರ, ಕೋಸಲದೇಶ, ಅರಿಷ್ಟಪುರ, ಇವುಗಳ ವರ್ಣನೆ [3-18], ಅದರ ದೊರೆ ಪದ್ಮರಥ, ಆತನ ಪಟ್ಟಮಹಿಷಿ ಲಕ್ಷ್ಮೀಮತಿ, ಮಗ ಮೇಘರಥ, ಇವರ ವರ್ಣನೆ[19-28] ಆತನ ಆಸ್ಥಾನಕ್ಕೆ ಒಬ್ಬ ದೂತನು ಬಂದು ದಿವ್ಯಯೋಗೀಶ್ವರ ಕೂಟವು ಅತ್ತಕಡೆ ಬರುತ್ತಿರುವುದಾಗಿ ಪದ್ಮರಥನಿಗೆ ತಿಳಿಸುವುದು [29-32] ಅವನೆದ್ದು ಮುನಿಬೃಂದಕ್ಕೆ ನಮಸ್ಕರಿಸಿ ದರ್ಶನಾರ್ಥವಾಗಿ ಆನೆಯಮೇಲೆ ಹೊರಟುದು, ತಪೋವನ [32-41] ಜಿನಮಂದಿರ ಮತ್ತು ಜಿನಪೂಜೆ, ಇವುಗಳ ವರ್ಣನೆ, ಅಲ್ಲಿ ಸ್ವಯಂಪ್ರಭರೆಂಬ ಮುನಿವರ್ಯರನ್ನು ಶರಣುಹೊಕ್ಕು ಅವರಲ್ಲಿ ಜೈನಧರ್ಮಬೋಧೆಯನ್ನು ತೆಗೆದುಕೊಳ್ಳುವುದು [45-63] ಆಶ್ರಮೋದ್ಯಾನವನ್ನು ಬಿಟ್ಟು ಅರಮನೆಗೆ ಹಿಂತಿರುಗಿದುದು, ಸಂಧ್ಯಾಕಾಲ, ರಾತ್ರಿ, ಉಲ್ಕಾಪಾತ ಸಂದರ್ಶನ, ಇವುಗಳ ವರ್ಣನೆ[66-69] ಶರೀರಾದಿಗಳಲ್ಲಿ ಅಸ್ಥಿರತ್ವ ಬುದ್ಧಿ ಮತ್ತು ವಿಷಯದಲ್ಲಿ ಜಿಹಾಸೆ ಉಂಟಾಗುವುದು [70-80], ರಾಜ್ಯಸುಖಾನುಭೋಗ ಪರಾಙ್ಮುಖನಾಗಿ ಮಗನಿಗೆ ಪಟ್ಟಕಟ್ಟಿ ನಿರ್ವೇಗಪರನಾಗಿ ವನಕ್ಕೆ ಹೊರಡುವುದು [82-105] ಮಗನೂ ಪರಿಚಾರಕರೂ ಆತನ ವಿಯೋಗವನ್ನು ಸಹಿಸಲಾರದೆ ಆತನನ್ನು ಹಿಂಬಾಲಿಸುವುದು.

## ಚತುರ್ಥಾಶ್ವಾಸಂ.

ರಾಣಿಯ ವಾಸದವರು, ಮಂತ್ರಿವರ್ಯರು, ಸಾಮಂತರಾಜರು, ಧೊರೆಯುಹಿಂದೆ ಹೊರಟದ್ದು—ಧೊರೆಯು ಎಲ್ಲರನ್ನೂ ಸಂತೈಸಿ ಹಿಂದಕ್ಕೆ ಕಳುಹಿ ಸ್ವಯಂಪ್ರಭಮುನಿಯ ಆಶ್ರಮವನ್ನು ಸೇರಿದುದು—ಮುನಿವರ್ಯರನ್ನೂ ಸಾಧುಸಂಗವನ್ನೂ ಪ್ರದಕ್ಷಿಣೆಮಾಡಿ ದೀಕ್ಷೆಗೊಂಡು ಪಂಚಮಹಾವ್ರತಧಾರಿಯಾದುದು—(8–10) ವ್ರತಾಚರಣೆ—ತಪಸ್ಸುಮಾಡುವುದು. ಅಚ್ಯುತಕಲ್ಪ ಪ್ರಾಪ್ತಿ (12–56) ಈತನೇ ಚತುರ್ದಶಜಿನನಾಗಿ ಜಯಶ್ಯಾಮೆಯ ಗರ್ಭದಲ್ಲಿ ಅವತರಿಸುವನೆಂದು ಇಷ್ಟಶರ್ಮನು ಹೇಳಿದ್ದು—(57)—"ತ್ರೈಲೋಕ್ಯ ನಾಥನನ್ನು ಪಡೆವ ನಿಮ್ಮನ್ನು ನೋಡಿ ನಾವು ಕೃತಕೃತ್ಯರಾದೆವು; ಹೋಗಿ ಬರುವೆವು" ಎಂದು ಮದನಮಂಜರಿಯೂ ಬ್ರಾಹ್ಮಣನೂ ಹೇಳಿದುದು (59)—ಅವರನ್ನು ಸತ್ಕರಿಸಿ ಧೊರೆಯು ಕಳುಹಿಕೊಟ್ಟುದು (62)—ಗರ್ಭಾವತಾರ ವಾರ್ತೆ, ಪುರಜನರ ಸಂತೋಷ, ಇವುಗಳ ನಿರೂಪಣ. (63–69) ಧೊರೆಯ ಆಸ್ಥಾನಕ್ಕೆ ಒಬ್ಬ ವೈಮಾನಿಕನು ಬಂದು ಜಯಶ್ಯಾಮೆಯ ಉಪಚಾರಕ್ಕಾಗಿ ಇಂದ್ರನು ಅನೇಕ ಪರಿಚಾರಕರನ್ನು ಅಲ್ಲಿಗೆ ಅಟ್ಟಿರುವುದಾಗಿ ತಿಳಿಸಿದುದು—ಜಯಶ್ಯಾಮೆಯು ಒಂದುದಿನ ರಾತ್ರಿ ಕಂಡ ಸ್ವಪ್ನವನ್ನು ಧೊರೆಗೆ ತಿಳಿಸಿದುದು—ಧೊರೆಯು ಆ ಸ್ವಪ್ನದ ಫಲವನ್ನು ಆಕೆಗೆ ನಿರೂಪಿಸಿದುದು—[110—128] ಗರ್ಭವಿಲಾಸವರ್ಣನೆ. [130—134]. ಪುತ್ರಜನನ (136) [ಗರ್ಭಾವತರಣವೆಂಬ ಪ್ರಥಮಕಲ್ಯಾಣ].

## ಪಂಚಮಾಶ್ವಾಸಂ.

ಪುತ್ರಜನನವಾರ್ತೆಯನ್ನು ಕೇಳಿ ಅಯೋಧ್ಯೆಯು ಮಂಗಳ ಧ್ವನಿಯಲ್ಲಿ ಮುಳುಗಿರುವುದು—ಇಂದ್ರನಿಗೆ ಈ ವಾರ್ತೆ ಮುಟ್ಟುವುದು (7) ಕೂಡಲೇ ಈತನಿಗೆ ಜನ್ಮಾಭಿಷೇಕಮಾಡಲು ಇಂದ್ರನು ಉದ್ಯತನಾಗುವುದು (8) ದೇವೇಂದ್ರನು ಪತ್ನೀಸಮೇತನಾಗಿ ದೇವತೆಗಳೊಡನೆ ಅಯೋಧ್ಯೆಯನ್ನು ಕುರಿತು ಆನೆಯಮೇಲೆ ಹೊರಟು ಊರನ್ನು ಸೇರುವುದು—ಇಂದ್ರನು ಪೌಲೋಮಿಯನ್ನು ಜನನೀಗೃಹಕ್ಕೆ ಕಳುಹುವುದು (17–18) ಆಕೆ ಅಲ್ಲಿ ಮಾಯೆಯ ಶಿಶುವನ್ನಿಟ್ಟು ಪರಮಜಿನ ಶಿಶುವನ್ನು ಒಯ್ದು ತನ್ನ ಪತಿಗೆ ಕೊಡು

ವುದು. (17-29) ಇಂದ್ರನು ಐರಾವತವನ್ನೇರಿ ಆ ಶಿಶುಮಣಿಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿ ತನ್ನ ಪರಿವಾರದೊಡನೆ ಅಮರಗಿರಿಗೆ ಹೋದುದು (30-37) ಶಿಶುವನ್ನು ಪಾಂಡುಕಶಿಲೆಗೆ ಕರೆತಂದುದು (50) ಜನಶಿಶುವಿನ ಪೂಜೆ ಮತ್ತು ದುಗ್ಧಾಭಿಷೇಕ ಇವುಗಳ ವರ್ಣನೆ (51-89) ಸಂಭ್ರಮದಿಂದ ಶಿಶುವನ್ನು ಪುನಃ ಅಯೋಧ್ಯೆಗೆ ಕರೆತಂದುದು (89) ಸಿಂಹಸೇನನಿಗೂ ಜಯಶ್ಯಾಮೆಗೂ ಆದ ಸಂತೋಷ ನಿರೂಪಣೆ (91-99) ಇಂದ್ರನು ಶಿಶುವಿಗೆ ಅನಂತನೆಂಬ ಹೆಸರನ್ನಿತ್ತು ಅಮರೇಂದ್ರರೆಲ್ಲರನ್ನೂ ಕಳುಹಿ ಅಮರಾವತಿಗೆ ಹೋದುದು (100)

[ಜನ್ಮಾಭಿಷವಣವೆಂಬ ದ್ವಿತೀಯಕಲ್ಯಾಣ]

ಷಷ್ಠಾಶ್ವಾಸಂ.

ಅನಂತನ ಬಾಲಲೀಲೆ (1-9), ವಿದ್ಯಾಭ್ಯಾಸ (10-17), ಯೌವನ ಪ್ರಾಪ್ತಿ (17-22), ತಂದೆ ತಾಯಿಗಳಿಗೆ ಮಗನ ಮದುವೆಯಚಿಂತೆ (23-24)—ಇವುಗಳ ನಿರೂಪಣ—ಭದ್ರಬಲನೆಂಬವನು ಅವರ ಮಗನಿಗೆ ಕೀರ್ತಿಶೇಖರನ ಮಗಳಾದ ರತ್ನಮಾಲೆಯೇ ಸರಿಯಾದ ಹೆಣ್ಣೆಂದು ತಿಳಿಸುವುದು (24-30) ವಿವಾಹ ನಿಷ್ಕರ್ಷೆಯಾದುದು—ಅನಂತನನ್ನು ಮದುವೆಗೆ ಒಪ್ಪಿಸಿದುದು (31-34) ವಿವಾಹದ ಏರ್ಪಾಡು, ವಿವಾಹಮಂಟಪರಚನೆ, ಮದುವೆಯ ಸಂಭ್ರಮ, ಇವುಗಳ ವರ್ಣನೆ—ಅನಂತನಿಗೆ ಮದುವೆಯಾದುದು (35-64) ವಸಂತಸಮಯಾಗಮ, ಉದ್ಯಾನ ವಿನೋದ, ಇವುಗಳ ವರ್ಣನೆ—ಪಟ್ಟಗಜವನ್ನೇರಿ ಆತನು ನಂದನವನೋಪಾಂತಕ್ಕೆ ಬಂದುದು (93-97).

ಸಪ್ತಮಾಶ್ವಾಸಂ.

ಉದ್ಯಾನಕೇಳಿ, ಚಂದ್ರೋದಯ, ಇವುಗಳ ವರ್ಣನೆ.

ಅಷ್ಟಮಾಶ್ವಾಸಂ.

ಕೌಮುದೀಮಹೋತ್ಸವ ವರ್ಣನೆ

ನವಮಾಶ್ವಾಸಂ.

ರಾಜ್ಯಸುಖಾನುಭವ—ವರ್ಷಾಗಮ—ಮಿಂಚಿನ ಸಂದರ್ಶನ, ಸಂಸಾರದಲ್ಲಿ ಅನಿತ್ಯತ್ವ ಬುದ್ಧಿ, ನಿರ್ವೇಗ—ವಿಧಿವಿಲಾಸ (24-26), ನಾರಕಾವಸ್ಥೆ

(27–43), ಚತುರ್ಗತಿಸ್ಥಿತಿಗಳ ಮುಖ್ಯಕಾರಣ ಕರ್ಮ—ಕರ್ಮಕ್ಕೆ ಶತ್ರು ಸದ್ದರ್ಶನ ದೀಕ್ಷೆ, ದೀಕ್ಷೆಯಫಲ ಕೈವಲ್ಯಪ್ರಾಪ್ತಿ, ಇವುಗಳ ನಿರೂಪಣ—ಅನಂತನು ದೀಕ್ಷೆಯನ್ನುಕೊಂಡು ಸಂಸಾರವನ್ನು ತೊರೆದುದು—ಪರಿನಿಷ್ಕ್ರಮಣ ಕಲ್ಯಾಣ ನಿರೂಪಣ—ಇಂದ್ರನು ಪುನಃ ಪರಿವಾರದೊಡನೆ ಬಂದುದು (55–56) ಅನಂತನ ಆರಾಧನೆಯು ವರ್ಣನೆ (57–58) ಶಿಬಿಗೆಯನ್ನೇರಿ ಸಹೇತುಕವನಕ್ಕೆ ಬಂದುದು (62–68) ಅನಂತನು ಆಭರಣಾದಿಗಳನ್ನು ತೊರೆದುದು (75) ಪರಿನಿಷ್ಕ್ರಮಣವು ಜ್ಯೇಷ್ಠಕೃಷ್ಣದ್ವಾದಶಿಯಲ್ಲಿ ನಡೆದುದು (76) ಪ್ರಜೆಗಳ ಮೇಲೆ ಕರುಣೆ ಹುಟ್ಟಿ ಪುನಃ ಅಯೋಧ್ಯೆಗೆ ಬಂದುದು (80) ಪಂಚಾಶ್ಚರ್ಯ ವರ್ಣನೆ (87–91) ಅನಂತನ ಯೋಗನಿಷ್ಠೆಯ ವರ್ಣನೆ. (93–120) ತಪಃ ಪ್ರಭಾವದಿಂದ ಕೇವಲಜ್ಞಾನೋದಯವಾದುದು (120)

[ಪರಿನಿಷ್ಕ್ರಮಣ ಮತ್ತು ಕೇವಲ ಜ್ಞಾನೋದಯ ಎಂಬ ತೃತೀಯ ಚತುರ್ಥಕಲ್ಯಾಣಗಳು]

## ದಶಮಾಶ್ವಾಸಂ.

ಅನಂತನು ಸಕಲವಿಮಲ ಬೋಧಸ್ವರೂಪನಾದುದು—ಸಮವಸರಣ ಮಂಟಪವನ್ನು ವಿರಚಿಸಲು ಧನಾಧ್ಯಕ್ಷನಿಗೆ ನಿರೂಪಿಸಿದುದು.—ಇಂದ್ರನು ಆ ಮಂಟಪದ ಸಮೀಪಕ್ಕೆ ಬಂದುದು—ಗಂಧಕುಟೀವರ್ಣನೆ.—ಇಂದ್ರನು ಅನಂತನನ್ನು ಸ್ತುತಿಸಿದ್ದು (38–45) ಅನಂತನ ಪೂಜೆಯು ವರ್ಣನೆ (47–49) ಅನಂತನು ಮಾಡಿದ ಧರ್ಮೋಪದೇಶ ನಿರೂಪಣ.—

ಇತ್ತ ಪರಿನಿಷ್ಕ್ರಮಣ ಕಾಲದಲ್ಲಿ ರಾಜ್ಯರಕ್ಷಣೆಯ ಭಾರವನ್ನು ತಂದೆಯಾದ ಅನಂತನಿಂದ ವಹಿಸಿದ ವಿಜಯಕುಮಾರನು ತಂದೆಯನ್ನು ಅಗಲ್ದಿರಲಾರದೆ ಆತನನ್ನು ಹುಡುಕಿಕೊಂಡು ಬಂದುದು (52–54) ವಿರಕ್ತನಾಗಿ ತಂದೆಯನ್ನು ಹುಡುಕುತ್ತ ಹೊರಟದ್ದು. (55–58) ಸಹೇತುಕವನದೆಡೆಗೆ ಬಂದು ಅಲ್ಲಿದ್ದ ಅಶ್ವತ್ಥವೃಕ್ಷದಡಿಯಲ್ಲಿ ವಿಶ್ರಮಿಸಿಕೊಂಡುದು (60) ಅಲ್ಲಿಗೆ ಶಾಂತಿಶುಭಾಚಾರ್ಯರೆಂಬ ಮುನೀಂದ್ರರು ಬಂದುದು (62–63) ವಿಜಯನಿಗೆ ಆತನ ತಂದೆಯ ಸ್ಥಿತಿಯನ್ನು ಅವರು ವರ್ಣಿಸಿದುದು. (65–68) ಅನಂತ ವ್ರತೋಪದೇಶ, ಆ ವ್ರತದ ಅನುಷ್ಠಾನದಿಂದಾಗುವ ಫಲ ನಿರೂಪಣ.

(84-88) ಅನಂತನಿರುವ ಸ್ಥಳದ ನಿರ್ದೇಶ (89)—ವಿಜಯನು ಆ ವ್ರತವನ್ನು ಅನುಷ್ಠಿಸಲು ಆತನನ್ನು ಕೂಡಲೇ ಖೇಚರರು ಸಮವಸರಣ ಮಂಟಪಕ್ಕೆ ಒಯ್ದುದು—ಅಲ್ಲಿ ಆತನು ಅನಂತಜಿನ ದರ್ಶನವನ್ನು ಮಾಡಿ ಆತನನ್ನು ಪೂಜಿಸಿದುದು (92).

[ಪರಿನಿರ್ವಾಣ ಕಲ್ಯಾಣವೆಂಬ ಐದನೆಯ ಕಲ್ಯಾಣ].

## ಏಕಾದಶಾಶ್ವಾಸಂ.

ಮದನಪತಾಕೆಯೆಂಬ ಖೇಚರಾಂಗನೆ ತನ್ನ ತಂಗಿ ಚಿತ್ರಲತೆಗೆ ಜಯನಾಥ ಗಣಧರರು ಹೇಳಿದ ಸುಪ್ರಭ ಪುರುಷೋತ್ತಮರ ಕಥೆಯನ್ನು ಹೇಳುವುದು.-ಭಾರತವರ್ಷ, ಸುರಮ್ಯಮಂಡಳ, (4-11) ಪಾದನಪುರ (11-15) ಇವುಗಳ ವರ್ಣನೆ. ದೊರೆ ವಸುಷೇಣ (16), ಮತ್ತು ಅವನ ಅಯ್ನೂರ್ವರರಸಿಗಳೊಳಗೆ ಅಗ್ರಗಣ್ಯೆಯಾದ ಸುನಂದೆ ಇವರ ವರ್ಣನೆ (18)-ಅವರ ಅನುರಾಗ ನಿರೂಪಣ (19-20) ದೊರೆಯ ಗುಣಕಥನ (21-23) ಸುದರ್ಶನ ನೆಂಬವನು ಮಿತ್ರನಾದ ಚಂಡಶಾಸನನು ಬರುತ್ತಿರುವುದನ್ನು ವಸುಷೇಣನಿಗೆ ತಿಳಿಸುವುದು —ಚಂಡಶಾಸನನು ಬಂದುದು (24)—ಪರಸ್ಪರಾಲಿಂಗನೆ, ಇಬ್ಬರೂ ಮಂದಿರಕ್ಕೆ ಬರುವುದು. ಅಲ್ಲಿ ವಿಶ್ರಾಂತಿ, ಉಪಚಾರ (25-27), ಭೋಜನ, ಬಡಿಸುವುದಕ್ಕೆ ಬಂದ ಸುನಂದೆಯ ಮೇಲೆ ಚಂಡಶಾಸನನಿಗೆ ಹುಟ್ಟಿದ ಕಾಮ, ಇವುಗಳ ನಿರೂಪಣ (28-29) ತನ್ನ ಅವಸ್ಥೆಯನ್ನು ಮಿತ್ರನಾದ ಸುದರ್ಶನನೊಡನೆ ಚಂಡಶಾಸನನು ಹೇಳಿಕೊಂಡುದು. (30, 31-32) ಆಕೆ ಬರುವ ಮಾರ್ಗವನ್ನು ಎದುರು ನೋಡುತ್ತಿದ್ದು ಆಕೆಯನ್ನು ಬಲವಂತದಿಂದ ಕೊಂಡೊಯ್ದುದು (43) ಸುನಂದೆಯು ಗೋಳಾಡುವುದು (45-48)—ದಾರಿಯಲ್ಲಿ ವಸುಷೇಣನ ಸಾಮಂತನಾದ ಸಿಂಹಚೂಡನು ಚಂಡಶಾಸನನ್ನು ಅಡ್ಡಿಮಾಡಿ ಅವನೊಡನೆ ಕಾದಾಡುವುದು—ಸಿಂಹಚೂಡನ ಸಾಹಸವರ್ಣನೆ—ಚಂಡಶಾಸನನು ಆತನ ತಲೆಯನ್ನು ಕತ್ತರಿಸಿ ಬಿಸುಟು ರಥವನ್ನು ಓಡಿಸಿ ತನ್ನ ದುರ್ಗವನ್ನು ಸೇರುವುದು (50-62). ವಸುಷೇಣನು ನಿರ್ದಿಷ್ಟ ಸ್ಥಳಕ್ಕೆ ಬಂದು, ಸುನಂದೆ ಮತ್ತು ಅತಿಥಿ ಚಂಡಶಾಸನ, ಇವರಿಬ್ಬರೂ ಬರುವುದನ್ನು ನಿರೀಕ್ಷಿಸುವುದು—ಆಗ ಅಗ್ರಮಹಿಷಿಯನ್ನು ಕೊಂಡೊಯ್ದ ವಾರ್ತೆಯನ್ನು ಪರಿಜನರು ಆತನಿಗೆ ತಿಳಿಸುವುದು—(63-66) ಕಿಂಕರ್ತ

ವ್ಯಥಾಮೂಢನಾಗಿ ವಸುಷೇಣನು ಮೂರ್ಛೆಹೋಗುವುದು (67)—ಆತನು ಉಜ್ಜೀವಿಸುವುದು, ನರ್ಮಸಚಿವರು ಆತನನ್ನು ಸಂತೈಸುವುದು. ವಿಯೋಗ ತಾಪದ ವರ್ಣನೆ (70-71)—ಧೈರ್ಯವನ್ನು ತಾಳಿ ವಸುಷೇಣನು ಸೈನ್ಯ ದೊಡನೆ ಹೊರಟದ್ದು—ಸಿಂಹಚೂಡನ "ಬೀಡುಂದಾಣವಾದ" ಮಾಣಿಕ್ಯ ಪುರವನ್ನು ಸೇರುವುದು. ಕತ್ತರಿಸಿ ಬಿದ್ದಿದ್ದ ಸಿಂಹಚೂಡನನ್ನು ಕಂಡುದು. (75)-ಅವನು ಚಂಡಶಾಸನನೊಡನೆ ಕಾದಿದ ಕಾಳೆಗದ ವರ್ಣನೆ (76-87) ಸಂಧ್ಯಾಕಾಲ ವರ್ಣನೆ (79)—ವಸುಷೇಣನು ವಿರೋಧಿಯ ದುರ್ಗವನ್ನು ಸೇರಿದುದು (80) ದುರ್ಗಕ್ಕೆ ಮುತ್ತಿಗೆ ಹಾಕುವುದು—ಕಗ್ಗತ್ತಲೆಯಾದುದು. ಕಾಳೆಗವನ್ನು ನಿಲ್ಲಿಸಿ ಉಭಯಪಕ್ಷದವರೂ ತಂತಮ್ಮ ಬೀಡನ್ನು ಸೇರುವುದು— ಚಂಡಶಾಸನನು ಈ ವಿರಾಮವೇಳೆಯಲ್ಲಿ ಸುನಂದೆಯು ಸೆರೆಮನೆಗೆ ಹೋಗಿ ಆಕೆಯನ್ನು ತನ್ನನ್ನು ವರಿಸುವಂತೆ ಪೀಡಿಸುವುದು (86-88)—ಸುನಂದೆ ಚಂಡಶಾಸನರ ಸಂವಾದ ನಿರೂಪಣ (89-96)—ಹೀಗೆ ಸಂವಾದವಾಗುತ್ತಿರು ವಾಗಲೇ ಬೆಳಗಾಗುವುದು (97-98).

## ದ್ವಾದಶಾಶ್ವಾಸಂ.

ಸುನಂದೆಯನ್ನು ಹೇಗಾದರೂ ವಶಮಾಡಿಕೊಳ್ಳಬೇಕೆಂದು ಚಂಡಶಾಸ ನನು ಇಂದ್ರಜಾಲವನ್ನು ಪ್ರಯೋಗಿಸಿ ಆಕೆಯ ಮುಂದೆ ಪ್ರಾಣಪ್ರಿಯನಾದ ವಸುಷೇಣನ ತಲೆಯು ಈಡಾಡುವಂತೆ ಮಾಡಿಸಿದುದು—ಆ ತಲೆಯನ್ನು ಕಂಡೊ ಡನೆ ಆಕೆಯ ಪ್ರಾಣಹೋದುದು (4-6) ಚಂಡಶಾಸನನೂ ಕೂಡಲೆ ಮೂರ್ಛಿತ ನಾದುದು.—ಅತ್ತ ವಸುಷೇಣನು ಸುನಂದೆಯ ಸ್ಥಿತಿಯನ್ನು ನೋಡಿ ತಾನು ಬದುಕಿ ಫಲವೇನೆಂದು ನಿರ್ವೇಗಪರನಾದುದು. (22-28) ಪಟ್ಟವನ್ನು ಮಗನಿಗೆ ಕಟ್ಟಿ ತಪಸ್ಸಿ ಹೋದುದು (29) ತಪಸ್ಸಿನ ವರ್ಣನೆ (32-39) ತಪಃಪ್ರಭಾವದಿಂದ ದೇವಲೋಕ ಸುಖಾಂಬುಧಿಯಲ್ಲಿ ಓಲಾಡುತ್ತಿದ್ದುದು (40-41)—ಅಲ್ಲಿ ವತ್ಸಕಾವತೀ ವಿಷಯದ ಆನಂದಪುರವನ್ನು ಆಳುತ್ತಿದ್ದ ಮಹಾಬಳನೆಂಬ ರಾಜನು ನಿರ್ವಿಣ್ಣನಾಗಿ ತಪಸ್ಸುಮಾಡಿ ದೇವಲೋಕವನ್ನೈದಿ ದೇವಲೋಕಶೇಖರನಾಗಿದ್ದುದು (42—43)

ಜಂಬೂದ್ವೀಪದ ಭರತಖಂಡದಲ್ಲಿರುವ ದ್ವಾರಾವತೀ ಪಟ್ಟಣದ ದೊರೆ ಯಾದ ವಸುಷೇಣನ, ಮತ್ತು ಜಯಾವತಿ, ಸೀತೆ ಎಂಬ ಆತನ ಪಟ್ಟಮಹಿಷಿ

ಯರ ವರ್ಣನೆ (44)—ಅವರಿಗೆ ಪುತ್ರನನ್ನು ಪಡೆಯಬೇಕೆಂಬ ಆಶೆ ಹುಟ್ಟಿದುದು. (49—54)—ಸೀತೆಗೆ ಷೋಡಶ ಸ್ವಪ್ನವಾದುದು (70)—ಆಕೆಯಲ್ಲಿ ಶಲಾಕಾ ಪುರುಷನಾದ ಚಕ್ರಧರನು ಹುಟ್ಟುವನೆಂಬುದೇ ಈ ಕನಸಿನ ಮುಖ್ಯಾರ್ಥ ವೆಂದು ದೊರೆಯು ಹೇಳಿದ್ದು (71)—ಜಯಾವತಿ ಜಠರದಲ್ಲಿ ಮಹಾಬಲನೇ ಬಲದೇವನಾಗಿ ಹುಟ್ಟಿದುದು (72—78)—ಈತನಿಗೆ - ಸುಪ್ರಭ, ಬಲಭದ್ರ, ರಾಮ ಎಂಬನ್ವರ್ಥ ನಾಮಗಳನ್ನಿಟ್ಟುದು. (80)—ಸೀತೆಗೆ ಪುತ್ರಜನನ— (81)—ವಸುಷೇಣನೇ ಈಕೆಯ ಗರ್ಭದಲ್ಲಿ ಜನಿಸಿದುದು. ಈತನಿಗೆ ಕೃಷ್ಣ, ಪುರುಷೋತ್ತಮ ಎಂಬ ಹೆಸರುಗಳನ್ನು ಕೊಟ್ಟುದು. ಅವರಿಬ್ಬರ ಬಾಲ ಕೇಳೀವರ್ಣನೆ (87).—ಅವರ ಗುಣಕಥನ (88—93).—

## ತ್ರಯೋದಶಾಶ್ವಾಸಂ.

ಅರ್ಧಚಕ್ರಿಯಾದ ದೈತ್ಯನ ಒಡ್ಡೋಲಗಕ್ಕೆ ನಾರದನು ಬಂದುದು (12) ದೈತ್ಯನು ಮುನಿಯನ್ನು ಸತ್ಕರಿಸಿದುದು. ನಾರದನು ರಾಮಕೃಷ್ಣರ ಪರಾಕ್ರಮ ವನ್ನು ವರ್ಣಿಸಿ ದೈತ್ಯನ ಕೋಪವನ್ನು ಹೆಚ್ಚಿಸಿದುದು (15,16,20—22) — ನಾರದನು ದ್ವಾರಾವತಿಗೆ ಬಂದುದು. ಕ್ಷೇಮವನ್ನು ವಿಚಾರಿಸಿದುದು (24–26) ದೈತ್ಯನ ಸ್ಥಿತಿಯನ್ನು ವರ್ಣಿಸಿದುದು (27)—ಅವನ ಅಹಂಕಾರ ಮತ್ತು ಅವನಿಂದ ದೇಶಕ್ಕೆ ಆಗುವ ಹಾನಿ, ಇವುಗಳ ನಿರೂಪಣ—ತಮ್ಮಿಂದ ಸರ್ವಾ ಭ್ಯುದಯವೆಂದು ಅವರನ್ನು ಸ್ತುತಿಸಿ ಅವರಿಗೆ ದೈತ್ಯನಲ್ಲಿ ವೈರವನ್ನು ಹೆಚ್ಚಿಸಿ ಹೊರಟುಹೋದುದು. (32,39,–40) ದೈತ್ಯನು ಸಂಧಿಗೆ ಬಂದರೂ ಒಪ್ಪದೆ ಯುದ್ಧಕ್ಕೆ ಹೊರಟುದು—ಯುದ್ಧವರ್ಣನೆ.

## ಚತುರ್ದಶಾಶ್ವಾಸಂ.

ಯುದ್ಧವರ್ಣನೆ—ಕಡೆಗೆ ಕೃಷ್ಣನು ಮಧುಕೈಟಭನ ತಲೆಯನ್ನು ಚಕ್ರ ದಿಂದ ಕತ್ತರಿಸಿ ವಿಜಯನಾದುದು.—ಬಲಭದ್ರನು ಕೃಷ್ಣನಿಗೆ ಪಟ್ಟವನ್ನು ಕಟ್ಟಿಸಿದುದು. ಅನಂತನಾಥನ ಪರಿನಿರ್ವಾಣ ಕಲ್ಯಾಣವರ್ಣನೆ. ಇಂದ್ರನು ಅನಂತನ ಪರಿನಿರ್ವಾಣ ಕಲ್ಯಾಣವನ್ನು ನೆರವೇರಿಸಿ ತನ್ನ ನೆಲೆಯನ್ನು ಸೇರಿ ದುದು. ಪಂಚಕಲ್ಯಾಣವರ್ಣನಾತ್ಮಕವಾದ ಈ ಕಾವ್ಯವನ್ನು ತಾನೇ ರಚಿಸಿದು ದಾಗಿ ಹೇಳುವುದು. ಕವಿಗುಣಕಥನ. ದೊರೆಯಾದ ನರಸಿಂಹನಿಗೆ ಕವಿಯು ಆಶೀರ್ವಾದ ಮಾಡುವುದು.

## ಪರಿಶಿಷ್ಟ ೪.

### ಅಭಿನವ ವಾದಿವಿದ್ಯಾನಂದನ ಕಾವ್ಯಸಾರದಲ್ಲಿ ಅನಂತನಾಥ ಪುರಾಣದಿಂದ ಉದ್ಧೃತವಾದ ಪದ್ಯಗಳ ಪಟ್ಟಿ.

---

| ಕಾವ್ಯಸಾರ. ಪದ್ಯಸಂಖ್ಯೆ. | | | | ಅ—ಪು ಆಶ್ವಾಸ ಮತ್ತು | ಪದ್ಯಸಂಖ್ಯೆ. |
|---|---|---|---|---|---|
| 40 | .. | .. | .. | I | 45 |
| 46 | .. | .. | .. | I | 42 |
| 47 | .. | .. | .. | I | 40 |
| 63 | .. | .. | .. | I | 50 |
| 92 | .. | .. | .. | III | 9 |
| 96 | .. | .. | .. | I | 85 |
| 112 | .. | .. | .. | I | 81 |
| 119 | .. | .. | .. | I | 82 |
| 128 | .. | .. | .. | I | 92 |
| 191 | .. | .. | .. | I | 106 |
| 220 | .. | .. | .. | XIII | 11 |
| 236 | .. | .. | .. | II | 9 |
| 237 | .. | .. | .. | XIII | 8 |
| 238 | .. | .. | .. | XIII | 9 |
| 241 | .. | .. | .. | XIII | 10 |
| 242 | .. | .. | .. | XIII | 7 |
| 249 | .. | .. | .. | III | 22 |
| 252 | .. | .. | .. | II | 7 |
| 253 | .. | .. | .. | III | 23 |
| 254 | .. | .. | .. | II | 6 |
| 268 | .. | .. | .. | II | 14 |
| 269 | .. | .. | .. | II | 16 |
| 270 | .. | .. | .. | III | 25 |
| 337 | .. | .. | .. | XII | 49 |

| ಕಾವ್ಯಸಾರ. ಪದ್ಯಸಂಖ್ಯೆ. | | | ಅ—ಪು ಅಶ್ವಾಸ ಮತ್ತು ಪದ್ಯಸಂಖ್ಯೆ. | |
|---|---|---|---|---|
| 342 | .. | .. | .. XII | 68 |
| 390 | .. | .. | .. II | 20 |
| 393 | .. | .. | .. II | 21 |
| 397 | .. | .. | .. II | 22 |
| 398 | .. | .. | .. II | 24 |
| 399 | .. | .. | .. II | 23 |
| 400 | .. | .. | .. II | 32 |
| 473 | .. | .. | .. XI | 85 |
| 474 | .. | .. | .. XI | 83 |
| 488 | .. | .. | .. XIV | 3 |
| 490 | .. | .. | .. XIV | 4 |
| 492 | .. | .. | .. XIV | 5 |
| 511 | .. | .. | .. II | 27 |
| 524 | .. | .. | .. XI | 75 |
| 573 | .. | .. | .. XII | 24 |
| 626 | .. | .. | .. VIII | 44 |
| 659 | .. | .. | .. VIII | 50 |
| 725 | .. | .. | .. VI | 84 |
| 732 | .. | .. | .. VII | 4 |
| 748 | .. | .. | .. I | 94 |
| 891 | .. | .. | .. VII | 69 |
| 927 | .. | .. | .. VII | 82 |
| 937 | .. | .. | .. VII | 83 |
| 945 | .. | .. | .. VII | 85 |
| 954 | .. | .. | .. VII | 87 |
| 967 | .. | .. | .. VIII | 4 |
| 972 | .. | .. | .. VIII | 2 |
| 984 | .. | .. | .. VIII | 9 |
| 997 | .. | .. | .. VIII | 55 |
| 998 | .. | .. | .. VIII | 57 |

## ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಅನಂತನಾಥಪುರಾಣದಿಂದ ಉದ್ಧೃತವಾದ ವಾಕ್ಯ ಮತ್ತು ಪದ್ಯ

| ಶಬ್ದಾನುಶಾಸನ. ಪುಟ | ಪಙ್ತಿ. | | ಅನಂತನಾಥಪುರಾಣ. ಆಶ್ವಾಸ. | ಪದ್ಯ. |
|---|---|---|---|---|
| 87 | 22 | .. .. .. | II | 60(d) |
| 401 | 15 | .. .. ... | XIII | 22 |

